# ರಾಜಯೋಗಿ

( ಐತಿಹಾಸಿಕ ಕಾದಂಬರಿ )

ಆನಂದಕಂದ

( ೩ನೆಯ ಮುದ್ರಣ )

ಮೇ ೧೯೪೦ ]

[ ಬೆಲೆ ೧ ರೂ.

# ಮುಡಿಪು

**ನಿನ್ನ ಕೈಯ ಸವಿದುತ್ತಿನೊಡನೆಯೆ**

**ನನ್ನ**

ಕತೆ-ಕಾದಂಬರಿಗಳನ್ನು ಬರೆಯಬಹುದಾಗಿದ್ದ

ಬುದ್ಧಿಯ ಬೀಜಕ್ಕೆ

**ತಕ್ಕ ಇನಿನೀರನ್ನುಣ್ಣಿಸಿದ**

**'ಅವ್ವಾ!'**

**ನಿನ್ನ**

**ಅಡಿಗಳಿಗಿದು ಮುಡಿಪಾಗಿರಲಿ!**

—ಬರೆದವ

# ಇದೇ ಲೇಖಕರ ಬೇರೆ ಗ್ರಂಥಗಳು

## ಅಚ್ಚಾದುವು

ಮುದ್ದಣ ಮಾತು .. .. ( ಕವನಸಂಗ್ರಹ )
ಅರುಣೋದಯ .. .. ( ,, )
ವಿರಹಿಣಿ .. .. ( ಗೀತಕವನಸಂಗ್ರಹ )
ಬಡತನದ ಬಾಳು .. .. ( ಕಥಾಸಂಗ್ರಹ )
ಸಂಸಾರಚಿತ್ರ .. .. ( ,, )
ನಮ್ಮ ಬದುಕು .. .. ( ,, )
ಸುದರ್ಶನ .. .. ( ಸಾಮಾಜಿಕಕಾದಂಬರಿ )
ಅಶಾಂತಿಪರ್ವ .. ( ಐತಿಹಾಸಿಕಕಾದಂಬರಿ )
ಕರ್ನಾಟಕ ಜನಜೀವನ .. ( ಸಂಶೋಧನಗ್ರಂಥ )
ಹಳ್ಳಿಗರ ಹಾಡು .. ( ಜನಪದಸಾಹಿತ್ಯವಿಮರ್ಶೆ )
ಶ್ರೀಬಸವಣ್ಣನವರು .. ( ಮಕ್ಕಳಿಗಾಗಿ ಚರಿತ್ರೆ )
ಭಾವಗೀತ .. ( ಹರಿದಾಸ-ಶಿವಶರಣರ ಗೀತ ಸಂಗ್ರಹ )

## ಬೇಗನೆ ಅಚ್ಚಾಗಬೇಕಾದುವು

ಒಡನಾಡಿ .. .. .. ( ಕವನಸಂಗ್ರಹ )
ಕಾರಹುಣ್ಣಿವೆ ! .. .. ( ,, )
ಹಾಳುಹಳ್ಳಿ .. .. ( ಸಾಮಾಜಿಕ ಕಾದಂಬರಿ )

# ಮುನ್ನುಡಿ

( ಮೊದಲನೆಯ ಆವೃತ್ತಿಗಾಗಿ ಬರೆದುದು )

'ಐತಿಹಾಸಿಕ ಕಾದಂಬರಿ' ಎಂದೊಡನೆಯೆ 'ಯಾವುದರ ಭಾಷಾಂತರ?' ಎಂದು ಕೇಳುವುದು ನಮ್ಮಲ್ಲಿ ರೂಢವಾಗಿದೆ. ಈ ರೂಢಿಗೆ ಕಾರಣವನ್ನು ಹೇಳುವುದು ಈಗ ಬೇಕಾಗಿಲ್ಲ; 'ಇದು ಇನ್ನಾವುದರ ಭಾಷಾಂತರವಲ್ಲ; ತೀರ ಸ್ವತಂತ್ರವಾಗಿ ಬರೆದ ಕಾದಂಬರಿ' ಎಂಬುದನ್ನು ಮಾತ್ರ ಹೇಳಬೇಕಾಗಿದೆ.

'ಫರನಾವ್ಹೋ ನುನೀರ್ಝ್' ಎಂಬ ಪೋರ್ತುಗೀಝ್ ಪ್ರವಾಸಿಯು ವಿಸ್ತೃತವರದಿಯಲ್ಲಿ ದೊರೆತಿರುವ ಐತಿಹಾಸಿಕ ಘಟನೆಯೊಂದು ಈ ಕಾದಂಬರಿಗೆ ವಸ್ತುವನ್ನು ಒದಗಿಸಿಕೊಟ್ಟಿದೆ. 'ಸೋರ್ಸಿಸ್ ಆಫ್ ವಿಜಯನಗರ ಹಿಸ್ಟ್ರಿ' ಎಂಬ ಪುಸ್ತಕದೊಳಗಿದ್ದ ವಿರೂಪಾಕ್ಷರಾಯನ ಕಾಲದ ಶಾಸನ, ಕಾವ್ಯ, ನಾಟಕಗಳ ಬೇರೆ ಬೇರೆ ಭಾಗಗಳು ವಸ್ತುವಿನ ಬೆಳೆವಣಿಗೆಗೆ ಸಹಾಯವನ್ನು ಮಾಡಿವೆ.

ಪಾತ್ರಗಳ ವಿಚಾರದಲ್ಲಿ ಹೇಳಬೇಕೆಂದರೆ:— ವಿರೂಪಾಕ್ಷರಾಯ, ರಾಜಶೇಖರ, ಪೆದ್ದಣ್ಣ, ನರಸಿಂಹನಾಯಕ ಇವರೆಲ್ಲರೂ ಇತಿಹಾಸದಲ್ಲಿ ಕಂಡುಬರುವವರು. ಶಾಸನದ ಗಂಗಣಾರ್ಯ, ರಾಯಸದ ರಂಗಯ್ಯ, ಶಾಸನದ ವೀರಣ್ಣ ಈ ಹೆಸರುಗಳನ್ನು ಇದೇ ಈ ಇಮ್ಮಡಿ ವಿರೂಪಾಕ್ಷರಾಯನ ಶ್ರೀಶೈಲದ ತಾಮ್ರಪಟದೊಳಗೆ ಇದ್ದುವುಗಳನ್ನು ಎತ್ತಿಕೊಂಡಿದ್ದೇನೆ. ಕಾದಂಬರಿಯಲ್ಲಿ ಒಂದು ಪಾತ್ರವಾಗಿ ಬಾರದಿದ್ದರೂ ಆಗಾಗ ಹೆಸರು ಹೇಳಬೇಕಾಗಿ ಬಂದಿದ್ದ ಮಲ್ಲಿಕಾರ್ಜುನ ದೊರೆಯೂ ಐತಿಹಾಸಿಕನು. ಮಿಕ್ಕ ಪಾತ್ರಗಳೆಲ್ಲವೂ ಇತಿಹಾಸದಲ್ಲಿ ಕಂಡು ಬಾರದೆ ಇದ್ದುವುಗಳು.

ಮನೋಹರ ಗ್ರಂಥಮಾಲೆಯ ಸಂಪಾದಕರ ಒತ್ತಾಯವಿಲ್ಲದಿದ್ದರೆ, ಈ ಕಾದಂಬರಿಯು ಇನ್ನೂ ಕನಸಿನ ರಾಜ್ಯದಲ್ಲಿಯೆ ಇರಬಹುದಾಗಿದ್ದಿತೇನೊ! ಅವರು ಇದನ್ನು ಬರೆಯಿಸುವ—ಬೇಗನೆ ಪ್ರಕಟಿಸುವ ಭಾರವನ್ನು ಹೊತ್ತು ನಿಂತುದಕ್ಕಾಗಿ, ಅವರಿಗೆ ನನ್ನ ಹೃತ್ಪೂರ್ವಕ ಅಭಿನಂದನೆಗಳು.

ಸಾಧನಕೆರೆ, ಧಾರವಾಡ.
ಶಾ. ವಾ. ೧೮೫೭ನೆಯ ಜ್ಯೈ. ಶು. ೫
ಶನಿವಾರ

ಆನಂದಕಂದ

# ೨ನೆಯ ಆವೃತ್ತಿಗಾಗಿ ಮುನ್ನುಡಿ

ಮೊದಲನೆಯ ಆವೃತ್ತಿಯ ಪ್ರತಿಗಳು ತೀರಿ ಎರಡು ವರ್ಷಗಳು ಕಳೆದು ಹೋಗಿದ್ದರೂ, ಈ ಗ್ರಂಥದ ಎರಡನೆಯ ಆವೃತ್ತಿಯನ್ನು ಮುದ್ರಿಸಲಿಕ್ಕೆ ಅನುಕೂಲವೂ ಆಗಿರಲಿಲ್ಲ, ಧೈರ್ಯವೂ ಇರಲಿಲ್ಲ. ಆದರೆ ಈ ಪುಸ್ತಕಕ್ಕೆ ಸಾಕಷ್ಟು ಬೇಡಿಕೆ ಯಿದೆಯೆಂದು ಪುಸ್ತಕವ್ಯಾಪಾರಿಗಳು ಕೆಲವರು ಹೇಳಿದುದರಿಂದಲೂ, ಅಲ್ಲಿ ಇಲ್ಲಿ ಪಠ್ಯಪುಸ್ತಕವನ್ನಾಗಿ ಇದನ್ನು ಆರಿಸಿದುದರಿಂದಲೂ ಎರಡನೆಯ ಮುದ್ರಣಕ್ಕೊಂದು ಸರಿಯಾದ ಅವಕಾಶದೊರೆಯಿತು. ಈ ಅವಕಾಶವನ್ನು ಕಲ್ಪಿಸಿಕೊಟ್ಟ ಮಹನೀಯ ರೆಲ್ಲರಿಗೂ ಮನವಾರೆ ಅಭಿನಂದನೆಗಳನ್ನು ಸಲ್ಲಿಸುವೆನು.

'ರಾಜಯೋಗಿ' ಯಲ್ಲಿ ಒಂದು ಘಟ್ಟಕ್ಕೆ ಬಂದು ನಿಂತ ಕತೆಯು 'ಅಶಾಂತಿಪರ್ವ' ಎಂಬ ಹೆಸರಿನ ಇನ್ನೊಂದು ಕಾದಂಬರಿಯಲ್ಲಿ ಮುಂದುವರಿದು ಮುಗಿದಿದೆ. ನನಗೆ ದೊರೆತ—ಹತ್ತೆಂಟು ಸಾಲುಗಳಲ್ಲಿ ಮುಗಿದುಹೋದ—ಒಂದು ಐತಿಹಾಸಿಕ ಘಟನೆ, ಇವೆರಡೂ ಕಾದಂಬರಿಗಳಿಗೆ ವಸ್ತುವನ್ನು ಒದವಿಸಿಕೊಟ್ಟಿದೆ ಯಾದರೂ, ಎರಡನ್ನೂ ಎರಡು ಪ್ರತ್ಯೇಕ ಕಾದಂಬರಿಗಳೆಂದೂ ಭಾವಿಸಬಹುದಾಗಿದೆ; ಇದರಲ್ಲಿಯ ಮುಖ್ಯಪಾತ್ರಗಳೆ ಅದರಲ್ಲಿಯೂ ಮುಖ್ಯಪಾತ್ರಗಳಾಗಿ ಪರಿಪುಷ್ಟಿಗೊಂಡಿದ್ದು ಇದರಲ್ಲಿಯ ಕತೆಯೆ ಅದರಲ್ಲಿ ಮುಂದುವರಿದುದರಿಂದ, ಎರಡೂ ಕಾದಂಬರಿಗಳನ್ನು ಒಂದೆ ಕಥೆಯ ಪೂರ್ವಾರ್ಧ-ಉತ್ತರಾರ್ಧಗಳೆಂದೂ ಭಾವಿಸಬಹುದಾಗಿದೆ.

ಈ ಕಾದಂಬರಿಯಲ್ಲಿಯ ಹೇಮಾಂಬಿಕೆಯ ಪಾತ್ರ ಅದೇನೋ ಒಂದು ಬಗೆಯಲ್ಲಿ ಅಪೂರ್ಣವಾಗಿರುವುದೆಂದು ಕೆಲವರು ಅಭಿಪ್ರಾಯಪಟ್ಟರಂತೆ. ರಾಜಕೀಯ ತತ್ತ್ವವೊಂದರ (ಪ್ರತಿಯೋಗಿ ಸಹಕಾರಿತೆಯ) ಪ್ರತೀಕವನ್ನಾಗಿ ಹೇಮಾಂಬಿಕೆಯ ಪಾತ್ರವನ್ನು ನಿರ್ಮಿಸಿರುವುದರಿಂದ, ಸೆರೆಮನೆಯಲ್ಲಿ ಬಿದ್ದೊಡನೆಯೆ ಆಕೆಯ ಕ್ರಿಯಾಶಕ್ತಿ ನಿಂತುಹೋಗುವುದು ಸಹಜವೆ ಆಗಿದೆ. ಮೊದಲಿಗೆ ಕಂಡ ಅವಳ ಕ್ರಿಯಾಶಕ್ತಿ ತ್ಯಾಗಪೂರ್ಣವಾಗಿ ಇರುವುದರಿಂದ, ಹೆಚ್ಚು ಚೈತನ್ಯವುಳ್ಳುದಾಗಿ ತೋರುವುದು. ಅದೇ ಚೈತನ್ಯವನ್ನು ಮುಂದೆಯೂ ಅಪೇಕ್ಷಿಸುವವರಿಗೆ ಆಕೆಯ ಪರಿಸ್ಥಿತಿ ಅದನ್ನು ಅಸಾಧ್ಯವಾಗಿಸುವುದು. ವಿರೂಪಾಕ್ಷ ರಾಯನ ಸಾವಿನ ವರೆಗೆ ಆಕೆಯ ವ್ಯಕ್ತಿತ್ವಕ್ಕೆ ಅವಕಾಶವೆ ಇಲ್ಲದಂತಾಗಿದೆ. ಎಂತಲೆ ಆ ಪಾತ್ರ ಅಪೂರ್ಣವೆಂದು ಸ್ಥೂಲದೃಷ್ಟಿಗೆ ಎನಿಸುವುದು ಸಹಜ.

ಅತ್ಯಲ್ಪ ಅವಕಾಶದಲ್ಲಿಯೆ ಈ ಪುಸ್ತಕವನ್ನು ಮುದ್ರಿಸಿಕೊಟ್ಟು ಉಪಕಾರ ಮಾಡಿದುದಕ್ಕಾಗಿ, ಕರ್ಣಾಟಕ ಪ್ರಿಂಟಿಂಗ್ ವರ್ಕ್ಸಿನ ಸಂಚಾಲಕರಿಗೆ ಹೃತ್ಪೂರ್ವಕ ಅಭಿನಂದನೆಗಳು.

ಧಾರವಾಡ<br>ತಾ. ೨೫-೫-೪೦

ಕನ್ನಡಿಗರ ಒಲವಿನ<br>**ಆನಂದಕಂದ**

# ರಾಜಯೋಗಿ

## ೧ನೆಯ ಪರಿಚ್ಛೇದ

“ಹೇಮಾ, ನಿನ್ನ ಕರೆಯು ಬರುವುದೇ ತಡ; ಹಾಗೆಯೆ ಹೊರಟು ಬಂದು ಬಿಟ್ಟೆ. ದೇವರು ಮನುಷ್ಯನಿಗೂ–ಹಕ್ಕಿಯಂತೆ–ರೆಕ್ಕೆಗಳನ್ನೇತಕ್ಕೆ ಕೊಡಲಿಲ್ಲವೊ....ಎಂದು ದಾರಿಯುದ್ದಕ್ಕೂ ಯೋಚಿಸುತ್ತಿದ್ದೆ ನೋಡು.’

“ಕುಮಾರ, ನಿಮ್ಮ ಮನಸ್ಸು ಆಕಾಶದಂತಹದು!”

“ಇದೇನು ಹೇಮಾ, ಧ್ವನಿಯಲ್ಲಿ ಅಳುವಿನ ಎಳೆತವೇಕೆ? ಮಾತಿನಲ್ಲಿ ಕಾತರದ ಮಿಡಿತವೇತಕ್ಕೆ?”

ಹೇಮಾಂಬಿಕೆಯ ಕಣ್ಣುಗಳೆರಡೂ ಕಂಬನಿಯ ಮುತ್ತುಗಳನ್ನು ಉಗುಳಲು ತೊಡಗಿದುವು. ಕಣ್ಣೋಟ ಕೆಳಕ್ಕೆ ತಗ್ಗಿ, ಮುಂಗೈಯನ್ನು ನೋಡಲು ತೊಡಗಿತು. ಕುಮಾರನು ಅಪ್ರತಿಭನಾಗಿ, ಪ್ರಶ್ನಾತುರ ದೃಷ್ಟಿಯಿಂದ ಆಕೆಯನ್ನು ನೋಡುತ್ತ ನಿಂತಲ್ಲಿಯೆ ನಿಂತುಕೊಂಡಿದ್ದನು.

ಶಾಲಿವಾಹನ ಶಕದ ೧೩೯೯ನೆಯ ವರ್ಷದ ಕಾರ್ತಿಕ ಪದ್ಯ ಪ್ರತಿಪದೆಯ ರಾತ್ರಿ. ವಿಜಯನಗರದ ಮನೆಮನೆಗಳಲ್ಲಿಯೂ ಮಠ–ಮಳಿಗೆಗಳಲ್ಲಿಯೂ ದೇವಮಂದಿರಗಳಲ್ಲಿಯೂ ಕಾರ್ತಿಕೋತ್ಸವದ ವಿವಿಧವರ್ಣದ ದೀಪಪಂಜಿಗಳು–ದೀಪಸ್ತಂಭಗಳು ವಿರಾಜಿಸುತ್ತ, ಪೂರ್ಣಚಂದ್ರನ ಶರತ್‌ಕಿರಣಗಳು ನಗರದ ವರೆಗೆ ಇಳಿದು ಬಾರದಂತೆ, ದೂರದಲ್ಲಿಯೆ ತಡೆದು ನಿಲ್ಲಿಸಿ ಬಿಟ್ಟಿವೆ. ರಾತ್ರಿ ಒಂದುವರೆ ಪ್ರಹರ ಕಳೆದು ಹೋಗಲು ಬಂದಿದ್ದರೂ, ಬೀದಿಬೀದಿಗಳಲ್ಲಿ ಅಲೆದಾಡುವ ಜನರ ಕಲಕಲಾಟಕ್ಕೇನೂ

ದೈನ್ಯದ ನೋಟದೊಂದಿಗೆ ಹೇಮಾಂಬಿಕೆ ನುಡಿದಳು.

" ನಿಮಗಾಗಿ ಆಡಿದ ಮಾತುಗಳಲ್ಲ ಕುಮಾರ, . . . . ಇವು. "

" ಹಾಗಾದರೆ ಏನು ಸಂಗತಿ ?"

" ಬಿಚ್ಚು ಮಾತಿನಲ್ಲಿಯೆ ಹೇಳಬೇಕೇ ? ನಾನು . . ನಿಮಗೆ. . . . 'ಚಿಕ್ಕಮ್ಮಾಜಿ' ಯಾಗುವ ಸಂದರ್ಭ ಒದಗಿಬಂದಿದೆ!"

" ಚಿಕ್ಕಮ್ಮಾಜಿ....! "

" ಸುಳ್ಳಲ್ಲ ಕುಮಾರ, ಮಹಾರಾಜರು ನನ್ನನ್ನು ಮದುವೆಮಾಡಿಕೊಳ್ಳಲು ಆತುರರಾಗಿದ್ದಾರೆ; ತಂದೆಯವರು ತುಂಬ ಸಂತೋಷದಿಂದ ಕೊಡಲು ಸಿದ್ಧರಾಗಿದ್ದಾರೆ. ಸಮ್ರಾಟನ ಮಾವಂದಿರಾಗಿ ಮೆರೆಯ ಬಹುದಾದ ಸುಯೋಗವನ್ನು ಯಾರು ಕಳೆದುಕೊಂಡಾರು ! "

ಹೇಮಾಂಬಿಕೆಯು ಮುಖತಗ್ಗಿಸಿ ಕಂಬನಿಗರೆಯಲು ತೊಡಗಿದಳು. ನಿರುಪಾಯದ ಸ್ವರದಲ್ಲಿ ರಾಜಶೇಖರನು ಮಾತನಾಡಿದನು:

" ನಿನ್ನ ಮೇಲೆಯೂ ಶನಿಯ ವಕ್ರದೃಷ್ಟಿ ಬಿದ್ದಿತೇ ಕೊನೆಗೆ ! ನೋಡು ಹೇಮಾ, ನಿನಗೆ ನಾನು ಆಗಾಗ ಹೇಳುತ್ತಿರಲಿಲ್ಲವೆ—ಚಿಕ್ಕಪ್ಪಾಜಿಯ ಕಣ್ಣಿಗೆ ಬೀಳುವ ಸಂದರ್ಭವನ್ನು ತಂದುಕೊಳ್ಳಲಾಗದೆಂದು ? ಈಗ ನಿನ್ನನ್ನವರು ಎಲ್ಲಿಯಾದರೂ ಕಂಡರೇನು ? ಕಂಡಿರಲೆಬೇಕು ! "

" ಕಾಣುವುದೇನು ? ಹಸು ತಾನಾಗಿಯೆ ಹುಲಿಯ ಗುಹೆಯೊಳಕ್ಕೆ ನುಗ್ಗಿದಂತಾಯಿತು. "

" ಹಾಗೇತಕ್ಕೆ ಆಯಿತು ? "

ಉಕ್ಕಿಬರುತ್ತಿರುವ ಅಳುವಿನೊಂದಿಗೆ ಹೇಮಾಂಬಿಕೆ ಹೇಳಲಾರಂಭಿಸಿದಳು :

" ನಿನ್ನೆ ಕಾರ್ತಿಕ ಪೌರ್ಣಿಮೆಯಲ್ಲವೆ ? ಅಂತಃಪುರದಲ್ಲಿ ಮಹಾರಾಣಿಯವರು ತ್ರಿಪುರೇಶ್ವರಿಯ ಪೂಜೆಯನ್ನು ಮಾಡಿಸಿದ್ದರು. ಅರಮನೆಯಿಂದ ನಮಗೂ ಔತಣವಿದ್ದಿತು; ಉತ್ಸವ ನೋಡಬೇಕೆಂಬ ಉಬ್ಬಿನಲ್ಲಿ, ನಿಮ್ಮ ಎಚ್ಚರಿಕೆಯ ಮಾತುಗಳನ್ನು ಮರೆತುಬಿಟ್ಟೆ ; ತಾಯಿಯೊಂದಿಗೆ ನಾನೂ ಅರಮನೆಗೆ ಹೋದೆ. "

" ಸರಿ! ಈ ಅಂತಃಪುರದ ಪೂಜೆ–ವ್ರತಗಳ ಪರಿಣಾಮವು ಯಾವ ಕಾಲಕ್ಕೆ–ಯಾರಿಗೆ–ಎಂತಹ ಫಲ ಕೊಟ್ಟೀತೆಂಬುದರ ನಿಯಮವೇ ಇಲ್ಲದಂತಾಗಿದೆ. ಈ ವ್ರತ-ಪೂಜೆಗಳಿಂದ ಮಹಾರಾಣಿಯವರಿಗೆ ಸತ್‌ಫಲ ದೊರೆಯುವುದು ಎಂತಹ ಮಾತೊ, ಅದರ ದುಷ್ಟಫಲವನ್ನು ಮಾತ್ರ ಹಲವುಜನ ಕುಲವಧುಗಳು ಅನುಭವಿಸಬೇಕಾಗುತ್ತಿದೆ. ಈ ಪೂಜೆ-ವ್ರತಗಳ ಪ್ರಸಂಗಗಳೆಂದರೆ ಚಿಕ್ಕಪ್ಪಾಜಿಗೆ ಬೇಟೆಯ ಸಂದರ್ಭಗಳಾಗಿ ಪರಿಣಮಿಸುತ್ತಿವೆ. ಹೇಮಾ, ಅವರು ಬಿಟ್ಟ ಬಾಣವೀಗ ನನ್ನ ನಿನ್ನ ಬದುಕನ್ನು ಸೂರೆಮಾಡುವುದಕ್ಕೆ ಸುಯ್‌ಗುಡುತ್ತ ಬರುವುದರಲ್ಲಿದೆ! "

" ಇದಕ್ಕೆ ಪ್ರತಿಯಾಗಿ ಉಪಾಯವನ್ನೇನೂ ಮಾಡುವಂತಿಲ್ಲವೆ ? "

" ನಿನ್ನ ತಂದೆಯೊಡನೆ ಮಾತನಾಡಿ ನೋಡುತ್ತೇನೆ ಹೇಮಾ ! "

" ನಿಮ್ಮ ಪ್ರಯತ್ನ ನಿಷ್ಫಲವಾಗದಿರದು; ಹೇಳಿ ಕೇಳಿ ಕೋಶಾಧಿಕಾರಿಗಳವರು; ಜಡವಾದ ಹೊನ್ನು ಹಣವನ್ನು ನೋಡಿ ನೋಡಿ, ಅವರ ಮನಸ್ಸು, ಬುದ್ಧಿ, ಹೃದಯ ಎಲ್ಲವೂ ಜಡವಾಗಿ ಹೋಗಿದೆ. ಅಲ್ಲಿ ಯಾವ ತರ್ಕಗಳೂ ಕೆಲಸಮಾಡಲಾರವು. ಯಾವ ಭಾವವೂ ಜಾಗ್ರತಿಗೊಳ್ಳದಷ್ಟು ಅವರ ಅಂತಃಕರಣ ಬಧಿರವಾಗಿದೆ. ದೊರೆಯ ಮಾವನಾಗಲಿರುವ ಹಿಗ್ಗು ಅವರನ್ನು ಹುಚ್ಚರನ್ನಾಗಿ ಮಾಡಿದೆ. "

" ಹಾಗಾದರೆ ಇನ್ನಾವ ಪ್ರತೀಕಾರವೂ ಇದಕ್ಕಿಲ್ಲವೇ ? "

" ಹೀಗೆ ಕೇಳುವ ಬಾರಿ ನಿಮ್ಮದು ಬಂದಿತೇನೊ ಈಗ ! "

ಕೆಲವು ನಿಮಿಷಗಳ ವರೆಗೆ ಇಬ್ಬರೂ ವಿಚಾರಮೂಢಭಾವದವರಾಗಿ ಮಾತನಾಡದೆ ಕುಳಿತಿದ್ದರು. ಬಳಿಕ ನಿಡಿದಾದ ಬಿಸಿಯುಸಿರಿನೊಂದಿಗೆ ರಾಜಶೇಖರನು ಮಾತನಾಡಲು ತೊಡಗಿದ:

" ತೊಂದರೆಗಳು ಎಲ್ಲ ಕಡೆಯಿಂದಲೂ ನನ್ನನ್ನು ಸುತ್ತಿಕೊಂಡು ಬರುತ್ತಲಿವೆ. ಒಂದು ಕಡೆಗೆ ಕೆರೆಯಾದರೆ ಇನ್ನೊಂದು ಕಡೆಗೆ ದರಿ; ಹಿಂಬದಿಗೆ ಹುಲಿಯಹಿಂಡು ಗರ್ಜಿಸುತ್ತ ನಿಂತಿದ್ದರೆ ಮುಂಗಡೆಯಲ್ಲಿ ಹಾವುಗಳು ಹೆಡೆಯೆತ್ತಿ ಫೂತ್‌ಕರಿಸುತ್ತಲಿವೆ. ನಾನೀಗ ಮಾಡಬೇಕಾದುದೇನೋ ತಿಳಿಯದವನಾಗಿದ್ದೇನೆ. ಸತ್ತ್ವಪರೀಕ್ಷೆಯ ಪ್ರಸಂಗಗಳೆಂದರೆ

ಇಂತಹವುಗಳೇ ಹೇಮಾ! ಮನುಷ್ಯನ ಸ್ವಸ್ವರೂಪದರ್ಶನ ಇಂತಹ ಸಂದರ್ಭಗಳಲ್ಲಿಯೆ ಆಗುತ್ತಿರುವುದು. ಈಗ ನೋಡು, ನಿನ್ನನ್ನು ನಾನು ಕರೆದುಕೊಂಡು ಇನ್ನೆಲ್ಲಿಗಾದರೂ ಹೊರಟುಹೋಗುವೆನೆಂದರೆ, ಆ ಅವಿವೇಕಿಗಳ ದೊರೆ, ನಿಮ್ಮ ಮನೆತನದ ಮೇಲೆ ಮುಳ್ಳೇರಿಸಿ ಬಿಡಬಹುದು. ಅದೂ ಹೋಗಲಿ, ನಾನೀಗ ವಿಜಯನಗರವನ್ನು ಬಿಟ್ಟುಹೋಗಬೇಕಾದರೂ ಹೇಗೆ ? ಚಿಕ್ಕಪ್ಪಾಜಿಯವರ ಅವ್ಯವಸ್ಥಿತ ಆಡಳಿತದಿಂದ, ಕಟ್ಟಡವು ಶಿಥಿಲ ವಾಗುತ್ತ ನಡೆದಿರುವ ಈ ಕನ್ನಡಸಾಮ್ರಾಜ್ಯವು,ದೈನ್ಯದೃಷ್ಟಿಗಳಿಂದ ನನ್ನ ಕಡೆಗೇ ನೋಡುತ್ತಲಿದೆ. ಇದುವರೆಗೆ ರಾಜಕಾರ್ಯದಲ್ಲಿ ಕೈಹಾಕದೆ ನನ್ನ ಮಟ್ಟಿಗೆ ನಾನಿದ್ದಂತೆ ಇನ್ನು ಮೇಲೆ ಇರಲಿಕ್ಕೆ ಬಾರದಂತಾಗಿದೆ. ರಾಜ್ಯದಲ್ಲಿ ಒಂದೊಂದಾಗಿ ಪುಂಡು-ಬಂಡಾಯಗಳು ತಲೆದೋರುತ್ತ ಲಿವೆ. ಪ್ರಜೆಗಳಲ್ಲಿ ಅತೃಪ್ತಿ–ಅಸಮಾಧಾನಗಳು ಬೇರುಬಿಡಲಾರಂಭಿ ಸಿವೆ. ಯಾವ ವೇಳೆಗೆ ಎಂತಹ ಸಂದರ್ಭವೊದಗೀತೆಂಬುದರ ನಿಯಮ ವಿಲ್ಲವಾಗಿದೆ. ಮಹಾತ್ಮರಾದ ವಿದ್ಯಾರಣ್ಯರು ನೆಟ್ಟು ಬೆಳೆಯಿಸಿದ್ದ– ನಮ್ಮ ಮೊದಲಿಗರು ಲೆಕ್ಕವಿಲ್ಲದಷ್ಟು ಪ್ರಾಣಗಳನ್ನು ಬಲಿಯಾಗಿ ತೆತ್ತು, ದೇಹರಾಶಿಗಳ ಗೊಬ್ಬರವನ್ನು ಹಾಕಿ, ಕಣ್ಣೀರ ಮಳೆಯನ್ನು ಸುರಿಸಿ ಸುರಿಸಿ, ಬಲಿಸಿಕೊಂಡು ಬಂದ— ಈ ಸುಂದರ ಸಾಮ್ರಾಜ್ಯವೃಕ್ಷಕ್ಕೆ, ನಮ್ಮ ಕಾಲವೀಗ ಕೊಡಲಿಯನ್ನೆತ್ತಿಕೊಂಡು ನಿಂತಿದೆ. ಇದನ್ನು ಕಣ್ಣಿಂದ ನೋಡುತ್ತ ಕೈಮುಚ್ಚಿಕೊಂಡಿರುವುದಕ್ಕೆ, ನನ್ನಲ್ಲಿರುವ ಸಾಮ್ರಾಜ್ಯ- ನಿಷ್ಠೆಯು ಒಪ್ಪಿಗೆ ಕೊಡಲಾರದಾಗಿದೆ. ಹೇಮಾ, ನಿನಗಾಗಿ ಸಾಮ್ರಾಜ್ಯ ವನ್ನು ಮರೆಯಲೇ, ಸಾಮ್ರಾಜ್ಯಕ್ಕಾಗಿ ನನ್ನ ಜೀವದ ಜೀವವಾದ ನಿನ್ನನ್ನು ತೊರೆಯಲೇ ? ನನಗೊಂದೂ ತಿಳಿಯದಾಗಿದೆ. . ”

ಹೇಮಾಂಬಿಕೆಯ ನೇತ್ರರು ರಭಸದಿಂದ ಹರಿದಾಡುತ್ತಿರುವುದೂ, ನಿದಾನವಾಗಿ ಉಸಿರು ಇಕ್ಕುತ್ತ ಕುಳಿತ ಆಕೆಯ ಕೆಮ್ಮೊಗದಿಂದ ಕಂಡು ಬರುತ್ತಿದ್ದಿತು. ಒಂದು ಮಾತನ್ನೂ ಆಡದೆ, ರಾಜಶೇಖರನು ಹೇಳುತ್ತಿ ರುವುದನ್ನು–ಹೃದಯವನ್ನೆ ಕಿವಿಯನ್ನಾಗಿ ಮಾಡಿ–ಕೇಳುತ್ತಿದ್ದಳು. ಒಂದು ನಿಮಿಷ ತಡೆದುನಿಂತ ರಾಜಶೇಖರನು ಮತ್ತೆ ಹೇಳಲು ತೊಡಗಿದ :

"ಹೇಮಾ, ನನ್ನ ನಿನ್ನಂತಹ ವ್ಯಕ್ತಿಗಳ ಬಾಳು ಈ ಸಾಮ್ರಾಜ್ಯ ದೆದುರಿನಲ್ಲಿ ಹುಲ್ಲಿಗಿಂತ ಕೀಳೆಂದು ಎನಿಸುತ್ತಿದೆ ನನಗೆ. ಈಗ ಪ್ರತಿಯೊಬ್ಬ ಕನ್ನಡಿಗನೂ ಪ್ರತಿಯೊಬ್ಬ ವೈದಿಕ ಮತಾಭಿಮಾನಿಯೂ, ತನ್ನ ವೈಯ ಕ್ತಿಕ ಆಶೆ ಆಕಾಂಕ್ಷೆಗಳನ್ನೆಲ್ಲ ಈ ಸಾಮ್ರಾಜ್ಯಸಂರಕ್ಷಣೆಯ ಕಾರ್ಯ ಕ್ಕಾಗಿ ಹೋಮಿಸಿಬಿಡಬೇಕಾಗಿದೆ. ಇಂತಹ ಸಮಯದಲ್ಲಿಯೆ ನಿನ್ನ ದೊಂದು ತೊಡಕು ನನ್ನ ಕರುಳಿಗೆ ಬಲೆಯನ್ನು ಹಾಕಿ, ಬೇರೆ ಕಡೆಗೆ ಸೆಳೆದೊಯ್ಯುವುದರಲ್ಲಿದೆ ...."

ಮುಂದೆ ತಾನೇನು ಮಾತನಾಡಬೇಕೆಂಬುದು ರಾಜಶೇಖರನಿಗೆ ತಿಳಿಯದಾಯಿತು. ಅಸಹಾಯಭಾವದವನಾಗಿ, ನಿಸ್ಸತ್ವಜೀವದವ ನಾಗಿ, ಅದೆಷ್ಟೋ ವೇಳೆಯ ವರೆಗೆ ಸುಮ್ಮನೆ ಆಸನದಲ್ಲಿ ಕುಳಿತುಕೊಂ ಡ್ಡಿದ್ದನು. ಹೇಮಾಂಬಿಕೆಯು ಯೋಚನೆಯ ಉಯ್ಯಾಲೆಯ ಮೇಲೆ ಕುಳಿ ತುಕೊಂಡು ಜೋಲಾಡುತ್ತ ಜೋಲಾಡುತ್ತ, ಯಾವುಯಾವುವೊ ನಿರ್ಣಯ-ನಿಶ್ಚಯಗಳ ಅಂಚುಗಳನ್ನು ನಿಲುಕಿ ನಿಲುಕಿ ಬರುತ್ತಿದ್ದಳು.

---

## ೨ನೆಯ ಪರಿಚ್ಛೇದ

ವಿಜಯನಗರದಲ್ಲಿ ಒಬ್ಬೊಬ್ಬ ಅಧಿಕಾರಿಗಳ-ಸಾಮಂತ ಮನ್ನೆ ಯರ ಮನೆಯೆಂದರೆ ಒಂದೊಂದೂ ಶ್ರೀದೇವಿಯ ಸುಖಾವಾಸಗಳು. ಪ್ರತಿಯೊಂದು ಪ್ರಾಸಾದದ ವಾಸ್ತುರಚನೆ ಒಂದೊಂದು ಮಾದರಿಯದು; ಪ್ರತಿಯೊಂದು ಸೌಧದ ಆಕೃತಿ ಒಂದೊಂದು ರೀತಿಯದು. ಕೋಶಾಧಿ-ಕಾರಿ ವೆಂಕಟನಾಯಕನ ಪ್ರಾಸಾದವನ್ನಂತೂ ದೇಶವಿದೇಶಗಳ-ಜನರು ಬಂದು ಬಂದು ನೋಡಿ ಹೋಗುತ್ತಿದ್ದರು.

ವೆಂಕಟನಾಯಕನ ತಂದೆ ಸಿರಿವಂತನಿದ್ದಷ್ಟು ಸವಿಗಾರನಹುದು. 'ಒಳ್ಳೆಯ ವಾಸ್ತುಶಾಸ್ತ್ರನಿಪುಣ' ಎಂದು ಆತನ ಕಾಲದ ಜನರಲ್ಲಿ ಖ್ಯಾತಿಯೊಂದಿದವನು. ಆ ಖ್ಯಾತಿ ಸುಳ್ಳಲ್ಲವೆಂಬ ಮಾತನ್ನು ಅವನು

ಕಟ್ಟಿಸಿದ ಪ್ರಾಸಾದವು ಈಗಲೂ ಕೂಗಿ ಹೇಳುವಂತಿರುವುದು. ವೆಂಕಟ ನಾಯಕನ ತಂದೆ ತನ್ನ ಮಂದಿರರಚನೆಗಾಗಿ ಬೇಲೂರತ್ತಕಡೆಯಿಂದ ಬಲ್ಲಿದರಾದ ಒವಜರನ್ನು ಕರೆಯಿಸಿಕೊಂಡು, ಆಕಾರದಲ್ಲಿ ಕಿರಿಯದೆನಿಸಿದರೂ ಅರಮನೆಗಿಂತ ಮಿಗಿಲೆನಿಸುವಂತೆ ಮನೆಯನ್ನು ಕಟ್ಟಿಸಿದನು. ಮಗನಾಗಿ ಹುಟ್ಟಿದುದರಿಂದ ಆ ತಂದೆಯ–ಗುಣಗಳಿಗಲ್ಲದಿದ್ದರೂ–ಅಧಿಕಾರಕ್ಕೆ, ಆಸ್ತಿಗೆ, ಅದರೊಡನೆಯೆ ಕಲೆಯ ನೆಲೆಯಾದ ಈ ಮನೆಗೆ ವೆಂಕಟನಾಯಕನು ಅಧಿಕಾರಿಯಾಗಿದ್ದನು.

ತನ್ನ ಮನೆಯನ್ನು ನೋಡಲಪೇಕ್ಷಿಸಿ ಬರುವವರಿಗೆಲ್ಲ ವೆಂಕಟನಾಯಕನು ತುಂಬ ಆನಂದಾಭಿಮಾನಗಳಿಂದ ನೋಡಲು ಒಪ್ಪಿಗೆ ಕೊಡುತ್ತಿದ್ದ. ಆದರೆ "ಇವರೆಲ್ಲ ಇಲ್ಲಿಗೆ ಬಂದು ನೋಡುವರಾದರೂ ಏನು? ನೋಡಿ ಮಾಡುವರಾದರೂ ಏನು? ಎಲ್ಲವೂ ಕುರಿಯ ಮಂದೆಯ ಸಮಾಚಾರ! ಕಲ್ಲುಗಳಲ್ಲಿ ಹಾಗೆ ಹೀಗೆ ತಗ್ಗು-ಹಿಗ್ಗುಗಳನ್ನು ಮಾಡಿದರೆ, ಗೋಡೆಯ ಮೇಲೆ ನಾಲ್ಕು ಗಿಜಿಬಿಜಿಯಾದ ಬಣ್ಣಬಣ್ಣದ ಗೆರೆಗಳನ್ನೆಳೆದಿದ್ದರೆ, ಅದರಲ್ಲಿ ಅಷ್ಟೊಂದು ನೋಡುವಂತಹದೇನಿದ್ದೀತು?" ಎಂದು ಜನರ ಹುಚ್ಚಿಗೆ ನಗುವನು. "ನಮ್ಮ ತಂದೆ ಬರಿಯೆ ಮನೆಯೊಂದನ್ನು ಕಟ್ಟಿಸುವುದಕ್ಕಾಗಿ ಹಣವನ್ನೆಷ್ಟು ಹಾಳುಮಾಡಿರುವರಲ್ಲ! ಎಲ್ಲವನ್ನೂ ಹಾಗೆಯೆ ಕೂಡಿಸಿಟ್ಟಿದ್ದರೆ, ಇನ್ನೂ ಎಷ್ಟು ಪೆಟ್ಟಿಗೆಗಳು ಹೊನ್ನಿನಿಂದ ತುಂಬಿರುತ್ತಿದ್ದುವೊ!" ಎಂದು ಆಗಾಗ ಯೋಚಿಸಿ ಯೋಚಿಸಿ ಒಳಗೊಳಗೆಯೆ ಮರುಗುವನು.

ನಾಯಕನ ಮನೆಯ ಉಪ್ಪರಿಗೆಯ ಮೇಲುನೆಲೆಯು—ದೂರದಿಂದ ನೋಡುವವರಿಗೆ—ರೆಕ್ಕೆಗಳನ್ನು ಬಿದಿರಿ, ಇದೀಗ ಹಾರಬೇಕೆಂದು ಹವಣಿಸುತ್ತಿರುವಹಂಸದಂತೆ ಕಾಣುತ್ತಿರುವುದು. ಮುಂಗಡೆಗೆ ಕಟ್ಟಿದ್ದ ಕೇತನ-ದಂಡವು, ಹಂಸವು ಬಾಯಲ್ಲಿ ಕಚ್ಚಿಹಿಡಿದ–ಕಮಲಸಹಿತವಾದ–ಮೃಣಾಳದ ಆಭಾಸವನ್ನು ಹುಟ್ಟಿಸುವುದು. ಅದರ ಕೆಳನೆಲೆಯ ಕಂಬೆಯೆಲ್ಲವನ್ನೂ ಬಳಸಿಕೊಂಡು ನಿಂತಿರುವ ಹೊಂಬಣ್ಣದ ತೆನೆಗಳು, ಮೇಲಿನ ಹಂಸಪಕ್ಷಿಗೆ ಆಸನವಾಗಿರಿಸಿದ ಸುವರ್ಣಕಮಲದ ಎಸಳುಗಳೆಂಬಂತೆ ಒಪ್ಪುವುವು.

ಹೆಬ್ಬಾಗಿಲನ್ನು ದಾಟಿ ಒಳಕ್ಕೆ ಹೋದಲ್ಲಿ ವಿಸ್ತಾರವಾದುದೊಂದು ಚೌಕು; ಅಲ್ಲಿಯ ಕಂಬ, ತೊಲೆ, ಬೋದುಗೆಗಳ ಮೇಲಿನ ಸುಳಿವು-ಬಳ್ಳಿಗಳೂ ಚಿತ್ರಪಟ್ಟಿಕೆಗಳೂ ವಿವಿಧ ಭಾವ-ಭಂಗಿಗಳನ್ನು ಸ್ಫುಟಗೊಳಿಸಿ ತೋರಿಸುವ ಸ್ತ್ರೀಪುರುಷರ ಭಾವ-ಪ್ರತಿಮೆಗಳೂ ನೋಟಕರ ಕಣ್ಣು-ಮನಗಳನ್ನು ಹಿಡಿದು ತಮ್ಮೆದುರು ನಿಲ್ಲಿಸಿಕೊಳ್ಳುವುವು. ಚೌಕಿನ ಪಶ್ಚಿಮ ದಿಶೆಗಿರುವ ನಡುಬಾಗಿಲಿಂದ ಒಳಕ್ಕೆ ಹೋದರೆ, ಅಲ್ಲಿ ಸುಂದರವಾದುದೊಂದು ಸಭಾಭವನವಿದೆ. 'ಕಲಾವಿಲಾಸ' ಎಂದು ಅದಕ್ಕೆ ಹೆಸರು. ಅಲ್ಲಿಯ ಗೋಡೆಯ ಮೇಲಿನ ಬಣ್ಣದ ಭಾವಚಿತ್ರಗಳು ಬಹುಜನ ಕಲಾವಿಮರ್ಶಕರನ್ನು ಬೆರಗುವಟ್ಟು ನಿಲ್ಲುವಂತೆ ಮಾಡಿವೆ.

ರಾಜಶೇಖರನು ಮಲ್ಲಿಕಾರ್ಜುನನಂತಹ ಕಲಾವಿದ–ಕವಿ–ಮಹಾರಾಜನ ಮಗನು. ಹುಟ್ಟಿನೊಡನೆಯೆ ಇಳಿದು ಬಂದ ಕಲಾಸಂಸ್ಕಾರ ಆತನದು. ಚಿಕ್ಕತನದಿಂದಲೂ ರಾಜಶೇಖರನಿಗೆ ಚಿತ್ರನಿರೀಕ್ಷಣೆಯಲ್ಲಿ ಆಸಕ್ತಿ; ಎಂತಲೆ ಅವನು ಯುವರಾಜನ ಪದವಿಯಲ್ಲಿರುವಾಗ ಕೂಡ ವೆಂಕಟನಾಯಕನ ಮನೆಗೆ ಆಗಾಗ ಬಂದು, ಚಿತ್ರನೋಡುವುದರಲ್ಲಿ ಪ್ರಹರ-ಪ್ರಹರಗಳನ್ನು ಕಳೆಯುತ್ತಿದ್ದನು. ಈ ಕಲಾಪ್ರೀತಿಯ ಹೊನಲಿನಲ್ಲಿ ತಾನು ಯುವರಾಜನೆಂಬ ಹೆಮ್ಮೆ-ಹಮ್ಮುಗಳನ್ನು ಹರಿಯೆ ಬಿಟ್ಟುಬಿಡುತ್ತಿದ್ದನು. ವೆಂಕಟನಾಯಕನ ಮನೆಯ ಜನರೊಂದಿಗೆ–ಸೇವಕಸೇವಕಿಯರೊಡನೆ ಕೂಡ–ಆತ್ಮೀಯತೆಯ ಸಲುಗೆಯಿಂದ ವ್ಯವಹರಿಸುತ್ತಿದ್ದನು. ಗಂಡುಮಗುವಿಲ್ಲದ ಗೌರಾಂಬಿಕೆಯ–ನಾಯಕನ ಹೆಂಡತಿ–ಅತೃಪ್ತಹೃದಯವು ರಾಜಶೇಖರನ ಸಲುಗೆಯ ಮಾತು-ಕತೆಗಳಿಂದ ಸ್ವಲ್ಪಮಟ್ಟಿಗೆ ತಣಿಯುತ್ತಿದ್ದಿತು.

ಮಲ್ಲಿಕಾರ್ಜುನರಾಯನು ಗತಿಸಿಹೋದಾಗ ರಾಜಶೇಖರನಿಗೆ ಆದಾಗಲೆ ಹದಿನೈದು ವರ್ಷಗಳು ತುಂಬಲು ಬಂದಿದ್ದುವು. ಅವನ ತಮ್ಮ–ವಿರೂಪಾಕ್ಷ ಅಥವಾ ಪೆದ್ದರಾಯನಿಗೆ ಹನ್ನೆರಡು ವರ್ಷಗಳು ತುಂಬಿದ್ದುವು. ಮಲ್ಲಿಕಾರ್ಜುನನ ಮಲತಮ್ಮನಾದ ಇಮ್ಮಡಿ ವಿರೂಪಾಕ್ಷನು ಸ್ವಶಕ್ತಿಯಿಂದ ವಿಜಯನಗರದ ಸಿಂಹಾಸನವನ್ನು ಆಕ್ರಮಿಸಿದೊಡನೆಯೆ ರಾಜಶೇಖರನು ಯುವರಾಜಪದದಿಂದ ದೂರನಾದನು. ಕೆಲವು ದಿನಗಳ

ವರೆಗಂತೂ ಆ ಅಣ್ಣತಮ್ಮಂದಿರಿಗೆ—ವಿರೂಪಾಕ್ಷರಾಯನ ಭೀತಿಗಾಗಿ—ತಲೆಮರಸಿಕೊಂಡು ತಿರುಗಾಡಬೇಕಾಯಿತು. ಆ ಮೇಲೆ ವಿಜಯನಗರಕ್ಕೆ ಬಂದಮೇಲೆ, ಅರಸನ ಸಂಬಂಧಿಕರಿಗೆ ದೊರೆಯುಬಹುದಾದ ಬತ್ಯವೂ ಮಾಸ-ಸನ್ಮಾನವೂ ಈ ಸಹೋದರರಿಗೆ ದೊರೆಯುತೊಡಗಿತು. ಅದೂ ಆಗಿನ ಮಂತ್ರಿಯಾದ ಸಾಳುವ ನರಸಿಂಹನಾಯಕನ ಮಧ್ಯಸ್ಥಿಕೆಯಿಂದ. ರಾಜ್ಯಪದಕ್ಕಿಂತಲೂ ಹೆಚ್ಚು ಸುಖಾವಹವಾದ ಜೀವನವು ಜಗತ್ತಿನಲ್ಲಿ ಬೇಕಾದಷ್ಟಿದೆ ಎಂದು ರಾಜಶೇಖರನಿಗೆ ಎನಿಸಿದ್ದಿತೇನೋ! ಆತನು ಇದ್ದ ತನ್ನ ಬದುಕಿಗಾಗಿ ಅತೃಪ್ತಿಯನ್ನೆಂದೂ ಹೊರಪಡಿಸುತ್ತಿರಲಿಲ್ಲ.

ರಾಜಶೇಖರನ ಯುವರಾಜಪದವು ಹೊರಟುಹೋಯಿತು; ಆದರೆ ನೈಸರ್ಗಿಕವಾಗಿ ಬಂದ ಕಲಾಪ್ರೀತಿ ಹೇಗೆ ಹೋಗುವುದು ? ಎಳೆಯತನದಿಂದಲೂ ಬಳೆದುಬಂದ ಸ್ನೇಹ ಎಲ್ಲಿ ಹೋಗುವುದು ? ಈಗಲೂ ವೆಂಕಟನಾಯಕನ ಮನೆಗೆ ಆಗಾಗ ಬರುವನು. 'ಕಲಾವಿಲಾಸ'ದ ಬೇರೆ ಬೇರೆ ಚಿತ್ರಗಳನ್ನು ನೋಡುವುದರಲ್ಲಿ ಸಮಾಧಿಸೌಖ್ಯವನ್ನು ಅನುಭವಿಸುವನು. ರಾಜಶೇಖರನು ಮೊದಲು ಮನೆಗೆ ಬರುತ್ತಿರುವಾಗ "ಯುವರಾಜ ತನ್ನ ಮನೆಗೆ ಬರುತ್ತಿದ್ದಾನಲ್ಲ !" ಎಂದು ವೆಂಕಟನಾಯಕನಿಗೆ ಧನ್ಯತೆಯೆನಿಸುತ್ತಿದ್ದಿತು. ಒಮ್ಮೊಮ್ಮೆ ಇಂತಹ ಧನ್ಯತೆಯ ಭರದಲ್ಲಿರುವಾಗ, ಅವನು ಮನಮನದಲ್ಲಿಯೆ ತಂದೆಗೆ ಕೃತಜ್ಞತೆಗಳನ್ನು ಸಲ್ಲಿಸುತ್ತಿದ್ದನು. ಯುವರಾಜಪದವನ್ನು ಕಳೆದುಕೊಂಡ ರಾಜಶೇಖರನು ಮನೆಗೆ ಬರಲು ತೊಡಗಿದಾಗ, ಅಂದಿನ ಧನ್ಯತೆಯಿಲ್ಲದಿದ್ದರೂ ಆತ್ಮೀಯರನ್ನು ಕಂಡಾಗಿನ ಆನಂದದ ಅನುಭವವು ವೆಂಕಟನಾಯಕನಿಗೆ ಆಗುತ್ತಿದ್ದಿತು. ಅವನು ರಾಜಶೇಖರನೊಂದಿಗೆ ತುಂಬ ಮಮತೆಯಿಂದ ಮಾತು-ಕತೆಯಾಡುವನು.

ಅಜ್ಜನ ರಸಿಕತನ, ಕಲಾಪ್ರೀತಿಯೆಲ್ಲವೂ ಹೇಮಾಂಬಿಕೆಯಲ್ಲಿ ಇಳಿದು ಬಂದಿದ್ದಿತು. 'ತಂದೆಯಂತೆ ಮಕ್ಕಳು, ಗುರುವಿನಂತೆ ಶಿಷ್ಯರು' ಎಂದಿರುವ ನಾಡಮಾತನ್ನು—ಆ ತಂದೆ ಮಗಳು ಇಬ್ಬರೂ—ಹುಸಿಗೊಳಿಸಿ ತೋರಿಸುವೆವೆಂದು ಪ್ರತಿಜ್ಞೆಮಾಡಿ ಭೂಮಿಗಿಳಿದು ಬಂದಿದ್ದರೇನೊ!

ವೆಂಕಟನಾಯಕನು ತನ್ನ ತಂದೆಯಂತಿರಲಿಲ್ಲ; ಹೇಮಾಂಬಿಕೆಯು ತನ್ನ ತಂದೆಯಂತಿರಲಿಲ್ಲ.

ರಾಜಶೇಖರನು ಹೇಮಾಂಬಿಕೆಯೊಂದಿಗೆ ಎಳೆಯನಾಗಿರುವಂದಿನಿಂದಲೂ ಹುಡುಗತನದ–ನಿರ್ವಿಕಾರಭಾವದ–ಸಲುಗೆಯಿಂದ ಮಾತನಾಡುತ್ತ ಬಂದವನು. ದಿನದಿನಗಳು ಮುಂದೆ ಸಾಗಿದಂತೆ, ಅವರಿಬ್ಬರ ಸಮಾನಶೀಲವು ಸ್ನೇಹಿತರನ್ನಾಗಿ ಮಾಡಿತು. ವಯಸ್ಸಿನೊಂದಿಗೆ ಸ್ವಾಭಾವಿಕವಾಗಿ ಇಬ್ಬರ ಸ್ನೇಹವೂ ಪ್ರಣಯದಲ್ಲಿ ಪರ್ಯವಸಾನಗೊಂಡಿತು. ವೆಂಕಟನಾಯಕರಿಗೆ ಇದಾವುದರ ಸುದ್ದಿಯೆ ಇರಲಿಲ್ಲ. ಗೌರಾಂಬಿಕೆಗೆ ಗೊತ್ತಾಗಿದ್ದಿತು; ಅದಕ್ಕೆ ಆಕೆ ತಡೆಯನ್ನು ಮಾಡದೆ, ಒಂದು ಬಗೆಯಿಂದ ಪ್ರೋತ್ಸಾಹವನ್ನೆ ಕೊಡುತ್ತಿದ್ದಳು.

ಮನೆಗೆ ಬಂದಾಗ ರಾಜಶೇಖರ-ಹೇಮಾಂಬಿಕೆ ಕುಳಿತು, ಬೇಕಾದಷ್ಟು ಮಾತನಾಡುವರು; ಯಾವುದಾದರೂ ವಿಷಯವನ್ನೆತ್ತಿ ಚರ್ಚೆ ಮಾಡುವರು; ಏನಾದರೂ ಆಟವನ್ನಾಡುವರು; ಕಾವ್ಯಗಳನ್ನೋದಿ, ಚಿತ್ರಗಳನ್ನು ನೋಡಿ, ವಿಮರ್ಶಮಾಡುವರು. ಇದಾವುದೂ ನಾಯಕನಿಗೆ ವಿಪರೀತವೆಂದು ಕಾಣುತ್ತಿರಲಿಲ್ಲ. ಗೌರಾಂಬಿಕೆಯನ್ನು ರಾಜಶೇಖರನು 'ಚಿಕ್ಕಮ್ಮಾಜಿ!' ಎಂದು ಪ್ರೀತಿಯಿಂದ ಕರೆಯುವನು. 'ತಮಗೆ ಮಗನೊಬ್ಬನಿದ್ದು ಅವನು ತಂಗಿಯೊಡನೆ ಸಲುಗೆಯಿಂದ ಮಾತನಾಡುತ್ತಿದ್ದರೆ, ನಾನೇನಾದರೂ ವಿಪರೀತಭಾವಿಸಬೇಕೇ' ಎಂಬ ವಿಚಾರವೆ ನಾಯಕನ ನಿಶ್ಚಿಂತತೆಗೆ ಸಾಕಾಗಿತ್ತು. ಇನ್ನೂ ಒಂದು ಸಂಗತಿಯೆಂದರೆ: ಇಪ್ಪತ್ತು ವರ್ಷದವಳಾದರೂ—ಹೇಮಾಂಬಿಕೆ ಏನೂ ತಿಳಿಯದ ಹಸುಗೂಸು....ಎಂದು ಅವನ ಭಾವನೆ. ತಮ್ಮೆದುರಿನಲ್ಲಿಯೆ ಹುಟ್ಟಿ ಬೆಳೆದ ರಾಜಶೇಖರನು ಇಪ್ಪತ್ತೈದು ವರ್ಷದವನಾಗಿದ್ದರೂ ಇನ್ನೂ ಹುಡುಗನೆಂದು ಆತನ ನಂಬುಗೆ. ಆದರೆ ರಾಜಶೇಖರ-ಹೇಮಾಂಬಿಕೆಯರ ಮನಃಸ್ಥಿತಿಗಳು ಎಲ್ಲಿಯ ವರೆಗೆ ಬಂದು ನಿಂತಿದ್ದುವೆಂಬುದನ್ನು ಹಿಂದಣ ಪರಿಚ್ಛೇದದಲ್ಲಿಯ ಅವರಿಬ್ಬರ ಮಾತು-ಕತೆಗಳಿಂದ ಯಾರೂ ಕಂಡುಕೊಳ್ಳಬಹುದಾಗಿದೆ.

ಮರುದಿನದ ಹಗಲು ಮೂರು ಪ್ರಹರ ಕಳೆದುಹೋಗಿದೆ. ವೆಂಕಟ-

ನಾಯಕ–ಗೌರಾಂಬಿಕೆ ಮಾತನಾಡುತ್ತ ಉಪ್ಪರಿಗೆಯ ಮೇಲುನೆಲೆಯ ವಿಶ್ರಾಂತಿಭವನದಲ್ಲಿ ಕುಳಿತುಕೊಂಡಿದ್ದಾರೆ.

"ನಮ್ಮ ಅದೃಷ್ಟ ನೋಡು ಗೌರಾ, ವಿಜಯನಗರದ ಸಮ್ರಾಟನ ಸಂಬಂಧಿಕರು ನಾವಾಗುವೆವೆಂಬುದು ಎಂದಾದರೂ ಕನಸು-ಮನಸಿನಲ್ಲಾದರೂ ಒಂದಿದ್ದಿತೇ ನಮಗೆ? ಇನ್ನೇನು! ನಿನ್ನ ಮಗಳು ಮಹಾ-ರಾಣಿಯಾಗುವಳು; ಅಂತಃಪುರದಲ್ಲೆಲ್ಲ ನಿನಗೆ ಹೆಚ್ಚಿನ ಮಾನಸನ್ಮಾನ ದೊರೆಯುವುದು."

"ಏನು ಮಾನವೋ, ಏನು ಸನ್ಮಾನವೋ, ನನಗೊಂದೂ ತಿಳಿಯದಂತಾಗಿದೆ. ನಿನ್ನೆಯಿಂದ ನೋಡುತ್ತಿದ್ದೇನೆ–ಹೇಮಾಂಬಿಕೆ ಹುಚ್ಚು ಹಿಡಿದಂತೆ ಮಾಡುತ್ತಿದ್ದಾಳೆ. ಊಟವಿಲ್ಲ, ಉಡುಗೆಯಿಲ್ಲ; ಬರಿಯ ಯೋಚನೆಯೆ ಯೋಚನೆ!"

"ಇನ್ನೂ ಚಿಕ್ಕ ಮಗು ಪಾಪ! ನಮ್ಮನ್ನು ಅಗಲಿರಬೇಕಾಗುವುದೆಂದು ಹೀಗೆ ಮಾಡುತ್ತಿರಬಹುದು. ನಾಳೆ ಮಹಾರಾಣಿಯ ವೈಭವವನ್ನು ಕಂಡಳೆಂದರೆ ಆಗವಳ ಯೋಚನೆ–ಪಾಚನೆ ಎಲ್ಲಾ ಎಲ್ಲಿ ಓಡಿ ಹೋಗಿ ಬಿಡುತ್ತದೆಯೊ ನೋಡುವೆಯಂತೆ. ಮಹಾರಾಜರು ನನ್ನನ್ನು ಕರೆಯಿಸಿ ಹೇಳುತ್ತಾರೆ: 'ನಿನ್ನ ಮಗಳನ್ನು ನನಗೆ ಮದುವೆಮಾಡಿ ಕೊಡದಿದ್ದರೆ ನಿನ್ನ ತಲೆ ನಿನ್ನ ಭುಜದ ಮೇಲೆ ಉಳಿಯಲಾರದು' ಎಂದು. ನನಗೆ ಅವರ ಮಾತನ್ನು ಕೇಳಿ ನಗೆ ಬಂದುಬಿಟ್ಟಿತು ನೋಡು ಗೌರಾ! ನಗೆ ಬಾರದೆ ಏನು ಮಾಡೀತು? 'ನೀನು ಅಮೃತವನ್ನು ಕುಡಿ, ಕುಡಿಯದಿದ್ದರೆ ನಿನ್ನನ್ನು ಪಾತಾಳದ ತಳಕ್ಕೆ ಚೆಲ್ಲಿಸುತ್ತೇನೆ' ಎಂದು ಹೇಳಿದಂತಹ ಮಾತೇ ಇದಲ್ಲವೇ? ಅಮೃತಪಾನವು ಯಾರಿಗೆ ಬೇಡವಾದೀತು?"

"ಒಬ್ಬರಿಗೆ ಅಮೃತವೆಂದು ತೋರುವುದು ಮತ್ತೊಬ್ಬರಿಗೆ ಕಹಿಯೆಣ್ಣೆಯೆನಿಸುವುದೋ ಏನೋ ಲೋಕದಲ್ಲಿ! ಮಹಾರಾಜರೊಡನೆ ಮದುವೆಯೆಂದರೆ ಹೇಮಾಂಬಿಕೆಗೆ ಬೇಡವಾಗಿದೆ. ತಮಗೆ ಗೊತ್ತಿಲ್ಲವೇನೊ! ಹೇಮೆಯದು ರಾಜಶೇಖರನ ವಿಷಯದಲ್ಲಿ ತುಂಬ ಆದರವಿದೆ.

"ಆದರವಿದ್ದರೆ ಇರಲಿ! ಅದಕ್ಕೆ ಯಾರು ಅಡ್ಡಿಮಾಡುವರು?"

"ಬರಿ ಆದರವಿಷ್ಟೆ ಅಲ್ಲ...."

"ಮತ್ತೇನು ಹಾಗಾದರೆ? ಆತನೊಡನೆ ಮದುವೆಯಾಗ ಬೇಕೆಂದು ಅವಳ ಅಪೇಕ್ಷೆಯೇನು? ಹುಚ್ಚು ಹುಡಿಗಿ! ಅವಳಿಗೇನು ತಿಳಿಯುವುದು? ದೊರೆಗಳಿಗೆ ಇನ್ನೂ ಮಕ್ಕಳಾಗಿಲ್ಲ; ನಾಳೆ ಹೇಮೆಯ ಹೊಟ್ಟೆಯಿಂದ ಮಗನೊಬ್ಬ ಹುಟ್ಟಿದರೆ ಈ ಕನ್ನಡ ಸಾಮ್ರಾಜ್ಯಕ್ಕೆಲ್ಲ ಅಧಿಕಾರಿಯಾಗಿ ಹುಟ್ಟುತ್ತಾನೆ. ಅದೃಷ್ಟವಿದ್ದರೆ, ಮೊಮ್ಮಗನ ತಲೆಯ ಮೇಲೆ ರಾಜಚ್ಛತ್ರ ಬಂದುದನ್ನು ನಮ್ಮ ಕಣ್ಣುಗಳೂ ಕಾಣಬಹುದು."

"ಒಂದು ವೇಳೆ ರಾಜಶೇಖರನೇ ಮುಂದಕ್ಕೆ ರಾಜನಾದರೆ....?"

"ರಾಜನಾದರೆ....! ಮಳೆಯ ನೀರು ಬಿಟ್ಟು ಮಂಜಿನ ನೀರಿಗೆ ಕೈಯೊಡ್ಡುವಂತಹ ಮಾತನ್ನಾಡುತ್ತಿದ್ದೀಯೆ ನೀನು."

"ತಾವು ಏನೆ ಹೇಳಬಹುದು; ನನಗೇನೊ ಎನಿಸುತ್ತಿದೆ–ನನ್ನ ಕಂದಮ್ಮನನ್ನು ಮಹಾರಾಜರಿಗೆ ಕೊಡಲಾಗದು–ಎಂದು. ಇಂತಹ ರಾಜರ ಮಹಾರಾಣಿಯಾಗಿ ಸುರಿದುಕೊಳ್ಳುವ ಭಾಗ್ಯವಾದರೂ ಅಷ್ಟ ರಲ್ಲಿಯೆ ಇದೆ!"

"ಏನೇ ಆದರೂ ನೋಡು, ಹೆಂಗುಸರೆಂದರೆ ನೀವು ಹೆಂಗುಸರೇ ಸರಿ! ನಿಮಗೆ ದೂರದ ದೃಷ್ಟಿಯೆ ಇರುವುದಿಲ್ಲ. ಅದೆಲ್ಲ ಹೋಗಲಿ ಬಿಡು! ಈಗ ನೀನು ವ್ರತ, ಪೂಜೆಯೆಂದು ಆಗಾಗ ಬ್ರಾಹ್ಮಣರಿಗೆ ದಾನ ಕೊಡುತ್ತೀಯಲ್ಲಾ.... ಅದೇತಕ್ಕೆ ಹೇಳು?"

"ಅದೇತಕ್ಕೆಂದರೇನು....? ದಾನ-ಧರ್ಮ ಮಾಡಿದರೆ ಪುಣ್ಯ ಬರುತ್ತದೆ."

"ಪುಣ್ಯ ಬಂದರೆ ಏನಾದಂತಾಯಿತು?"

"ಪುಣ್ಯಶಾಲಿಗಳನ್ನು ದೇವರು ಮೆಚ್ಚುತ್ತಾನೆ."

"ಹಾಂ! ಹೀಗೆ ಹಾದಿ ಹಿಡಿದು ಮಾತನಾಡು. ನೋಡು.... ರಾಜನೆಂದರೆ ಪ್ರತ್ಯಕ್ಷ ದೇವತೆಯು ಎಂದು ಎಲ್ಲ ನಮ್ಮ ಶಾಸ್ತ್ರಗಳೂ ಹೇಳುತ್ತವೆ. ಅಂತಹ ರಾಜನಿಗೆ ಕನ್ಯಾದಾನದಂತಹ ಶ್ರೇಷ್ಠದಾನವನ್ನು

ಮಾಡಿದರೆ ದೇವರನ್ನು ಸುಲಭವಾಗಿ ಮೆಚ್ಚಿಸಿಕೊಂಡಂತೆ ಆಗುವು ದಿಲ್ಲವೇ ?"

"ನನಗೆ ದೇವರು ಮೆಚ್ಚದಿದ್ದರೂ ಚಿಂತೆಯಿಲ್ಲ; ಹೇಮಾಂಬಿಕೆ ಯನ್ನು ಮಹಾರಾಜರಿಗೆ ಕೊಡಲಾಗದು !"

"ಈಗ ನಿನ್ನ ಮಾತನ್ನು ಕೇಳಿ ಕೊಡುವುದಿಲ್ಲವೆಂದು ಹೇಳಿದೆನೆನ್ನು, ನನ್ನ ತಲೆ ಉಳಿದೀತೇ? ಮಹಾರಾಜರ ಸ್ವಭಾವವನ್ನು ನೀನೇನು ಅರಿತಿಲ್ಲವೇ ?"

ಗೌರಾಂಬಿಕೆಗೆ ಈಗ ತಾನೇನು ಹೇಳಬೇಕೆಂಬುದು ತಿಳಿಯದಾ ಯಿತು. ಬಿಸಿಯುಸಿರುಬಿಡುತ್ತ ಸುಮ್ಮನೆ ಕುಳಿತಿದ್ದಳು. ವೆಂಕಟ ನಾಯಕನು ಗೆಲುವಿನ ಮುಖಭಾವದಿಂದ, ಉತ್ತರವನ್ನಪೇಕ್ಷಿಸುವ ನೋಟದಿಂದ ಹೆಂಡತಿಯ ಕಡೆಗೆ ನೋಡುತ್ತಿದ್ದನು. ಇದ್ದುದಿದ್ದ ಹಾಗೆಯೆ ಹೇಮಾಂಬಿಕೆ ಒಳಕ್ಕೆ ಬಂದಳು. ಆಗವಳ ಮುಖದ ದೈನ್ಯ-ಭಾವವು ಅಡಗಿ, ನಿಶ್ಚಿಂತತೆಯ ಬಗೆಯು ಗಟ್ಟಿಗೊಂಡು ನಿಂತಿದ್ದಿತು. ಚೆಂದುಟಿಯ ಮೇಲೆ ಮಿಂಚುತ್ತಿದ್ದ ಮುಗುಳುನಗೆಯೂ ತೊಳತೊಳ ಗುವ ಕಣ್ಣುಗಳ ನಿಲುನೋಟವೂ ಎಂದಿನವೇ ಆದರೂ, ಇಂದು ಅವುಗಳಿ ಗೊಂದು ಬಗೆಯ ಗಾಂಭೀರ್ಯದ ಒಪ್ಪಹಾಕಿದಂತೆ ಆಗಿದ್ದಿತು. ಒಳಕ್ಕೆ ಬಂದವಳೆ ತಂದೆಯನ್ನು ಕೇಳಿದಳು :

"ನಿಮ್ಮ ತಲೆ ಉಳಿಯದಂತಹ ಸಂದರ್ಭವೇನು ಅಪ್ಪಾಜಿ ?"

"ನೀನು ಮಹಾರಾಜರನ್ನು ಮದುವೆಮಾಡಿಕೊಳ್ಳಲು ಒಪ್ಪ ದಿದ್ದರೆ....?"

"ನಾನು ಸಂಕಲ್ಪವನ್ನೇ ಮಾಡಿಬಿಟ್ಟಿದ್ದೇನೆ, ಅಮ್ಮಾಜಿಗೆ ನನ್ನ ಸಂಕಲ್ಪ ತಿಳುಹಿ ಹೋಗಬೇಕೆಂದೇ ಈಗ ನಾನು ಇಲ್ಲಿಗೆ ಬಂದೆ."

ಗಾಬರಿಯ ದನಿಯಲ್ಲಿ ವೆಂಕಟನಾಯಕನು ಕೇಳಿದನು :

"ಏನೆಂದು ನಿನ್ನ ಸಂಕಲ್ಪ ಹೇಮಾ ?"

"ಮಹಾರಾಜರ ಹೊರತು ಇನ್ನಾರ ಕೈಯನ್ನೂ ಹಿಡಿಯ ಬಾರದೆಂದು."

"ನನ್ನ ಮುದ್ದುಮಗಳಲ್ಲವೆ ನೀನು ?" ಎಂದು ವೆಂಕಟ-

ನಾಯಕನು ಆನಂದ-ಸಂಭ್ರಮಭರದಲ್ಲಿ ಮಗಳ ತಲೆಯನ್ನಪ್ಪಿ ಮೈದಡ ಹುತ್ತಿರುವಾಗ, ಗೌರಾಂಬಿಕೆಯು ಕರುಣಾತುರದೃಷ್ಟಿಯಿಂದ ಹೇಮಾಂಬಿಕೆಯನ್ನು ಎವೆಯಿಕ್ಕದೆ ನೋಡುತ್ತಿದ್ದಳು.

---

## ೩ನೆಯ ಪರಿಚ್ಛೇದ

ಮಾಲ್ಯವಂತ ಬೆಟ್ಟದ ಆಗ್ನೇಯ ದಿಶೆಯ ಬಯಲಲ್ಲಿ ಒಂದು ಚಿಕ್ಕ ಕೈದೋಟ; ಕೈದೋಟದ ಮಧ್ಯದಲ್ಲಿಯೆ ಚಿಕ್ಕದೊಂದು ಪ್ರಾಸಾದ. ಒಪ್ಪಿಬ್ಬರು ತೋಟಿಗರು, ಮೂರು ನಾಲ್ಕು ಜನ ಸೇವಕರು ಇವರ ಹೊರತು ಹೆಚ್ಚಿನ ಗಲಾಟೆಯೇನೂ ಅಲ್ಲಿ ಕಾಣುತ್ತಿರಲಿಲ್ಲ. ಪ್ರಾಸಾದದ ಕಟ್ಟಡವನ್ನು ನೋಡಿದರೆ—ಹೊರಬದಿಯ ವ್ಯವಸ್ಥೆಯನ್ನು ನೋಡಿದರೆ—ಯಾವನಾದರೊಬ್ಬ ಸಾಮಾನ್ಯ ಸರದಾರನೊ ಸಾಮಂತನೊ ಇಲ್ಲಿ ವಸತಿಮಾಡಿಕೊಂಡಿರಬಹುದೆಂದು ತೋರುವುದು.

ರಾಜಶೇಖರನು ನಗರದ ಜನಸಮ್ಮರ್ದದಲ್ಲಿ ಇರಲಾರದವನಾಗಿ, ಇದ್ದುದರಲ್ಲಿಯೆ ಇದು ನಿವಾಂತಸ್ಥಳವೆಂದು, ಈ ಉಪವನಪ್ರಾಸಾದ ವನ್ನು ಆಯ್ದುಕೊಂಡು ಇಲ್ಲಿ ವಸತಿಮಾಡಿಕೊಂಡಿರುವನು. ಪ್ರಾಸಾದ ದೊಳಕ್ಕೆ ಹೋಗಿ ಮುಂಗಡೆಯ ಚೌಕನ್ನು ನೋಡಬೇಕು. ಒಂದೆಡೆ ಸಾಕಿದ ಗಿಳಿ—ಗೊರವಂಕಗಳು ತಮ್ಮ ತಮ್ಮ ಮನೆಗಳಲ್ಲಿ ಕುಳಿತು, ಸವಿ ಯಾಗಿ – ಮುದ್ದುಮುದ್ದಾಗಿ – ಏನೇನನೋ ಗಳಹುತ್ತಿರುವುವು. ಇನ್ನೊಂದೆಡೆ ಸೋಗೆನವಿಲುಗಳು ತಮ್ಮ ಗರಿಗಣ್ಣುಗಳನ್ನು—ಸೌಂದರ್ಯ ದೇವತೆಯ ಪ್ರಭಾವಲಿಯಂತೆ—ಹರಡಿ ಆಟವಾಡುತ್ತಿರುವುವು. ಮತ್ತೊಂ ದೆಡೆ ಪಾರಿವಾಳಗಳು ಜೊತೆಜೊತೆಯಾಗಿ ಕುಳಿತು 'ಘುಮ್ ಘುಮ್' ಎಂದು ಗರ್ಜಿಸುತ್ತಿರುವುವು. ಚೌಕಿನ ಮಧ್ಯದ ಅಂಗಣದಲ್ಲಿ ಹಸು, ಹುಲ್ಲೆ, ಗಂಡೆರಳೆ, ಸಾರಗ, ಕಡವೆ ಮೊದಲಾದ ಪ್ರಾಣಿಗಳು ತುಂಬು-ಮೈಯಿಂದ, ತಣಿದ ಮನದಿಂದ, ಹಾಗೆಯೆ ತಿರುಗಾಡುತ್ತಿರುವುವು. ಒಂದೆರಡು ಮೆಲುಕಾಡಿಸುತ್ತ ಮಲಗಿರುವುವು. ಚಿಕ್ಕ ಕಂದುಗಳು ನಾಲ್ಕೈದು ನೆಗೆದಾಡಿ, ಹಾರಾಡಿ, ತಮ್ಮ ಆಟಗಳನ್ನು ನೋಡಿರೆಂದು ಒಲವಿನ ನೋಟಗಳಿಂದ ತಾಯಂದಿರಿಗೆ ತಿಳುಹುವುವು. ಈ ಚೌಕೊಂದನ್ನೆ

ನೋಡಿಬಿಟ್ಟರೆ "ಇದೇನು ಪ್ರಾಣಿಶಾಲೆಯಿರಬಹುದೇ?" ಎಂದು ಯೋಚನೆ ಮಾಡುವಂತಿದ್ದಿತು.

ಚೌಕನ್ನು ದಾಟಿ ನೇರವಾಗಿ ಒಳಕ್ಕೆ ಹೋದರೆ ಸಣ್ಣದೊಂದು ಸಭಾಭವನವಿದೆ. ಅಲ್ಲಿ ಉತ್ತರದ ಕಡೆಯ ಭಾಗದಲ್ಲಿ ದೊಡ್ಡದೊಂದು ರತ್ನಗಂಬಳಿಯನ್ನು ಹಾಸಿದ್ದು, ಗೋಡೆಯುದ್ದಕ್ಕೂ ಹತ್ತಿಪ್ಪತ್ತು ಸಣ್ಣ ಸಣ್ಣ ಮೆಲುವಾಸುಗಳನ್ನು ಇರಿಸಲಾಗಿದೆ. ಮೆಲುವಾಸಿಗೊಂದೊಂದ ವಂತೆ ಅಂದವಾದ ಮೆತ್ತನೆಯ ಒರಗುದಿಂಬುಗಳಿದ್ದುವು. ದಕ್ಷಿಣದ ಕಡೆಯ ಭಾಗದ ಗೋಡೆಗೆ ವಿವಿಧಶಸ್ತ್ರಾಸ್ತ್ರಗಳೂ ಕವಚ ಶಿರಸ್ತ್ರಾಣ ಗಳೂ ನೇತಾಡುತ್ತಲಿವೆ. ಕೆಳಕ್ಕೆ ಬಗೆಬಗೆಯ ಆಕಾರದ ಅಡ್ಡಣಿಗೆಗಳ ಮೇಲೆ ಸಂಗೀತದ ಬೇರೆಬೇರೆ ವಾದ್ಯಗಳು—ಕರೆದಾಗ ಕೆಲಸಮಾಡಲು—ಅಣಿಯಾಗಿ ಕುಳಿತುಕೊಂಡಿವೆ. ಇನ್ನೊಂದು ಕಡೆಗೆ ಗೋಡೆಗೆ ಹೊಂದಿ, ಓಲೆಗರಿಯ—ಚಿಕ್ಕದೊಡ್ಡ—ಹೊತ್ತಗೆಗಳನ್ನು ಹೊತ್ತುಕೊಂಡ ಬೆತ್ತದ ಹೆಣಿಕೆಯ ಮಂಚಿಕೆಗಳು ನಿಡಿದಾಗಿ ನಿಂತುಕೊಂಡಿವೆ. ಸಭಾಭವನದ ಗೋಡೆಯ ಮೇಲುಬದಿಗೆ—ಅಲ್ಲೊಂದು ಇಲ್ಲೊಂದು—ಓರಣವಾಗಿ ಇರಿಸಿದ್ದ ಆಯ್ದ ಚಿತ್ರಪಟಗಳು 'ನಮ್ಮ ಸಂಕೇತ ನಿಮಗೆ ಅರ್ಥವಾಯಿತೇ?' ಎಂದು ನೋಡುವವರನ್ನು ನಗುನಗುತ್ತ ಕೇಳುತ್ತಲಿವೆ.

ಉತ್ತರದ ಗೋಡೆಗೆ ಮಧ್ಯಾಸನದ ಮೇಲುಗಡೆಗೆ ಇರಿಸಿದ್ದ ಚಿತ್ರಪಟವು ರಾಜಶೇಖರನಿಗೆ ತುಂಬ ಪ್ರೀತಿಯದು. ಆ ಪಟದಲ್ಲಿ ಹೆಚ್ಚಿನ ಕುಸುರುಗಳೇನೂ ಇರಲಿಲ್ಲ. ಬರಿ ದಟ್ಟವಾದ ಕಪ್ಪುಬಣ್ಣದು ದೊಂದು ತೆರೆ; ಹಿಂದೆ ಇದ್ದ ರತ್ನಪ್ರದೀಪದ ಒಂದೆರಡು ಕಿರಣಗಳು ತೆರೆಯ ಕಪ್ಪಿನೊಳಗಿಂದ— ಎಲ್ಲಿಂದಲೋ ಹೇಗೋ— ತೂರಿಕೊಂಡು ಹೊರಕ್ಕೆ ಬರುತ್ತಲಿವೆ. ಈಚೆಯ ಕಡೆಗೆ ಬರಿಮೈಯ ಬಿಡುಜಡೆಯ ತರುಣನೊಬ್ಬನು, ಎದೆಯ ಮೇಲೆ ಸ್ವಸ್ತಿಕಾಕಾರವಾಗಿ ಕೈಯನ್ನಿರಿಸಿ ನಿಂತುಕೊಂಡಿದ್ದಾನೆ; ಸೂಕ್ಷ್ಮದೃಷ್ಟಿಯಿಂದ ಆ ಕಿರಣಗಳ ನೆಲೆಯನ್ನು ಕಂಡು ಹಿಡಿಯುವುದರಲ್ಲಿ ಹೊರಗಣದೆಲ್ಲವನ್ನೂ ಮರೆತುಬಿಟ್ಟಿದ್ದಾನೆ. ಆತನ ಹಿಂಬದಿಯಲ್ಲಿ ಸುಂದರ ತರುಣಿಯೊಬ್ಬಳು ಕುಳಿತುಕೊಂಡು, ವೀಣೆಯನ್ನು ನುಡಿಸುವುದರಲ್ಲಿ ತಲ್ಲೀನಳಾಗಿದ್ದಾಳೆ. ಬಲಗಡೆಗೆ ನಸು

ದೂರದಲ್ಲಿಯೆ ನಿಂತುಕೊಂಡ ಬಂಟನೊಬ್ಬನು, ರಣದ ಕೊಂಬನ್ನು ಊದ ಬೇಕೆಂದು ಮೇಲೆತ್ತಿಕೊಂಡು ನಿಂತಿದ್ದಾನೆ. ಇದಿಷ್ಟು ಚಿತ್ರಪಟದಲ್ಲಿಯ ಸನ್ನಿವೇಶ. ಬಣ್ಣ ಬಣ್ಣದ ಬೆಡಗನ್ನು ಅಪೇಕ್ಷಿಸುವವರಿಗೆ ಈ ಚಿತ್ರದಿಂದ ಏನೂ ತೃಪ್ತಿಯಾಗುವಂತಿರಲಿಲ್ಲ.

ಬೆಳಗಾಗಿ ಒಂದು ಪ್ರಹರ ಕಳೆಯಲು ಬಂದಿರಬಹುದು. ರಾಜ-ಶೇಖರನು ಸಭಾಭವನದ ಆಸನವೊಂದರಲ್ಲಿ ಕುಳಿತುಕೊಂಡು, ಕೊಳಲ ನ್ನೂದುತ್ತ ಖಮಾಜರಾಗದ ಆಲಾಪನೆಯನ್ನು ಮಾಡುತ್ತಿದ್ದನು. ಆ ಆಲಾಪನೆಯಲ್ಲಿಯ ಕರುಣೆಯ ಮಿಡಿತಗಳು, ಸಂಗೀತಗಾರನ ಹೃದಯದ ಸೂಕ್ಷ್ಮಸಂವೇದನೆಗಳನ್ನು ಹೊರಕ್ಕೆ ಹಾಕುತ್ತಿರುವಂತೆ ಕೇಳು ತ್ತಿದ್ದುವು. ರಾಜಶೇಖರನು ಈ ಸಂಗೀತವಾಹಿನಿಯಲ್ಲಿ ತೇಲಿಮುಳುಗು ತ್ತಲಿರುವಾಗ ಸೇವಕನೊಬ್ಬನು ಒಳಕ್ಕೆ ಬಂದು, ವಿನಯದಿಂದ ಪೊಡ-ಮಟ್ಟನು. ರಾಜಶೇಖರನಿಗೆ ಇದಾವುದರ ಎಚ್ಚರವೆ ಇರಲಿಲ್ಲ. ಸೇವಕನು ಗಟ್ಟಿಯಾಗಿ ನುಡಿದನು :

"ಬುದ್ಧಿಯವರ ಪಾದದ ಬಳಿಯಲ್ಲಿ ಅರಿಕೆ."

ರಾಜಶೇಖರನು ತಟ್ಟನೆ ಕೊಳಲೂದುವುದನ್ನು ನಿಲ್ಲಿಸಿದನು. ಸೇವಕನ ಕಡೆಗೆ ತನ್ನ ಸ್ನೇಹಪೂರ್ಣವಾದ ದೃಷ್ಟಿಗಳನ್ನು ಹೊರಳಿಸಿ ಕೇಳಿದನು:

"ಏನು ಚಿಕ್ಕಣ್ಣಾ!'

"ಸಣ್ಣ ಬುದ್ಧಿಯೋರು ದಯಮಾಡಿಸಿದ್ದಾರೆ ಬುದ್ಧೀ!"

"ಒಳಕ್ಕೆ ಬರುವಂತೆ ಹೇಳು."

ಸೇವಕನು ಹೋದ ಒಂದೆರಡು ನಿಮಿಷಗಳಲ್ಲಿಯೆ ತರುಣ ನೊಬ್ಬನು ಒಳಕ್ಕೆ ಬಂದ. ಆತನ ದೇಹ ಪರಿಪುಷ್ಟವಾದುದು. ಮೈಬಣ್ಣ ನಸುಗೆಂಪು. ನಿಡಿದಾದ ಮೂಗೂ, ಚಂಚಲ ದೃಷ್ಟಿಗಳುಳ್ಳ ಬಟ್ಟಲು-ಗಣ್ಣುಗಳೂ, ಎತ್ತರವಾದ ನಿಲುವಿಕೆಯೂ ವೀರೋಚಿತವಾದುವುಗಳು. ರಾಜಕುಮಾರರಿಗೆ ಒಪ್ಪಬಹುದಾದ ಉಡುಪು-ತೊಡವುಗಳನ್ನು ಧರಿ ಸಿದ್ದನು. ಇವನೇ ರಾಜಶೇಖರನ ತಮ್ಮ ವಿರೂಪಾಕ್ಷ. ಪೆದ್ದರಾಯ ನೆಂದು ಸಲುಗೆಯ ಜನರು ಕರೆಯುವರು.

ರಾಜಶೇಖರನು ಉಚಿತ ಆದರದೊಂದಿಗೆ ತಮ್ಮನನ್ನು ಬರಮಾಡಿಕೊಂಡನು; ಸಮೀಪದ ಆಸನದಲ್ಲಿಯೆ ಕುಳ್ಳಿರಿಸಿಕೊಂಡನು. ಮೊದ-ಮೊದಲು ಪರಸ್ಪರರಲ್ಲಿ ಆ ಮಾತು ಈ ಮಾತುಗಳು ನಡೆದುವು. ಬಳಿಕ ಸಿದ್ಧರಾಯನು ರೋಷದ ಧ್ವನಿಯಲ್ಲಿ ಹೇಳಿದನು :

" ಅಣ್ಣಾಜಿ, ನಾವೀಗ ಬಳೆದು ದೊಡ್ಡವರಾಗಿದ್ದೇವೆ. ಮಾನಾಪ-ಮಾನಗಳ ಕಲ್ಪನೆಯು ನಮ್ಮಲ್ಲಿ ಪೂರ್ಣವಾಗಿ ಮೂಡಿಕೊಂಡಿದೆ. ಇನ್ನೂ ನಾವು ಎಷ್ಟು ದಿನಗಳ ವರೆಗೆ ಹೀಗೆಯೆ ಕೈಮುಚ್ಚಿಕೊಂಡು ಕುಳಿತಿರ ಬೇಕು ? "

" ಕೈಮುಚ್ಚಿಕೊಂಡು ಕುಳಿತಿರಬೇಕೆಂದು ಯಾರು ಹೇಳುವರು ? ಚೆನ್ನಾಗಿ ತೆರೆದ ಕೈಯವರಾಗಿ ನಾವೀಗ ತಿರುಗಾಡಬೇಕಾಗಿದೆ. ನಮ್ಮ ತೆರೆದ ಕೈಯನ್ನು ಸಾಮ್ರಾಜ್ಯಸಂರಕ್ಷಣೆಗಾಗಿ ಉಪಯೋಗಿಸ ಬೇಕಾದುದು ಆವಶ್ಯಕವಾಗಿದೆ. "

" ಎಲ್ಲಿಯ ಸಾಮ್ರಾಜ್ಯ ಇದು ಅಣ್ಣಾಜೀ? ಯಾರ ಸಾಮ್ರಾಜ್ಯ?"

" ಯಾರ ಸಾಮ್ರಾಜ್ಯವೆಂದರೆ? ನನ್ನ ಸಾಮ್ರಾಜ್ಯ, ನಿನ್ನ ಸಾಮ್ರಾಜ್ಯ, ಪ್ರತಿಯೊಬ್ಬ ಕನ್ನಡಿಗನ ಸಾಮ್ರಾಜ್ಯ, ವೈದಿಕಧರ್ಮಾಭಿ-ಮಾನಿಗಳೆಲ್ಲರದೂ ಸಾಮ್ರಾಜ್ಯ ; ಆ ಧರ್ಮರಕ್ಷಣೆಗಾಗಿಯೆ ಕೈಯೆತ್ತಿ ನಿಂತ ಶ್ರೀಪಂಪಾಪತಿಯ ಸಾಮ್ರಾಜ್ಯ ! "

" ಯಾವ ಲೋಕದಲ್ಲಿ ನಿಂತು ಮಾತನಾಡುತ್ತಿದ್ದೀರಿ ಅಣ್ಣಾಜಿ ? ನೀವಾಡುತ್ತಿರುವುದು ಮನುಷ್ಯಲೋಕದ ಮಾತಲ್ಲವೆಂದು ತೋರು ವುದು. ಈ ಸಾಮ್ರಾಜ್ಯವೀಗ ಇನ್ನಾರದೂ ಅಲ್ಲ; ಅನಧಿಕಾರಿಯಾಗಿದ್ದರೂ ಅನ್ಯಾಯದ ದಾರಿಯಿಂದ ಸಿಂಹಾಸನವನ್ನು ಆಕ್ರಮಣ ಮಾಡಿದ ಆ ಚಿಕ್ಕಪ್ಪನದು ! ಪದವಿಯ ಮದದಿಂದ ಕುರುಡನಂತೆ ವರ್ತಿಸುತ್ತಲಿರುವ ಆ ವಿರೂಪಾಕ್ಷರಾಯನದೊಬ್ಬನದೇ ಒಬ್ಬನದು ! ಆತನೆ ಏಕೈಕ ಅಧಿಪತಿಯು ! ನನಗೆ–ನಿಮಗೆ–ಇನ್ನಾರಿಗೂ ಸಾಮ್ರಾಜ್ಯದ ಒಂದು ಕಡ್ಡಿಯನ್ನು ಕೂಡ ಅಲುಗಾಡಿಸುವ ಸ್ವಾತಂತ್ರ್ಯವಿಲ್ಲ. ಹುಟ್ಟು ವಾಗೇನೋ ಅಂದು ಸಾರ್ವಭೌಮನ ಮಕ್ಕಳಾಗಿ ಹುಟ್ಟಿದೆವು; ಸಿಂಹಾಸನಾಧಿಕಾರವು ನಮಗೆ ನಿಸರ್ಗದತ್ತವಾದುದಾದರೂ ಅದನ್ನು

ಕಳೆದುಕೊಂಡು, ನಾವೀಗ ಸಾಮಾನ್ಯರಂತೆ ಹೊಟ್ಟೆಹೊರಕೊಂಡಿರ ಬೇಕಾಗಿದೆ. ಹೆತ್ತವರ ಹೊಟ್ಟೆಯ ಪಾಪದ ಫಲವೊ, ನಮ್ಮ ಹೇಡಿ-ತನದ ಪರಿಣಾಮವೊ ! ನನಗಿದು ತಿಳಿಯದಾಗಿದೆ. ಈ ವಿಷಯದಲ್ಲಿ ನಿಮ್ಮ ಕರುಳಿಗೆಂದೂ ಚುರುಕು ತಟ್ಟುತ್ತಿಲ್ಲವೆ ಅಣ್ಣಾಜೀ ?"

"ಪೆದ್ದಣ್ಣಾ, ಸಿಂಹಾಸನಾಧಿಕಾರಿಗಳಿಗಾಗಿ ಸಾಮ್ರಾಜ್ಯವಲ್ಲ, ಸಾಮ್ರಾಜ್ಯಕ್ಕಾಗಿ ಸಿಂಹಾಸನಾಧಿಕಾರಿಗಳು ! ಸಾಮ್ರಾಜ್ಯವು ರಾಜನೆನಿಸಿಕೊಳ್ಳುವ ಒಂದು ವ್ಯಕ್ತಿಯ ಐಹಿಕಸುಖದ ಸಾಧನೆ ಮಾತ್ರವಲ್ಲ, ನಾಡಿನ ಜನತೆಯ ಹಿತಸಂರಕ್ಷಕ ಸಾಧನೆಯು ! ಸದ್ಧರ್ಮ-ಸದಾಚಾರಗಳನ್ನು ಕಾಯ್ದು, ಶಾಂತಿ-ಸಮಾಧಾನಗಳನ್ನು ನೆಲೆಗೊಳಿಸುವ ಸಾಧನೆಯು ! ಆ ಕಾರ್ಯವನ್ನು ನಾನೇ ನೀನೇ ಮಾಡಬೇಕೆಂಬುದೇನು ? ನಮ್ಮವರಲ್ಲಿಯ ಯಾವನು ಮಾಡಿದರೂ ನಡೆಯಬಹುದಲ್ಲವೆ ? ಚಿಕ್ಕಪ್ಪನೆ ತನ್ನ ಕರ್ತವ್ಯವನ್ನು ಸರಿಯಾಗಿ ಮಾಡಿದರೆ ಆಯಿತು; ಹಾಗೆ ಅವನು ಕರ್ತವ್ಯತತ್ಪರನಾಗಿರುವಂತೆ ನಾನೂ ನೀನೂ ಪ್ರಯತ್ನ ಮಾಡುತ್ತಿರೋಣವೆಂತೆ ಬೇಕಾದರೆ ! "

"ಅಣ್ಣಾಜಿ, ನಾನು ಸ್ಪಷ್ಟವಾಗಿ ಮಾತನಾಡುತ್ತಿರುವುದನ್ನು ಕ್ಷಮಿಸಿರಿ ! ನೀವಾಡುತ್ತಿರುವುದು ಹುಸಿವೇದಾಂತದ ಹೇಡಿತನದ ಮಾತೆಂದು ನನಗೆ ಎನಿಸುತ್ತಿದೆ. ಮುಯ್ಯಕ್ಕೆ ಮುಯ್ಯನ್ನು ತೀರಿಸುವುದು ವೀರರ ಪೌರುಷದ ಲಕ್ಷಣವು. ಕ್ಷತ್ರಿಯಕುಲದಲ್ಲಿ ಹುಟ್ಟಿ, ಸಮ್ರಾಟನ ಸಂತಾನವೆನಿಸಿಕೊಂಡು, ಸ್ವಾಭಿಮಾನವಿಲ್ಲದವರಾಗಿ ಬದುಕಿರುವುದಕ್ಕಿಂತಲೂ ಸತ್ತುಹೋಗುವುದು ಒಳ್ಳೆಯದೆಂದು ನನ್ನ ಅಭಿಪ್ರಾಯ ! "

"ಪೆದ್ದಣ್ಣಾ, ತಾರುಣ್ಯದ ಆವೇಶದ ಮನಸ್ಸು ಇಲ್ಲದ ವಿಕಾರಗಳನ್ನು ಹುಟ್ಟಿಸುವುದು. ವಿವೇಕದ ಬುದ್ಧಿಯು ವಿಚಾರದ ದಾರಿಯಲ್ಲಿ ಕೈಹಿಡಿದು ಕರೆದೊಯ್ಯುವುದು. ನೀನೀಗ ವಿಕಾರವಶನಾಗಿದ್ದೀಯೆ. ನಿನ್ನ ದೃಷ್ಟಿ ಒಂದೇ ದಿಶೆಯನ್ನು ಹಿಡಿದು ನಡೆದಿದೆ. "

"ನೀವು ಹೇಳುವುದು ನಿಜ ಅಣ್ಣಾಜಿ; ಆದರೆ, ಜಗತ್ತಿನಲ್ಲಿ ಯಾವುದೆ ಮಹತ್ಕಾರ್ಯವೂ ಒಂದೇ ದಿಶೆಯ ದೃಷ್ಟಿಯವರಿಂದಲೆ ಜರುಗುತ್ತಿರುವುದುಂಟು. ನಮ್ಮ ನೋಟದ ಬಲುಹನ್ನು ನಾಲ್ಕು ನಿಟ್ಟು-

ಗಳಿಗೆ ಹಂಚಿಕೊಟ್ಟಲ್ಲಿ, ಇಲ್ಲದ ತೊಡಕನ್ನು ತಂದು ಬಿಡಿಸುತ್ತ ಕುಳಿತು ಕೊಳ್ಳುವುದರಲ್ಲಿಯೇ ಆಯುಸ್ಸೆಲ್ಲ ಹಾಳಾಗಬಹುದು. ನನಗೆ ಒಂದೇ ನಿಮಿಷವೆ ಆಗಲಿ, ಮಿಂಚಾಗಿ ಚಮಕಿಸುವುದು ಬೇಕು; ತಾರೆಯಾಗಿ ಅನಂತಕಾಲದ ವರೆಗೂ ಮಿಣುಕುಮಿಣುಕೆನ್ನುತ್ತ ಬದುಕುವುದರಲ್ಲಿ ಅರ್ಥವೇನಿದೆ? ಇದೊ, ನಾನು ಹೇಳುತ್ತೇನೆ ಕೇಳಿ ಅಣ್ಣಾಜಿ, ವಿಜಯನಗರದ ಸಾಮ್ರಾಜ್ಯಸಿಂಹಾಸನವು ಇನ್ನಾರದೂ ಅಲ್ಲ; ಅಖಂಡ ವಾಗಿ ಇಪ್ಪತ್ತೊಂದು ವರ್ಷಗಳವರೆಗೆ ಅದರ ಮೇಲೆ ಕುಳಿತು, ಸಾಮ್ರಾ ಜ್ಯದ ಉನ್ನತಿಗಾಗಿ ರಣದಲ್ಲಿ ರಕ್ತಸುರಿಸಿ, ಹಗೆಗಳನ್ನು ಬಗ್ಗುಬಡಿದ ವೀರ ಮಲ್ಲಿಕಾರ್ಜುನನದು! ಆತನ ಹೊಟ್ಟೆಯ ಮಕ್ಕಳಾದುದರಿಂದ ನಮ್ಮದು! ಆ ಸಿಂಹಾಸನದ ಮೇಲೆ ನೀವಾದರೂ ಕುಳಿತುಕೊಳ್ಳಬೇಕು, ನಾನಾದರೂ ಕುಳಿತುಕೊಳ್ಳಬೇಕು! ಅದುವರೆಗೆ ನನ್ನ ಜೀವಕ್ಕೆ ಶಾಂತಿಯಿಲ್ಲ!"

"ಪೆದ್ದಣ್ಣಾ, ನಿನ್ನಂತಹರ ಜೀವಕ್ಕೆ ಅದಾದ ಮೇಲೆಯೂ ಶಾಂತಿ ಯಿರದು; ಕೆಲವು ಜೀವಿಗಳು ಅಶಾಂತಿಯನ್ನು ಅನುಭವಿಸುವುದ ಕ್ಕಾಗಿಯೆ ಹುಟ್ಟಿಬಂದಿರುತ್ತವೆ.'

ಪೆದ್ದರಾಯನು ಗಟ್ಟಿಯಾಗಿ ನಕ್ಕುನುಡಿದ:

"ಅಣ್ಣಾಜಿ, ನಿಮ್ಮ ಮಾತಿಗೆ ನಗೆ ಬರುತ್ತಲಿದೆ ನನಗೆ. ನಿಮ ಗಿನ್ನೂ ಇಪ್ಪತ್ತೈದು ವರ್ಷದ ವಯಸ್ಸು; ಮುತ್ತಜ್ಜಗಳು ಆಡುವ ಮಾತುಗಳನ್ನಾಡುತ್ತಿದ್ದೀರಿ. ನಾನೂ ಹೇಳುತ್ತೇನೆ ಕೇಳಿ, ಕೆಲವು ಜೀವಿಗಳು ಅಶಾಂತಿಯ ಅನುಭವಕ್ಕಾಗಿಯೆ ಹುಟ್ಟಿಬಂದಿರುತ್ತವೆ; ಇನ್ನು ಕೆಲವು ಜೀವಿಗಳು, ಹುರುಡು ಇಲ್ಲದೆ ಹೇಡಿತನದಲ್ಲಿಯೆ ಕೊಳೆ ಯಲು ಹುಟ್ಟಿಬಂದಿರುತ್ತವೆ!"

"ರೇಗಿದ ನಿನ್ನ ಮನಸ್ಸು ಏನೇನನೋ ಮಾತನಾಡಿಸುತ್ತಿದೆ. ತಮ್ಮಾಜಿ, ಮಲ್ಲಿಕಾರ್ಜುನನ ಹೊಟ್ಟೆಯಲ್ಲಿ ಹುಟ್ಟಿದವರು ರಾಜರಾಗು ವುದರಲ್ಲಿ ಸರಿಯೇನು? ಆತನ ಜೊತೆಯವನಾಗಿ ಹುಟ್ಟಿಬಂದ ತಮ್ಮನು ರಾಜನಾಗುವುದರಲ್ಲಿ ತಪ್ಪೇನು?"

"ಅಣ್ಣಾಜಿ, ನಿಮ್ಮ ಮಾತುಗಳಿಗೆಲ್ಲ ಮರುಮಾತು ಕೊಡುವುದಕ್ಕೆ

ಸನ್ನಿಂದಾಗದು. ನನ್ನ ಗಟ್ಟಿಗೊಂಡ ಮನಸ್ಸು ನಿಮ್ಮ ಯಾವ ಮಾತಿನ ಏಟುಗಳಿಂದಲೂ ಅಲುಗಾಡದು. ಎನೊ, ನನ್ನ ನಿಶ್ಚಯವನ್ನು ನಿಮಗೆ ತಿಳುಹಿಸಿ ಹೋಗಬೇಕೆಂದು ಎನಿಸಿದುದರಿಂದ ಇಲ್ಲಿಯ ವರೆಗೆ ಬಂದಿದ್ದೆ. ಕೆಲಸವಾಯಿತು, ನಾನಿನ್ನು ಹೊರಡುತ್ತೇನೆ! ”

ಹೀಗೆಂದು ಪೆದ್ದರಾಯನು ದಿಮ್ಮನೆ ಎದ್ದು ಹೊರಟುಬಿಟ್ಟನು. ನಡೆಯುವಾಗಿನ ದಡದಡನೆಂಬ ಅಡಿಯ ಸಪ್ಪುಳು, ಅವನ ರೋಷ-ನಿಶ್ಚಯ ಗಳನ್ನು ಹೊರಕ್ಕೆ ತೋರಿಸುತ್ತಿದ್ದಿತು. ರಾಜಶೇಖರನು ತಮ್ಮನ ನಿರ್ಗಮನವನ್ನು ಕಣ್ಣುಬಡಿಯದೆ ನೋಡುತ್ತಲಿದ್ದನು. ಆತನು ಮರೆ ಯಾದೊಡನೆಯೆ ದೃಷ್ಟಿಗಳನ್ನು ಶೂನ್ಯದ ಕಡೆಗೆ ತಿರುಗಿಸಿ, ಗದ್ದದ ಮೇಲೆ ಬೆರಳುಗಳನ್ನಿಟ್ಟು, ವಿಚಾರವಶನಾಗಿ ಕುಳಿತುಕೊಂಡನು.

---

## ೪ನೆಯ ಪರಿಚ್ಛೇದ

ಹೇಮಾಂಬಿಕೆಯ ಪಾಣಿಗ್ರಹಣಸಮಾರಂಭವು ಕಾರ್ತಿಕ ವದ್ಯ ದಶಮಿಯ ದಿನವೆಂದು ನಿರ್ಣಯವಾಗಿದ್ದಿತು. ಅದಕ್ಕೆರಡು ದಿನಗಳಿಗೆ ಮೊದಲು, ವಿರೂಪಾಕ್ಷದೇವರಾಯನು ವೆಂಕಟನಾಯಕನ ಮಾನ- ಸನ್ಮಾನ ಮಾಡುವುದಕ್ಕಾಗಿ, ಕೇವಲ ತನ್ನ ಆಪ್ತಮಿತ್ರರದೊಂದು ಸಂತೋಷಸಭೆಯನ್ನು ಕೂಡಿಸಬೇಕೆಂದು ಸಂಕಲ್ಪಿಸಿದುದರಿಂದ, ಅದಕ್ಕೆ ಬೇಕಾದ ಏರ್ಪಾಡುಗಳೆಲ್ಲ ನಡೆದಿದ್ದುವು. ಇಂತಹ ಸಂತೋಷಸಭೆಗಳಿಗೆ ಸಾಮ್ರಾಜ್ಯದ ಹೊಣೆಗಾರಿಕೆಯುಳ್ಳ ಸಾಮಂತರಿಗೆ– ಸರದಾರ-ಮನ್ನೆ ಯರಿಗೆ ಔತಣವಿದ್ದರೆ ಇದ್ದಿತು, ಇಲ್ಲದಿದ್ದರೆ ಇಲ್ಲ. ಔತಣವಿದ್ದಾಗಲೂ ಅಂತಹ ಜನರು ಕೇವಲ ರಾಜಾಜ್ಞೆಯನ್ನು ಮುರಿಯಲಾಗದೆಂದು ನಿರ್ವಾಹವಿಲ್ಲದೆ ಅಲ್ಲಿಗೆ ಹೋಗುವರು.

ವಿರೂಪಾಕ್ಷರಾಜನ ಸಂತೋಷಸಭೆಗಳೆಂದರೆ ಅಲ್ಲಿ ಇನ್ನಾವ ವಿಷಯಗಳ ಚರ್ಚೆಯೂ ಇಲ್ಲ. ಬರಿ ದೇಶವಿದೇಶದ ಸೂಳೆಯರ ಹಾಡು–

ಕುಣಿತ; ಮಾದಕರಸಗಳ ಪಾನಸಂಭ್ರಮ; ಕುಡಿದು ಮತ್ತೇರಿದವರ ಬಡ-ಬಡಿಕೆಯ ವಿಧವಿಧದ ಹುಚ್ಚಾಟ; ಇವೇ ಅಲ್ಲಿಯ ಮುಖ್ಯ ಕಾರ್ಯ-ಕಲಾಪಗಳು. ಆಗಿನ ಮಹಾರಾಜರ ಮನೋಲಹರಿ ಹೇಗೆ ಹೇಗೆ ಹೊರಳುತ್ತಿರುವುದೆಂಬುದರ ನಿಯಮವಿರದು. ಉಲ್ಲಾಸದ ಕಡೆಗೆ ಹರಿಯುತ್ತಿದ್ದರೆ ಕೋಲುಕಾರನಿಗೆ ಸೇನಾಪತಿಯ ಪದವಿ ದೊರೆಯು ತ್ತಿದ್ದಿತು; ಅಡಿಗೆಯವನಿಗೆ ನ್ಯಾಯಮಾರ್ತಾಂಡನ ಅಧಿಕಾರವು ಸಿಕ್ಕು ತ್ತಿದ್ದಿತು. ಸಂತೆಯ ಸೂಳೆಯೊಬ್ಬಳು ಅಂತಃಪುರಕ್ಕೆ ರಾಣಿಯಾಗಿ ಬಂದರೂ ಬಂದಳೆ. ಇನ್ನು ರೋಷದ ಕಡೆಗೆ ಸಸುವೆ ಒಲೆದಿದ್ದಿತೋ..., ಯಾರ ಯಾರ ಅಧಿಕಾರ, ಯಾರ ಯಾರ ಸಂಪತ್ತು, ಯಾರ ಯಾರ ಮಾನ-ಪ್ರಾಣಗಳು ಹೇಗೆ ಹೇಗೆ ಹೋಗುತ್ತಿದ್ದುವೆಂಬುದನ್ನು ಹೇಳಲಿಕ್ಕಾಗದು. ಎಂತಲೆ ನಿಜವಾದ ಸಾಮ್ರಾಜ್ಯನಿಷ್ಠರಾದ ಸರದಾರ ಸಾಮಂತರು ಸಂತೋಷಸಭೆಗಳೆಂದರೆ ಸಂಕಟಸಮಯಗಳೆಂದೇ ಭಾವಿಸುವರು.

ನಾಷೀರ್‌ಮುಹಮ್ಮದನಿಗೆ ಪ್ರತಿಯೊಂದು ಸಂತೋಷಸಭೆಗೆ ತಪ್ಪದೆ ಔತಣವಿರುತ್ತಿದ್ದಿತು. ಇಂತಹ ಸಭೆಗಳ ಮುಖ್ಯ ಸೂತ್ರಸಂಚಾ-ಲಕನೆ ನಾಷೀರನೆಂದ ಬಳಿಕ ಆತನಿಗೆ ಔತಣವಿರುವುದೆಂದು ಬೇರೆ ಹೇಳು ವುದೇನು? ಮಹಾರಾಜನ ಅತ್ಯಂತ ವಿಶ್ವಾಸದವನೆಂದರೆ ಇವನು. ಆತನ ಯಾವ ರೋಷಲಹರಿಯೂ ನಾಷೀರನ ಕೂದಲೊಂದನ್ನೂ ಕೊಂಕಿಸಿರ ಲಿಲ್ಲ; ಉಲ್ಲಾಸಲಹರಿಗಳು ಮಾತ್ರ ಇವನನ್ನು ದಿನದಿನಕ್ಕೂ ಮೇಲೆ ಮೇಲೆ ಒಯ್ದು ಕುಳ್ಳಿರಿಸುತ್ತಿದ್ದುವು. ಈಗ ನಾಷೀರ್ ಮುಹಮ್ಮದನು ಓಲಗಗಳಲ್ಲಿ, ಸಭೆಗಳಲ್ಲಿ, ಮೊದಲನೆಯ ತರಗತಿಯ ಮಾಂಡಲಿಕರ ಮಾನ-ಸನ್ಮಾನಗಳನ್ನು ಪಡೆಯುತ್ತಿರುವನು.

ನಾಷೀರ್ ಮುಹಮ್ಮದನ ವಿಷಯದಲ್ಲಿ ವಿಜಯನಗರದ ಜನರಿಗೆ ಇಷ್ಟು ಸಂಗತಿ ಮಾತ್ರ ಗೊತ್ತು: 'ಇವನು ಕುಲಬುರ್ಗೆಯತ್ತಕಡೆಯಿಂದ ರತ್ನಪಡಿಯ ವ್ಯಾಪಾರಕ್ಕೆಂದು ವಿಜಯನಗರಕ್ಕೆ ಬಂದವನು. ಬಂದು ಆರೇಳು ವರ್ಷಗಳಿಗಿಂತ ಹೆಚ್ಚಾಗಿಲ್ಲ. ಬಂದ ಕೆಲವು ದಿನಗಳಲ್ಲಿಯೆ ಉಪಾ ಯಾಂತರದಿಂದ, ಗೋವಳಕೊಂಡದ ಗಣಿಯಲ್ಲಿಯ ಬೆಲೆಯುಳ್ಳ ವಜ್ರ ಗಳನ್ನೂ ದೇಶವಿದೇಶದ ಮುತ್ತು-ರತ್ನಗಳನ್ನೂ ಅರಮನೆಗೆ ಒದಗಿಸಿ

ಕೊಡುವ ವ್ಯವಹಾರವನ್ನು, ಮೆಲ್ಲಗೆ ತನ್ನ ಸ್ವಾಧೀನಪಡಿಸಿಕೊಂಡನು. ಮುಂದೆ ರಾಜನ ಮನಸ್ಸಿನ ಒಲವುಗಳನ್ನು ಅರಿತುಕೊಂಡು, ಆತನ ವಿಷಯವ್ಯಸನಗಳ ಭೂತಕ್ಕೆ ಬೇಕುಬೇಕಾದ ಬಲಿಗಳನ್ನು ಒದವಿಸುತ್ತ, ರಾಯನ ಮನಸ್ಸನ್ನೆ ತನ್ನ ಮುಷ್ಟಿಯಲ್ಲಿ ಹಿಡಿದುಬಿಟ್ಟನು. ಈಗ ನಾಸೀರ್ ಮಹಮ್ಮದನ ಮಾತೆಂದರೆ ಮಹಾರಾಜನಿಗೆ ಗುರುವಿನಾಜ್ಞೆ ಯಂತೆ ದಾಟಲಾರದ ಗೆರೆಯಾಗಿದೆ. ಇವನೆಂದುದು ನಡೆಯಲೆಬೇಕು. ಇವನ ಮಾತನ್ನು ನಡೆಯಿಸುವುದರಲ್ಲಿ ವಿರೂಪಾಕ್ಷರಾಯನು ತನ್ನ ಸಾಮ್ರಾಜ್ಯದ ಹಿತವನ್ನೂ ಮರೆಯುವನು, ಸ್ವಧರ್ಮನಿಷ್ಠೆಯನ್ನೂ ಬದಿಗೆ ಸರಿಸುವನು. ಪ್ರಜಾಹಿತದ ಕತೆಯಂತೂ ದೂರದಲ್ಲಿಯೆ ಉಳಿಯಿತು.

ಸಭೆಗೆ ಮೊದಲನೆಯ ದಿನದ ಹಗಲು; ಸೂರ್ಯನು ನಡುನೆತ್ತಿಗೆ ಬಂದು ಎಲ್ಲೆಲ್ಲಿಯೂ ತನ್ನ ಬಿಸುಗದಿರುಗಳನ್ನು ಕಳುಹಿಸಬೇಕೆನ್ನುತ್ತಿದ್ದಾನೆ. ಶರತ್‌ಕಾಲದ ಬೆಳುಮುಗಿಲ ಜಾಳಿಗೆಯು, ಆ ಬಿಸುಪಿನ ಬಹು ಭಾಗವನ್ನು ಮೇಲೆಯೆ ತಡೆಹಿಡಿದು, ಕೆಳಗಣವರಿಗೆ ಹಿತವಾಗಿರುವಷ್ಟನ್ನು ಮಾತ್ರ ನೆಲದ ಕಡೆಗೆ ಬಿಡುತ್ತಲಿದೆ.

ಅರಮನೆಯ ಮಂತ್ರಾಗಾರದಲ್ಲಿ ವಿರೂಪಾಕ್ಷರಾಯನೂ ನಾಸೀರ್ ಖಾನನೂ ಕುಳಿತುಕೊಂಡು ಮಾತನಾಡುತ್ತಿದ್ದರು. ಅವರಿಬ್ಬರೂ ಕುಳಿತು ಕೊಂಡ ಸಲುಗೆಯ ಬಗೆಯನ್ನುನೋಡುವವರಿಗೆ, ಸಮ್ರಾಟನಾದ ವಿರೂ ಪಾಕ್ಷ, ವರ್ತಕನೊಬ್ಬನಾದ ನಾಸೀರ್‌ಖಾನ್ ಇವರು ಪರಸ್ಪರರ ಸ್ಥಾನ-ಮಾನಗಳನ್ನು ಮರೆತು, ಸಮಾನಸ್ಕಂದರಂತೆ ವ್ಯವಹರಿಸುತ್ತಿರುವ ರೇನೊ . . . .! ಎಂದೆನಿಸುವಂತಿದ್ದಿತು. ನಾಸೀರ್ ಹೇಳಿದನು:

"ಮಹಾರಾಜ, ಸಭೆಗಾಗಿ ಕರೆಯಿಸಿದ ನರ್ತಕಿಯರು ಅಚ್ಚ ಪಾರಶೀಸ್ತಾನದಿಂದ ಬಂದವರು. ಅವರೇನು ಈ ಲೋಕದ ಹೆಂಗುಸರಲ್ಲ ಮಹಾರಾಜ! ಮೇಲಿನ ಸ್ವರ್ಗಲೋಕದಿಂದಲೆ ಇಳಿದು ಬಂದಂತಿದ್ದಾರೆ. ಮೊದಲು ಅವರು ತಮ್ಮ ಧರ್ಮದವನೆಂದು ಕಲಬುರ್ಗೆಯ ಸುಲ್ತಾನನ ಕಡೆಗೆ ಹೋಗಿದ್ದರು. ನಮ್ಮ ಇಸ್ಲಾಮ್ ಜನರಿಗೆಲ್ಲಾ ಇಂತಹ 'ಗಾನಾ ಬಜಾನಾ'ದ ಬೆಲೆ ಏನುಗೊತ್ತು ಸರಕಾರ್! ಸುಲ್ತಾನನ ಬಳಿಯಲ್ಲಿ

ಅವರಿಗೆ ಆಶ್ರಯ ಸಿಕ್ಕಲಿಲ್ಲ. ರಾಜ್ಯವಾಳಿ ಸುಖಪಡಬೇಕು ತಮ್ಮ ಹಿಂದೂಜನರು! ಎಲ್ಲಾ ವಿದ್ಯೆಗಳಿಗೂ ಎಲ್ಲಾ ಕಲೆಗಳಿಗೂ ಆಶ್ರಯ ಸಿಕ್ಕುವುದು ತಮ್ಮ ಬಳಿಯಲ್ಲಿಯೆ! ಅದಕ್ಕಾಗಿಯೆ ನಮ್ಮ ಸ್ನೇಹಿತ ರೊಬ್ಬರಿಗೆ ಕಾಗದ ಬರೆದು, ಅವರನ್ನು ಇಲ್ಲಿಗೆ ಕರೆಯಿಸಿಕೊಂಡಿದ್ದೇನೆ."

"ಒಳ್ಳೆಯದು ಮಾಡಿದಿರಿ ಖಾನ್‌ಸಾಹೇಬ್! ನೋಡಿ, ದೇವರು ನಮಗೆ ಕಣ್ಣುಗಳನ್ನು ಕೊಟ್ಟಿದ್ದಾನೆ; ಆತನೇ ಜಗತ್ತಿನಲ್ಲಿ ಸುಂದರ ಸುಂದರ ಪದಾರ್ಥಗಳನ್ನು ನಿರ್ಮಿಸಿದ್ದಾನೆ. ಎರಡರ ಉಪಯೋಗವೂ ಉಚಿತವಾಗಿ ಆಗುತ್ತಿರಬೇಕೆಂದೇ ಆತನ ಉದ್ದೇಶವಲ್ಲದೆ, ಮತ್ತೆನಾದರೂ ಇದೆಯೆಂದು ಹೇಳುವವರು ಬುದ್ಧಿಗೇಡಿಗಳೆಂದು ನನ್ನ ಅಭಿಪ್ರಾಯ!"

"ತಮ್ಮ ಮಾತು ಸಾವಿರಸಲವೂ ಸತ್ಯ ಮಹಾರಾಜ, ಅಲ್ಲಾ.... ಮತ್ತೆ....ನಮ್ಮ ದಿಲಾವರ್‌ಖಾನನನ್ನು ಮುದಗಲ್ಲ ಸುಭೇದಾರನನ್ನು ಮಾಡುವುದಾಗಿ ಅಪ್ಪಣೆಕೊಡಿಸಿದ್ದಿರಲ್ಲವೇ?"

"ಅವಶ್ಯವಾಗಿ ಮಾಡುತ್ತೇನೆ ಖಾನ್! ಅದು ನನ್ನ ಲಕ್ಷ್ಯದಲ್ಲಿ ಇದೆ."

"ಮತ್ತೆ ನಮ್ಮ ಷೇರ್ ಉದ್ದೀನನಿಗೆ ರಾಯಚೂರು ಕೋಟೆಯ ಆಧಿಪತ್ಯವನ್ನು ಕೊಡುವುದಾಗಿ ಹೇಳಿದುದೂ ಸ್ಮರಣೆಯಲ್ಲಿ ಇರ ಬಹುದು."

"ಇರದೆ ಏನು ನಾಷೀರ್‌ಖಾನ್! ನಿಮ್ಮ ಮಗನು ಇನ್ನೂ ಸಣ್ಣವನು; ಇನ್ನೊಂದೆರಡು ವರ್ಷ ಹೋಗಲೆಂದು ಬಿಟ್ಟಿದ್ದೇನೆ ಇಷ್ಟೆ!"

"ಸಣ್ಣವನೆಂದರೆ ಏನು ಸರ್ಕಾರ್? ನಾಳೆಯ ರಮಝಾನ್ ತಿಂಗಳಿಗೆ ಇಪ್ಪತ್ತೆರಡು ವರ್ಷ ತುಂಬುತ್ತವೆ ಆತನಿಗೆ.!"

"ಷೇರನಿಗೆ ಇಪ್ಪತ್ತೊಂದು ವರ್ಷ ಆಗಿ ಹೋಗಿವೆಯೇನು ಈಗ? ಸರಿ, ತಕ್ಕವಯಸ್ಸಿನವನು ಆಗಿದ್ದಾನೆ ಬಿಡಿ ಹಾಗಾದರೆ!"

"ಆಗದೆ ಏನು ಸರಕಾರ್, ಈ ವಯಸ್ಸಿಗೆಂದರೆ ನಿಮ್ಮ ಹಿರಿಯರು— ಹರಿಹರ ಬುಕ್ಕಮಹಾರಾಜರು— ಹೊಸತಾಗಿ ರಾಜ್ಯಕಟ್ಟಿದರಂತೆ. ಅಲ್ಲದೆ ನೋಡಿಕೊಳ್ಳುವುದಕ್ಕೆ ಮೇಲೆ ನಾನು ಇದ್ದೇನೆ, ತಾವು ಇದ್ದೀರಿ."

" ನಾಷೀರ್‌ಖಾನ್, ನಾಳೆಯ ಸಭೆಯಲ್ಲಿ ನಿಮ್ಮ ಮಗನಿಗೆ ರಾಯಚೂರ ದುರ್ಗಾಧಿಪತ್ಯವನ್ನು ಕೊಟ್ಟೇ ಬಿಡುತ್ತೇನೆ. ನೀವು ಆತನನ್ನೂ ನಾಳೆಯ ಸಭೆಗೆ ಕರೆದುಕೊಂಡು ಬರುವಂತೆ ಏರ್ಪಾಡು ಮಾಡಿಬಿಡಿರಿ ! "

" ಆಗಲಿ ಮಹಾರಾಜ, ತಮ್ಮ ವಿಶ್ವಾಸವು ನನ್ನನ್ನು ತಮ್ಮ ಸೇವಕನನ್ನಾಗಿ ಮಾಡಿಕೊಳ್ಳುತ್ತಲಿದೆ. ಅಂದಿನ ಸಭೆಯಲ್ಲಿ ತಮಗೆ ಷರಬತ್ ಕೊಡುವ ಕೆಲಸವನ್ನು ನಮ್ಮ ಷೇರ್‌ಉದ್ದೀನನ ಕಡೆಗೆ ಒಪ್ಪಿಸಿ ಬಿಡುತ್ತೇನೆ."

" ದಿಲಾವರಖಾನನನ್ನು ನಾನು ಇನ್ನೂ ಕೆಲವು ದಿನ ಪರೀಕ್ಷೆ ಮಾಡಬೇಕಾಗಿದೆ. ಅಲ್ಲಿಯ ವರೆಗೆ ಆತನಿಗೆ ಮುದಗಲ್ಲ ಅಧಿಕಾರವನ್ನು ಕೊಡುವಂತಿಲ್ಲ. "

" ಮಹಾರಾಜರ ಮನಸ್ಸು; ದಿಲಾವರನೂ ಜವಾನ್‌ಮರ್ದನಿದ್ದಾನೆ. ಮಹಾರಾಜರ ಗುಲಾಮನಾಗಿ ಸೇವೆಮಾಡಿಕೊಂಡಿರಬೇಕೆಂಬ ಇಚ್ಛೆ ಆತನಿಗೆ ಇದೆ. ಆಗಲಿ ಸರಕಾರ್, ನನಗಿನ್ನು ಹೊರಡಲಿಕ್ಕೆ ಅಪ್ಪಣೆಯೆ ? "

ವಿರೂಪಾಕ್ಷರಾಯನಿಗೆ ವಿನಯದ ಸೋಗಿನ ಸಲ್ಲಾಮನ್ನು ಮಾಡಿ ಬೀಳ್ಕೊಂಡು, ನಾಷೀರ್ ಮಹಮ್ಮದನು ಹೊರಟು ನಡೆದನು ; ಮಹಾ-ರಾಜನು ಕೈಯಾಳನ್ನು ಕೂಗಿ ಹೇಳಿದನು:

" ಜಕ್ಕಾ, ಶಾಸನದ ಗಂಗಣಾರ್ಯರನ್ನು ಈಗಲೆ ಕರೆದುಕೊಂಡು ಬಾ ; ಬೇಗನೆ ಹೋಗು ! "

---

## ೫ನೆಯ ಪರಿಚ್ಛೇದ

ಸಂತೋಸಭೆಯು ಹಗಲು ಮೂರು ಪ್ರಹರಗಳಿಗೆ ಮೊದಲಾಗು ವುದಿದ್ದಿತು. ಅಂದೆಯೆ, ಮುಂಬಗಲಿನ ಸುಮಾರು ಹತ್ತು ಗಳಿಗೆಗಳಾಗಿ ಹೋಗಿರಬಹುದು; ರಾಜಶೇಖರನು ತನ್ನ ದಿವಾನಖಾನೆಯಲ್ಲಿ ಒಬ್ಬನೆ ಕುಳಿತುಕೊಂಡಿದ್ದಾನೆ. ಮುಂದೆ ಬಿದ್ದಿದ್ದ ಓಲೆಯನ್ನು ಆಗಾಗ ಕೈಯೊಳಗೆ ತೆಗೆದುಕೊಳ್ಳುವನು; ಅದರಲ್ಲಿಯ ಬರೆಹದಲ್ಲಿ ತನ್ನ ಕಣ್ಣೋ ನೋಟವನ್ನು ಕೀಲಿಸುವನು. ಮೊದಲಿಂದ ತುದಿಯವರೆಗೆ ಒಂದೆ ಒಂದು ಅಕ್ಷರವನ್ನೂ ಬಿಡದೆ ಓದಿಬಿಡುವನು. ಈಗ ಹತ್ತಾರು ಸಲ ಅದನ್ನವನು ಓದಿ ಮುಗಿಸಿರಬಹುದು.

ಓಲೆಯನ್ನೋದುತ್ತಿರುವಾಗ ಪ್ರತಿಸಲವೂ ರಾಜಶೇಖರನ ಮೈಯ ನವಿರು ನಿಮಿರಿ ನಿಲ್ಲುವುದು ; ಕಂಠವು ಬಿಗಿದು ಬರುವುದು ; ಕೆಮ್ಮೊಗ ವಾಗಿ, ಕೆಳದುಟಿ ಅದಿರುವುದು ; ಕಂಬನಿ ಹೊರಕ್ಕೆ ಹಣಿಯಿಕ್ಕು ವುದು; ತುಂಡುತುಂಡಾಗಿ ಬಿಸಿಯುಸಿರು ಹೊರಟು, ಅಲ್ಲಿಯ ಹವೆಯಲ್ಲಿ ಬಿಸುಪು ತಲೆದೋರುವುದು. ಓದುವುದಾದ ಮೇಲೆ ಕಣ್ಣೋ ನೋಟಗಳು ಯೋಚನಾಲೋಕದತ್ತ ತೆರಳುವುವು; ಅಲ್ಲಿಯ ಅನೇಕಾನೇಕ ದೃಶ್ಯ-ಗಳನ್ನು ಕಂಡು ವಿವಿಧಭಾವಗಳ ಅನುಭವವನ್ನು ಅಭಿವ್ಯಕ್ತಗೊಳಿಸು ವುವು.

ಹೇಮಾಂಬಿಕೆಯ ಸಹಚರಿ ಬಾಯಮ್ಮನು, ಆ ಓಲೆಯನ್ನು ಕೊಟ್ಟುಹೋಗಿ ಅರ್ಧಪ್ರಹರದಷ್ಟು ಸಮಯವು ಕಳೆದು ಹೋಗಿರ ಬಹುದು. ರಾಜಶೇಖರನು ಇನ್ನೊಂದು ಸಲವೂ ಓಲೆಯನ್ನು ಕೈಗೆ ತೆಗೆದುಕೊಂಡು ಓದಲು ತೊಡಗಿದನು. ಹೇಮಾಂಬಿಕೆಯು ಬರೆದ ಪತ್ರವದು. ಅದರಲ್ಲಿ ಬರೆದುದು ಹೀಗೆ :—

"ಒಲವಿನ ರಾಜಶೇಖರ !

ನಿಮ್ಮನ್ನು ನಾನು ಇದುವರೆಗೆ 'ಕುಮಾರ' ಎಂದು ಸುಮ್ಮನೆ

ಕರೆಯುತ್ತಿದ್ದುದನ್ನು, ಇನ್ನುಮೇಲೆ ಅನ್ವರ್ಥಗೊಳಿಸಬೇಕೆಂದು ನಿರ್ಣಯಿಸಿ ಬಿಟ್ಟಿದ್ದೇನೆ.

ಅಂದು ರಾತ್ರಿಯಲ್ಲಿ ನೀವಾಡಿದ ಮಾತುಗಳು ನನ್ನ ವಿಚಾರದ ದಿಶೆಯನ್ನೆ ಮಾರ್ಪಡಿಸಿ ಬಿಟ್ಟುವು; ನನ್ನ ಬದುಕನ್ನು ಸಾರ್ಥಕಗೊಳಿಸು ವಂತಹ ನೇರವಾದ ಗುರಿಯೊಂದನ್ನು ತೋರಿಸಿದುವು. ಕುಮಾರ, ನಮ್ಮ ಸದ್ಧರ್ಮ-ಸಂಸ್ಕೃತಿಗಳನ್ನು ಕಾಪಾಡುವುದಕ್ಕಾಗಿ ನಿಂತುಕೊಂಡ ಈ ಸಾಮ್ರಾಜ್ಯಕ್ಕಾಗಿ, ನಮ್ಮ ಮೊದಲಿಗರು ಸಲ್ಲಿಸಿದ ಆತ್ಮಾಹುತಿಯ ಚಿತ್ರಗಳು ನನ್ನ ಕಣ್ಣೆದುರಿನಲ್ಲಿ ಮರಳಿ ಮರಳಿ ಅಂದು ಕುಣಿದಾಡಿ ಹೋದುವು. ಎಷ್ಟು ಜನ ತಾಯಿ-ತಂದೆಗಳು ತಮ್ಮ ಕರುಳನ್ನು ಕಳೆದು-ಕೊಂಡು ಕೂಗಿಟ್ಟರೊ! ಎಷ್ಟು ಜನ ಸುಮಂಗಲೆಯರು ತಮ್ಮ ಮಾಂಗಲ್ಯವನ್ನು ಕಳೆದುಕೊಂಡು ಮರುಗಿದರೊ! ಇನ್ನೆಷ್ಟು ಜನ ಪ್ರಣಯಿಗಳು ತಮ್ಮ ಪ್ರಿಯಜನರ ಅಗಲಿಕೆಯ ತಾಪದಿಂದ ಕಂಗೆಟ್ಟರೊ! ಅದನ್ನೆಲ್ಲ ಯಾರು ಅಳೆದು ಹೇಳಬಲ್ಲರು? ಅವರೆಲ್ಲರ ತ್ಯಾಗ-ತಪಸ್ಸುಗಳ ಪೂರ್ಣಫಲವೇ ಈ ಭವ್ಯಸಾಮ್ರಾಜ್ಯವೆಂಬ ಮಾತು ನನ್ನ ಮನದಲ್ಲೀಗ ನೆಟ್ಟುನಿಂತಿದೆ.

ಶ್ರೀಗಂಧದ ಮರವು ತನ್ನನ್ನು ತಾನು ಸುಟ್ಟುಕೊಂಡಾಗಲೆ ಲೋಕದ ವಾತಾವರಣಕ್ಕೆ ಕಂಪನ್ನು ನೀಡಬಲ್ಲುದು. ಇನಿದಾದ ಕಬ್ಬು ತನ್ನನ್ನು ತಾನು ಬಲಿಗೊಟ್ಟಾಗಲೆ ಬಹುಜನದ ಬಾಯಬರವನ್ನು ಕಳೆ ಯಲು ಸಮರ್ಥವಾಗುವುದು. ಅದರಂತೆಯೆ ಬಹುಜನದ ಹಿತವನ್ನು ಸಾಧಿಸುವುದಕ್ಕಾಗಿ ಕೆಲವೊಂದು ಜೀವಗಳು ತಪಿಸುತ್ತಿರಬೇಕಾದುದು ಅನಿವಾರ್ಯವೆಂಬ ಮಾತು ನನ್ನ ಹೃದಯಲ್ಲಿಂದು ಮನೆಮಾಡಿಬಿಟ್ಟಿದೆ. ಸಾಮ್ರಾಜ್ಯದ ಸಂರಕ್ಷಣೆ—ಸಂವರ್ಧನೆಗಳಿಗಾಗಿ ತಪಿಸುವ ಜೀವಗಳಲ್ಲಿ ನನ್ನದೊಂದನ್ನೂ ಜೊತೆಗೂಡಿಸಬೇಕೆಂದು ನಿರ್ಧರಿಸಿ ನಿಂತಿದ್ದೇನೆ.

ಮನಸ್ಸು—ಹೃದಯಗಳು ಸಮ್ಮತಿಸದಿದ್ದುದನ್ನು ಅನುಭವಿಸ ಬೇಕಾದ ಪ್ರಸಂಗವು ಬಂದಾಗ, ಆತ್ಮಹತ್ಯಮಾಡಿಕೊಂಡು ಸಾಯುವುದು ನಮ್ಮ ಹೆಣ್ಣುಮಕ್ಕಳದೊಂದು ಸ್ವಭಾವ. ಹಾಗೆ ವ್ಯರ್ಥವಾಗಿ ಸತ್ತು ಹೋಗುವುದನ್ನು ನನ್ನ ಮನಸ್ಸು ಒಪ್ಪದಾಗಿದೆ. ತಾನು ಅನಿಷ್ಟ

ಪ್ರಸಂಗದೊಡನೆ ಹೋರಾಡಿ, ತನ್ನವರಿಗೆ ಶುಭಪ್ರಸಂಗವನ್ನು ಸಮೀಪಕ್ಕೆ ತಂದುಕೊಡುವುದರಲ್ಲಿಯೆ ಮನುಷ್ಯಜನ್ಮದ ಸಾರ್ಥಕತೆಯೆಂದು, ನನ್ನ ಭಾವನೆ ನನಗೆ ಹೇಳುತ್ತಿದೆ. ಕುಮಾರ, ನೀವು ಅತಿಯಾಗಿ ಆಶ್ಚರ್ಯ ಪಟ್ಟುಕೊಳ್ಳಬಹುದು ; ಈ ಭಾವಪ್ರಚೋದನೆಯಿಂದಲೆ ನಾನಿಂದು ಮಹಾರಾಜರ ಪಾಣಿಗ್ರಹಣಕ್ಕೆ ಸಿದ್ಧಳಾಗಿದ್ದೇನೆ.

ನನ್ನ ಭವಿಷ್ಯಜ್ಜೀವನದ ಗತಿಯನ್ನು ನಾನು ಬಲ್ಲೆನು ; ಆದರೆ ಹೆಣ್ಣು ಅಯುಕ್ತವರನ ವಶಕ್ಕೆ ಹೋದರೆ, ಒಂದೆ ಒಂದು ಹೆಣ್ಣಿನ ಬಾಳು ಮಾತ್ರ ಬೀಳಾದೀತು ! ಸಾಮ್ರಾಜ್ಯವಧುವು ಅಯೋಗ್ಯವರನ ಸ್ವಾಧೀನೆ ಯಾದರೆ ಅದರ ದುಷ್ಪರಿಣಾಮದಿಂದ ನಾಡಿನ ಜನರ ಬದುಕೆಲ್ಲವೂ ಹಾಳಾಗಿ ಹೋದೀತು ! ಸಾಮ್ರಾಜ್ಯಲಕ್ಷ್ಮಿಗಾಗಿ ಒಳ್ಳೆಯ ವರನನ್ನು ಹುಡುಕುವುದಕ್ಕೆಂದು ನಾವೆಲ್ಲರೂ ಮಾಡಬೇಕಾಗಿರುವ ಇಷ್ಟಿಗಾಗಿ, ನಾನಿಂದು ಆಹುತಿಯ ಪಶುವಾಗಬೇಕೆಂದು ಗೊತ್ತುಮಾಡಿದ್ದೇನೆ.

ಕುಮಾರ, ಕೊನೆಯದೊಂದು ನನ್ನ ಮನದ ಅಪೇಕ್ಷೆಯನ್ನು ವಿದಿತಪಡಿಸುತ್ತೇನೆ; ಕೇಳಿ! ಈ ಕನ್ನಡ ಸಾಮ್ರಾಜ್ಯಸಿಂಹಾಸನದ ಮೇಲೆ ಕುಳಿತುಕೊಳ್ಳುವುದಕ್ಕೆ ನೀವೆ ಯೋಗ್ಯರೆಂದು ನನ್ನ ಅಭಿಪ್ರಾಯ. ಹಾಗಾದುದನ್ನು ಈ ಕಣ್ಣಿಂದ ಕಂಡರೆ, ನನ್ನ ಎಂತಹ ಸಂಕಟಸಾಗರ ಗಳನ್ನೂ ನಾನು ಕಾಲುಹೊಳೆಯಾಗಿ ಕಾಣುತ್ತೇನೆ. ಶ್ರೀಪಂಪಾ-ಪತಿಯೂ ಶ್ರೀಭುವನೇಶ್ವರಿಯೂ ಆ ದಿನವನ್ನು ಬೇಗನೆ ಒದವಿಸಲಿ !

ಎಂದೆಂದೂ ನಿಮ್ಮವಳಾದ

**ಹೇಮಾ"**

ಕೊನೆಯ ಸಲ ಓಲೆಯನ್ನು ಓದಿಯಾದ ಬಳಿಕ ರಾಜಶೇಖರನು ತನ್ನಲ್ಲಿಯೆ ಎಂದುಕೊಂಡ:

"ಧನ್ಯೆ ! ಧನ್ಯೆ ! ಹೇಮಾಂಬಿಕೆ, ನಿನ್ನಂತಹ ವೀರಪುತ್ರಿಯನ್ನು ಪಡೆದಿರುವ ನಮ್ಮ ವಿಜಯನಗರಕ್ಕೆ ಹೆದರಿಕೆಯೆಲ್ಲಿಯದು ? ನಿನ್ನ ಈ ಆತ್ಮಾಹುತಿಯ ಫಲದ ಅಮೃತವೃಷ್ಟಿಯು, ನಿಜವಾಗಿಯೂ ನಮ್ಮ ಸಾಮ್ರಾಜ್ಯನಂದನವನ್ನು ಕಾಪಾಡುವುದು. ಆದರೆ ಹೇಮಾ, ನನ್ನ

ಯೋಗ್ಯತೆ ನನಗೆ ಗೊತ್ತಿದೆ. ನಾನು ಸಿಂಹಾಸನವನ್ನು ಏರುವುದಕ್ಕಾಗಿ ಹುಟ್ಟಿ ಬಂದವನಲ್ಲವೆಂಬುದನ್ನು ನಿನ್ನ ಈ ತ್ಯಾಗದ ಪರಮಾವಧಿಯು ಸಿದ್ಧಗೊಳಿಸಿ ಬಿಟ್ಟಂತಾಯಿತು...."

ಹಠಾತ್ತಾಗಿ ದಂಡನಾಯಕ ಸಾಳುವನರಸಿಂಹನು, ರಾಜಶೇಖರನು ಕುಳಿತಿದ್ದಲ್ಲಿಗೆ ಬಂದುಬಿಟ್ಟನು. ಮುಂದಿದ್ದ ಓಲೆಯನ್ನು ಮರೆಗೆ ಸರಿಸುತ್ತ ರಾಜಶೇಖರನು, ಆತನನ್ನು ಆದರದೊಂದಿಗೆ ಬರಮಾಡಿಕೊಂಡು ಕೈಹಿಡಿದು ಆಸನದಲ್ಲಿ ಕುಳ್ಳಿರಿಸಿದನು.

ನರಸಿಂಹನಾಯಕನಿಗೆ ವಯಸ್ಸು ನಲುವತ್ತಾರು ನಲುವತ್ತೇಳರ ಹೊರಬಳಕ್ಕೆ ಇರಬಹುದು. ಆತನ ಹುರಿಕಟ್ಟಾದ ದೇಹ ಧೈರ್ಯ-ಶೌರ್ಯಗಳಿಗಾಗಿ ಸಾಕ್ಷ್ಯನುಡಿಯುತ್ತಿದ್ದಿತು. ಹರವಾದ ಹಣೆಯು ಬುದ್ಧಿಶಾಲಿಯೆಂಬುದಕ್ಕೆ ಗುರುತುಕೊಡುತ್ತಿದ್ದಿತು. ಅವನ ಗಂಭೀರವಾದ ಮುಖದ ಮೇಲೆ, ಕಂಡೂ ಕಾಣದಿರುವಂತೆ ಒಂದೆರಡು ಚಿಂತಾ-ರೇಷೆಗಳು ಮೂಡಿ ಮುಳುಗುತ್ತಿದ್ದುವು. ಧ್ವನಿಯಲ್ಲಿ ಸಿಡಿಲಿನ ಗಡುಸು ಇದ್ದಿತು. ಆಸನದಲ್ಲಿ ಕುಳಿತವನೆ ಮಾತಿಗೆ ಮೊದಲುಮಾಡಿದ:

"ಅಣ್ಣಾಜಿ.." ರಾಜಶೇಖರನನ್ನು ಸಾಮಾನ್ಯವಾಗಿ ಜನರೆಲ್ಲರೂ ಇದೇ ಹೆಸರಿನಿಂದ ಗುರುತಿಸುವುದು ಹೆಚ್ಚು. "ಅಣ್ಣಾಜಿ, ಇಂದು ಸಂತೋಷಸಭೆಯಿದ್ದ ಸಮಾಚಾರ ನಿಮಗೆ ಗೊತ್ತಿರಬಹುದು ಅಲ್ಲವೆ?"

"ನನಗೇನೂ ಗೊತ್ತಿಲ್ಲ; ಅದನ್ನು ತೆಗೆದುಕೊಂಡು ನಾನು ಮಾಡುವುದಾದರೂ ಏನು?"

"ಈ ಸಂದರ್ಭದಲ್ಲಿ ಹೀಗೆಂದು ಸುಮ್ಮನೆ ಕುಳಿತು ಬಿಟ್ಟರೆ ಆಗದು ಅಣ್ಣಾಜಿ! ಇಂದಿನ ಸಭೆಗೆ ನನಗೆ ಔತಣವಿಲ್ಲ; ಆದರೂ ನಾನಲ್ಲಿಗೆ ಹೋಗಲೆ ಬೇಕಾಗಿದೆ. ನನ್ನ ಜೊತೆಗೆ ನೀವೂ ಇರಬೇಕೆಂದು ನನ್ನ ಆಶೆ. ಅಲ್ಲಿ ನಡೆಯುವ ಅನಾಹುತಗಳನ್ನು ನಿಮ್ಮ ಕಣ್ಣುಗಳೂ ಅಷ್ಟು ಕಾಣಲಿ, ನಿಮ್ಮ ಕರುಳಿಗೂ ಸ್ವಲ್ಪ ಚುರುಕು ತಟ್ಟಲಿ!"

"ಅದನ್ನು ಕಂಡಾಗಲೆ ಚುರುಕು ತಟ್ಟುವುದೇ ನಾಯಕರೆ?

ನಾಡಿನ ಪರಿಸ್ಥಿತಿಯನ್ನು ನೋಡಿದರಾಗದೆ ! ಜನರ ಗೋಳಿನ ಕೂಗನ್ನು ಕೇಳಿದರಾಗದೇ ! "

"ನೀವಿಂದು ಬರಲೇಬೇಕು ಅಣ್ಣಾಜಿ; ಎಷ್ಟಾದರೂ ಜನರ ಕಣ್ಣಿಗೆ ನಾನು ಮಹಾರಾಜರ ಸೇವಕ; ದಾಕ್ಷಿಣ್ಯಬಿಟ್ಟು ನಡೆದರೆ ಜನತೆಯ ತಪ್ಪುತಿಳಿವಳಿಕೆಗೆ ಕಾರಣವಾದೀತು."

"ಮತ್ತೇನು ? ಇಂದಿನ ಸಭೆಯಲ್ಲಿ ವಿಶೇಷಕಾರ್ಯವೇನಾದರೂ ನಡೆಯುವುದಿದೆಯೇನು ?"

"ವಿಶೇಷಕಾರ್ಯ ನಡೆಯದ ದಿನಗಳೇ ಇಲ್ಲದಿರುವಾಗ, ಇಂದಿಷ್ಟೆ ನಡೆಯುವುದಿದೆಯೇನೆಂದು ಕೇಳಬೇಕೆ? ಏನು ಮಾಡುವುದು ಅಣ್ಣಾಜಿ? ಮಹಾರಾಜರಿಗೆ ತಮ್ಮ ವಿಷಯಲಾಲಸೆಯ ತೃಪ್ತಿಯ ಹೊರತು, ಸಾಮ್ರಾಜ್ಯಹಿತದ ಯಾವಕಾರ್ಯಗಳೂ ಕಾಣಲೊಲ್ಲವಾಗಿವೆ. ಹೊಣೆಗಾರಿಕೆಯ ಅಧಿಕಾರಗಳೆಲ್ಲ ಒಂದೊಂದಾಗಿ ಅನಧಿಕಾರಿಗಳಾದ ಹೇಡಿಗಳ ಕೈಸೇರಲು ತೊಡಗಿವೆ. ರಾಜ್ಯದ ಮುಖ್ಯಸೂತ್ರಗಳು ಸಾಮ್ರಾಜ್ಯ ವಿಘಾತಕರ ಸ್ವಾಧೀನಕ್ಕೆ ಹೋಗಲಾರಂಭಿಸಿವೆ. ನಮ್ಮ ನಿಸರ್ಗ-ಶತ್ರುಗಳಾದ ವಿಧರ್ಮಿಯರ ಕಡೆಗೆ ಒಂದರ ಹಿಂದೊಂದು ಗಡಿಯ ಕೋಟೆಯ ಆಧಿಪತ್ಯ ಹೋಗಲು ತೊಡಗಿದೆ. ರಾಜ್ಯಸೂತ್ರದ ಕಟ್ಟು ಸಡಿಲಾದುದರಿಂದಲೆ ಗೋವಾಂತಕ, ಚೌಲ, ದಾಬೋಲದಂತಹ ಸಾಗರ-ತೀರದ ಪ್ರದೇಶಗಳು ವೈರಿಗಳಿಗೆ ವಶವಾಗಿಹೋದುವು. ಇದರಿಂದ ಸಾಮ್ರಾಜ್ಯಕ್ಕೆ ಒದಗಿರುವ ವ್ಯಾಪಾರದ ನಷ್ಟವು ಅಷ್ಟಿಷ್ಟೆಂದು ಲೆಕ್ಕ ಮಾಡಿ ಹೇಳಲುಬರುವಂತಿಲ್ಲ. ಉತ್ತರದ ಗಡಿಯ ಕೋಟೆಯಾದ ಬೆಳಗಾಂವಿಯೂ,ನಮ್ಮಿಂದ ಸರಿಯಾದ ಸಹಾಯವು ದೊರೆಯದದುಕ್ಕಾಗಿ ಹಗೆಗಳ ಕೈಗೆ ಹೊರಟುಹೋಯಿತು. ಇದನ್ನೆಲ್ಲ ಕಣ್ಣಾರೆ ಕಾಣುತ್ತ ಕೈ-ಬಾಯಿ ಮುಚ್ಚಿ ಕುಳಿತಿರುವುದು ಹೇಗೆ? ನಾನು ಪರ್ಯಾಯವಾಗಿ ಮಹಾರಾಜರಿಗೆ ಬೇಕಾದಷ್ಟು ತಿಳುಹಿ ಹೇಳುತ್ತಿದ್ದರೂ, ಅವರ ಮನಸ್ಸನ್ನು ನನ್ನ ಮಾತುಗಳು ಮುಟ್ಟಲೆ ಒಲ್ಲವು!"

"ನನ್ನ ಎದೆಯನ್ನೂ ಹಗಲಿರುಳು ಇದೇ ಯೋಚನೆ ಸುಡುತ್ತಲಿದೆ

ದಂಡನಾಯಕರೆ! ಸುಖ-ಶಾಂತಿಗಳಿಗೆ ಆಗರವಾಗಿದ್ದ ನಮ್ಮ ನಾಡಿನಲ್ಲಿ ಅಶಾಂತಿಯ ಕೈಚಳಕವು ಎಲ್ಲೆಲ್ಲಿಯೂ ಕಾಣುತ್ತಲಿದೆ."

"ಇಂತಹ ವಿಷಮಸಂದರ್ಭದಲ್ಲಿಯೆ ಇನ್ನೊಂದು ಗಂಡಾಂತರವು ಎದುರಿಗೆ ಬಂದು ನಿಂತಿದೆ."

"ಅದೇನು ನಾಯಕರೆ?"

"ರಾಯಚೂರು, ಮುದಗಲ್ಲು ಕೋಟೆಗಳನ್ನು ತಮ್ಮವಾಗಿರಿಸಿ ಕೊಂಡು, ಸಾಮ್ರಾಜ್ಯದ ಅದೊಂದು ಗಡಿಯನ್ನು ಭದ್ರಪಡಿಸಿಕೊಳ್ಳ ಬೇಕಾದರೆ ನಮ್ಮ ಹಿಂದಣ ಇಬ್ಬರು ದೊರೆಗಳಿಗೆ, ಹಲವುಸಲ ಹೋರಾಡಿ ಹೋರಾಡಿ ನೆತ್ತರ ಹೊಳೆ ಹರಿಸಬೇಕಾಗಿ ಬಂದಿತು. ಈಗ ಈ ಮಹಾರಾಜರು, ರಾಯಚೂರು ಕೋಟೆಗೆ ನಾಷೀರ್‌ಖಾನನ ಮಗನನ್ನು ಅಧಿಕಾರಿಯನ್ನಾಗಿ ಮಾಡಿ ಕಳುಹಿಸುವವರಿದ್ದಾರೆ. ಹೀಗೆ ಮಾಡಿದರೆ ಹಸುಗಳ ಹಟ್ಟಿಯಲ್ಲಿಯೆ ಹುಲಿಗೆ ಮನೆಮಾಡಿಕೊಟ್ಟಂತೆ ಆಗದೆ?"

"ನಿಮಗೆ ಈ ಮಾತು ಹೇಗೆ ಗೊತ್ತಾಯಿತು?"

"ಏನೆಲ್ಲವೂ ಗೊತ್ತಾಗುವುದು. ಅಣ್ಣಾಜಿ, ಗೊತ್ತಾಗಿ ಮಾಡುವುದೇನು? ರಾಜನೆಂದು ಒಪ್ಪಿಕೊಂಡ ಮೇಲೆ ಆತನ ಆಜ್ಞೆಗೆ ಮನ್ನಣೆ ಕೊಡದಿದ್ದರೆ ಗತಿಯಿಲ್ಲ. ಕೊಟ್ಟರೆ ಸಾಮ್ರಾಜ್ಯದ ಬುಡದ ಮೇಲೆ ನಾವಾಗಿಯೆ ತಿಳಿದೂ ತಿಳಿದೂ ಕೊಡಲಿಯೇಟು ಹಾಕಿದಂತಾಗು ವುದು. ಮಹಾರಾಜರ ಚಿತ್ತ ಹೊರಳಿತೆಂದರೆ ನನ್ನ ಸ್ಥಾನಕ್ಕೂ ಯಾವಾಗ ಚಕ್ರಬಂದೀತೆಂಬುದನ್ನು ಹೇಳಲಿಕ್ಕೆ ಬರುವಂತಿಲ್ಲ. ಯಾವ ನಾದರೊಬ್ಬ ಸೂಳೆಯರ ದಳ್ಳಾಳಿಯು ಬಂದು ಈ ಅಧಿಕಾರಸ್ಥಾನದಲ್ಲಿ ಕುಳಿತುಕೊಳ್ಳಬಹುದು!'

"ಬಂದುದಕ್ಕೆ ಎದೆಗೊಡುವ ನಿಮ್ಮಂತಹ ಸಾಮ್ರಾಜ್ಯನಿಷ್ಠರು ಒಬ್ಬಿಬ್ಬರಾದರೂ ಅಲ್ಲಿ ಇಲ್ಲಿ ಸ್ಥಳ ಹಿಡಿದುಕೊಂಡು ಇದ್ದೀರೆಂತಲೆ ನಮ್ಮ ಸಾಮ್ರಾಜ್ಯದ ಸ್ತಂಭವು ಇದುವರೆಗೆ ಗಟ್ಟಿಗೊಂಡು ನಿಂತಿದೆ ನಾಯಕರೆ!"

"ಏನು ಸಾಮ್ರಾಜ್ಯನಿಷ್ಠರೊ, ಏನು ಕತೆಯೊ! ಪ್ರಜೆಗಳ ಹಿತಕ್ಕಾಗಿ ರಾಜರಿಗೆ ವಿರುದ್ಧವಾಗಿ ನಡೆಯುವುದೆಂದರೆ, ಸ್ಥಾನಚ್ಯುತ

ರಾಗುವ ಸಂದರ್ಭ! ಇನ್ನು ಬಂದುದೆಲ್ಲವನ್ನೂ ಬಾಯಿಮುಚ್ಚಿ ತಾಳಿ ಕೊಂಡಿರೋಣವೆಂದರೆ ಪ್ರಜೆಗಳಲ್ಲಿ ಅಸಂತುಷ್ಟಿ ಬಳೆಯುವ ಪ್ರಸಂಗ! ಇತ್ತ ರಾಜ್ಯದ ವ್ಯವಸ್ಥೆಯನ್ನು ನೋಡಬೇಕು; ಅತ್ತ ಅಧಿಕಾರಚ್ಯುತ ರಾಗಿ—ಅಸಂತುಷ್ಟರಾಗಿ—ಕುಳಿತಿರುವವರ ಮನಃಕ್ಷೋಭೆಗಳನ್ನು ಉಪಾಯಾಂತರದಿಂದ ಅಲ್ಲಿಂದಲ್ಲಿಯೆ ಹತ್ತಿಕ್ಕುತ್ತಿರಬೇಕು. ಇದೇ ವೇಳೆಯಲ್ಲಿ ನಮ್ಮ ನಮ್ಮಲ್ಲಿ ಕಲಹಗಳೆದ್ದರಂತೂ ಕೆಲಸವೆ ಬಗೆಹರಿಯಿತು. ದಾರಿಯನ್ನು ಕಾಯುತ್ತ ಕುಳಿತ ಶತ್ರುಗಳು ಮನೆಯಲ್ಲಿಯೆ ನುಗ್ಗಿಬಿಡ ಬಹುದು. ನನಗೀಗ ಎಲ್ಲ ಕಡೆಯಿಂದಲೂ ಕಗ್ಗತ್ತಲೆ ಕವಿದುಕೊಂಡು ಬರುವಂತೆ ಕಾಣುತ್ತಿದೆ. ತೀರ ಕಂಗೆಟ್ಟುಹೋಗಿದ್ದೇನೆ; ಮುಂದಣ ದಾರಿಯನ್ನೆ ಕಾಣದವನಾಗಿದ್ದೇನೆ."

"ಧೈರ್ಯಬಿಡಬೇಡಿ ನಾಯಕರೆ, ಕತ್ತಲೆಯ ಹಿಂದಣಿಂದ ಬೆಳಕು ಮತ್ತೆ ಬಂದೇ ಬರುತ್ತದೆ!"

"ಅಣ್ಣಾಜಿ, ನಮ್ಮದು ಮಾನವ ಪ್ರಯತ್ನ; ಹಾಗೆಂದು ಬಿಟ್ಟು ಸುಮ್ಮಗೆ ಕುಳಿತುಕೊಳ್ಳುವುದರಿಂದಂತೂ ಏನೂ ಆಗದು; ಮಾಡುವು ದನ್ನು ಮಾಡುತ್ತಿರಲೇ ಬೇಕು. ಮಹಾಮಹಿಮರಾದ ವಿದ್ಯಾರಣ್ಯರ ತಪಃಫಲದ ಬೆಂಬಲವು ನಮಗಿದ್ದರೆ, ಶ್ರೀವಿರೂಪಾಕ್ಷನ ಅಭಯಹಸ್ತವು ನಮ್ಮ ತಲೆಗೆ ನತ್ತಿಗೆಯಾಗಿದ್ದರೆ, ನಮ್ಮ ಪ್ರಯತ್ನದಿಂದ ಇಂತಹ ಕಾರಿರುಳಿನೊಳಗಿಂದಲೂ ಪಾರಾಗಿ ತಲೆಯೆತ್ತಿ ನಿಲ್ಲಬಹುದೆಂಬ ನಂಬುಗೆ ನನಗೂ ಇದೆ. ಆ ನಂಬುಗೆಯೆ ನನ್ನನ್ನು ನಿಮ್ಮಲ್ಲಿಗೆ ಆಗಾಗ ಕರೆದು ಕೊಂಡು ಬರುತ್ತಿದೆ. ಈ ದಿನದ ಸಭೆಯಲ್ಲಿ ನಡೆಯಬಹುದಾದ ಅನಾಹುತವನ್ನು ತಪ್ಪಿಸುವುದಕ್ಕಾಗಿ, ನಾವೀಗ ಜಾಗ್ರತಿಯಿಂದ ಕೆಲಸ ಮಾಡಬೇಕಾಗಿದೆ. ಅಧಿಕಪ್ರಸಂಗಿಯೆಂದು ಜನರು ಹಳಿದರೂ ಸರಿಯೆ; ನಾನಿಂದು ಸಂತೋಷಸಭೆಗೆ ಹೋಗಿಯೇ ತಿರುತ್ತೇನೆ; ನನ್ನೊಡನೆ ನೀವೂ ದಯೆಮಾಡಿಸಬೇಕು. ಒಬ್ಬನಿಗಿಂತ ಇಬ್ಬರಿದ್ದರೆ ಒಳ್ಳೆಯದು. ಪ್ರಸಂಗ ಹೇಗೆ ಹೇಗೆ ಒದಗಿ ಬರುವುದೊ ಹೇಳಲಿಕ್ಕೆ ಬರುವಂತಿಲ್ಲ."

"ಆಗಲಿ, ನಾನೂ ಬರುತ್ತೇನೆ."

"ಹಾಗಾದರೆ ನನಗಿನ್ನು ಅಪ್ಪಣೆ ಕೊಡಬೇಕು; ಬೇರೆಯು ಕೆಲಸಗಳಿವೆ."

ನರಸಿಂಹನಾಯಕನು ರಾಜಶೇಖರನನ್ನು ಬೀಳ್ಕೊಂಡು ಹೊರಟು ಬಿಟ್ಟನು. ರಾಜಶೇಖರನು ಕೆಲವು ನಿಮಿಷಗಳ ವರೆಗೆ ಕುಳಿತಲ್ಲಿಯೆ ಕುಳಿತಿದ್ದು, ಬಳಿಕ ತಟ್ಟನೆ ಮೇಲಕ್ಕೆದ್ದು, ದಿವಾನಖಾನೆಯಲ್ಲಿ ಅತ್ತಿತ್ತ ಅಡಿಯಾಡಲು ತೊಡಗಿದನು. ಆತನ ಮುಖವು ತಾನೆ ತಾನಾಗಿ ಉಪನಿಷನ್ಮಂತ್ರವೊಂದನ್ನು ಸ್ಫುಟವಾಗಿ ನುಡಿಯುತ್ತಲಿದ್ದಿತು :

"ಅಗ್ನೇ ನಯ ಸುಪಥಾರಾಯೇ ಅಸ್ಮಾನ್ ವಿಶ್ವಾನಿ ದೇವ
ವಯುನಾನಿ ವಿದ್ವಾನ್ ।
ಯುಯೋಧ್ಯಸ್ಮಜ್ಜುಹುರಾಣಮೇನೋ ಭೂಯಿಷ್ಠಾಂತೇ
ನಮ ಉಕ್ತಿಂ ವಿಧೇಮ ॥"

ಅಡಿಯಾಡುತ್ತಿರುವಾಗ ನಡುನಡುವೆ ರಾಜಶೇಖರನು, ತನ್ನ ಪ್ರೀತಿಯ ಚಿತ್ರಪಟದ ಕಡೆಗೆ ತನ್ನ ಧ್ಯಾನದೃಷ್ಟಿಗಳನ್ನು ಹೊರಳಿಸುತ್ತಿದ್ದನು.

---

## ೬ನೆಯ ಪರಿಚ್ಛೇದ

ಹೆಂಗುಸರ ಕೊರಳ ತಾಳಿಯ ಹೊರತು ಚಿನ್ನದ ಮುಖವನ್ನು ಕಾಣದ ಇಂದಿನ ನಮ್ಮ ದೈನ್ಯಜೀವನದಲ್ಲಿ, ವಿಜಯನಗರದ ವೈಭವದ ವಿಷಯದಲ್ಲಿ ಬರೆದುದನ್ನು ಓದಿದರೆ— ಯಾರಾದರೂ ಹೇಳುವುದನ್ನು ಕೇಳಿದರೆ— ಅದು ಈ ಯುಗದೊಳಗಿನ ಸಂಗತಿಯೇನೂ ಇರಲಿಕ್ಕಿಲ್ಲವೆಂದು ಎನಿಸುವುದು ಸಹಜ; ಬರಿಯೆ ನಮ್ಮ ಜನರೆ ಯಾರಾದರೂ ಅಂದಿನ ವರ್ಣನೆಯನ್ನು– ಇದ್ದುದಿದ್ದಂತೆಯೆ– ಬರೆದು ಇಟ್ಟಿದ್ದರೆ, ನಾವದನ್ನು ಉತ್ಪ್ರೇಕ್ಷೆ–ಅತಿಶಯೋಕ್ತಿಯ ಮಾತು–ಕಟ್ಟುಕತೆ–ಎಂದು ಬೀಳುಗಳೆದು ಬಿಡಬಹುದಾಗಿದ್ದಿತು ; ಆದರೆ ಕೇವಲ ಸತ್ಯೈತಿಹಾಸವನ್ನೆ ಬರೆದಿಡುವವರೆಂದು ನಮ್ಮ ಜನರು ನಂಬುತ್ತಿರುವ ಪಾಶ್ಚಾತ್ಯರು, ವಿಜಯನಗರದ

ಘನತೆಯ ಕಾಲದಲ್ಲಿ ನಮ್ಮ ನಾಡಿಗೆ ಬಂದಿದ್ದರು; ಅವರು ತಮ್ಮ ಕಣ್ಣಿಂದ ಕಂಡ ಅನೇಕ ಸಂಗತಿಗಳನ್ನು ವಿಶದವಾಗಿ ಬರೆದಿಟ್ಟಿರುವರು. ಅವರ ವಾಸ್ತವವರ್ಣನೆಯನ್ನು ಓದಿದಲ್ಲಿ, ವಿಜಯನಗರದ ವೈಭವ-ಜೀವನವು ಇದೇ ಯುಗಕ್ಕೆ ಸೇರಿದುದು– ನಮ್ಮ ಮೊದಲಿಗರಾದ ಕನ್ನಡಿಗರೆ ಅದನ್ನು ಅನುಭವಿಸಿದವರು– ಎಂಬುದರ ಬಗೆಗೆ ಸಂದೇಹ ಪಡಬೇಕಾದ ಕಾರಣವಿಲ್ಲವೆಂದು ನಮ್ಮವರಿಗೆ ಕಾಣಬಹುದು.

ಈ ನಮ್ಮ ಕತೆಯು ಬಳಿಕಾದ ಕೃಷ್ಣದೇವರಾಯನ ಕಾಲದ ದಿವ್ಯ ವೈಭವವನ್ನು ಬಿಟ್ಟು ಬಿಡೋಣ; ಇದಕ್ಕೆ ಮೊದಲು ೫೦–೫೫ ವರುಷ ಗಳಿಗೆ ಹಿಂದೆ, ವಿಜಯನಗರಕ್ಕೆ 'ನಿಕೋಲೊ' ಎಂಬ ಹೆಸರಿನ ಇಟಲಿಯ ಪ್ರವಾಸಿಯೊಬ್ಬನು ಬಂದು ಹೋಗಿದ್ದನು. ಅವನು ಪೋಪನ ಕಾರ್ಯ-ಭಾರಿಯಾದ 'ಬ್ರಾಸ್ಸಿಯೋಲಿನಿ' ಎಂಬವನಿಗೆ ಬರೆದ ಕಾಗದದಲ್ಲಿ, ವಿಜಯ ನಗರದ ಮಹಿಮೆಯ ವರ್ಣನೆಯನ್ನು ಮುಕ್ತಕಂಠದಿಂದ ಮಾಡಿದ್ದಾನೆ. ಅವನು ಬರೆದ "ವಿಜಯನಗರವು ಪ್ರಚಂಡವಾದ ಪಟ್ಟಣವು........ಇದರ ಕೋಟೆಯ ಸುತ್ತಳತೆ ಅರುವತ್ತು ಮೈಲು........ಇಲ್ಲಿ ಶಸ್ತ್ರಧಾರಣ ಸಮರ್ಥರಾದ ಜನರ ಸಂಖ್ಯೆಯೆ ತೊಂಬತ್ತುಸಾವಿರಕ್ಕೆ ಹೆಚ್ಚಾದೀತು. ....ಇಲ್ಲಿಯ ದೊರೆಯು ಭಾರತದ ರಾಜರಲ್ಲೆಲ್ಲ ಶ್ರೇಷ್ಠನೂ ಪ್ರಬಲನೂ ಇರುತ್ತಾನೆ." ಎಂಬ ಈ ಮಾತಿನ ಮುತ್ತುಗಳು ಯಾವ ಕನ್ನಡಿಗನ ಅಭಿಮಾನದೆದೆಯನ್ನು ಅಲಂಕರಿಸಲಿಕ್ಕಿಲ್ಲ!

ನಿಕೋಲೋನ ತರುವಾಯ ಮುಂದೆ ಇಪ್ಪತ್ತು ವರ್ಷಗಳಿಗೆ 'ಅಬ್ದುರ್‌ರಝಾಕ್' ಎಂಬ ಹೆಸರಿನ ಇರಾಣದ ರಾಯಭಾರಿಯೊಬ್ಬನು ವಿಜಯನಗರಕ್ಕೆ ಬಂದು, ಕೆಲವು ದಿನಗಳ ವರೆಗೆ ಇದ್ದುಹೋದನು. ಅವನು ಬರೆದಿಟ್ಟ ವರದಿಯಂತೂ ರೋಮಹರ್ಷಕವಾಗಿದೆ; ಓದಿ ಕೇಳಿದ ಇಂದಿನ ಕನ್ನಡಿಗರು, ಹೆಮ್ಮೆಯಿಂದ ಒಮ್ಮೆಯುವರು ಇಮ್ಮೆಯುವ ರಾಗುವಂತಿದೆ. ಆತನು ಬರೆದುದು ಹೀಗೆ:—

"ವಿಜಯನಗರದಂತಹ ರಮಣೀಯವಾದ–ಪ್ರೇಕ್ಷಣೀಯವಾದ ಪಟ್ಟಣವನ್ನು ಯಾವ ಕಾಲದಲ್ಲಿಯೂ ಯಾರೂ ನೋಡಿರಲಾರರು. ಇದು-ವರೆಗಿನ ಜಗತ್ತಿನಲ್ಲಿ ಇಂತಹದು ಇನ್ನೊಂದು ಪಟ್ಟಣವು ಇದ್ದಿತೆಂಬ

ಕತೆಯನ್ನೂ ಯಾರೂ ಕೇಳಿರಲಾರರು. ಇದರ ರಚನೆಯ ಅದ್ಭುತತೆಯೆ ಅದೊಂದು ವಿಲಕ್ಷಣವಾದುದಾಗಿದೆ.

*　　　*　　　*　　　*

" ಇಲ್ಲಿ ಯಾವಾಗಲೂ ಎಲ್ಲೆಲ್ಲಿಯೂ ಗುಲಾಬಿಹೂವಿನ ವ್ಯಾಪಾರವು ನಡೆದಿರುವುದು. ಇಲ್ಲಿಯ ಜನರು ಆ ಹೂಗಳನ್ನು ಆಹಾರಕ್ಕಿಂತ ಹೆಚ್ಚಾಗಿ ಕಾಣುವರು. ವ್ಯಾಪಾರಿಗಳು ಮುತ್ತು, ಮಾಣಿಕ, ಪಚ್ಚೆ, ವಜ್ರ ಮೊದಲಾದ ನವರತ್ನಗಳ ಪಸರಗಳನ್ನು ನಿರಾತಂಕವಾಗಿ ಅಂಗಡಿ-ಬೀದಿಗಳ ಬಯಲಲ್ಲಿಯೆ ಹಚ್ಚಿಕೊಂಡು ಕುಳಿತಿರುತ್ತಾರೆ. ಈ ಸುಂದರವಾದ ಪ್ರದೇಶದಲ್ಲಿ ಅಲ್ಲಿಗಲ್ಲಿಗೆ—ಸಂದು ಬಿರುಕುಗಳಿಲ್ಲದಂತಹ—ಸ್ವಚ್ಛವಾದ ಕಲ್ಲುಗಚ್ಚಿನ ಕಾಲುವೆಗಳಿದ್ದು, ಅವುಗಳಲ್ಲಿ ಸವಿಯಾದ ತಿಳಿನೀರು, ಯಾವಾಗಲೂ ತುಂಬಿ ತುಂಬಿ ಹರಿಯುತ್ತಿರುವುದು. "

*　　　*　　　*　　　*

" ರಾಜಪ್ರಾಸಾದದ ಎಡಗಡೆಗೆ ಭವ್ಯವೂ ಎತ್ತರವೂ ಆದ ಮುಖ್ಯ ಸಭಾಮಂದಿರವಿದೆ. ಅದು ಮತ್ತೊಂದು ಅರಮನೆಯಂತೆಯೆ ಒಪ್ಪುತ್ತಿದೆ. ಅದರ ಮುಂಗಡೆಯ ಚಾವಡಿಯು ಇಪ್ಪತ್ತು ಗಜ ಉದ್ದ, ಹತ್ತು ಗಜ ಅಗಲ ಇರುತ್ತದೆ. ರಾಜ್ಯದ ಕರಣಿಕರೆಲ್ಲರೂ ಇಲ್ಲಿಯೆ ಕುಳಿತುಕೊಳ್ಳುವರು. ಎಲ್ಲ ವಿಭಾಗಗಳ ಲೆಕ್ಕ-ಪತ್ರದ ಕಡತಗಳ ಸಂಗ್ರಹವೂ ಇಲ್ಲಿಯೆ ಇದೆ. ನಟ್ಟ ನಡುವೆ ಎತ್ತರವಾದುದೊಂದು ಜಗುಲಿಯಿದ್ದು, ಅದರ ಮೇಲೆ ಕರಣದ ಮುಖ್ಯಾಧಿಕಾರಿಯು ಕುಳಿತಿರುತ್ತಾನೆ. ಇವನನ್ನು 'ದಣ್ಣಾಯಕ' ಎಂಬ ಹೆಸರಿನಿಂದ ಕರೆಯುವರು. ಅವನ ಒಳಿಯಲ್ಲಿ ಕಟ್ಟಿಗೆಯಾಳುಗಳು ಸಾಲುಸಾಲಾಗಿ ನಿಂತಿರುವರು. ದಣ್ಣಾಯಕನು ಅಥವಾ ಮಂತ್ರಿಯು ಪ್ರಜೆಗಳ ದೂರು-ಬಿನ್ನಪಗಳನ್ನು ಕೇಳಿಕೊಂಡು, ಉಚಿತ ನಿರ್ಣಯಗಳನ್ನು ಕೊಡುವನು. ಆತನ ನಿರ್ಣಯವೆ ಕೊನೆಯದು. ಅದನ್ನು ತಿರುಗಿಸುವ ಅಧಿಕಾರವು ಯಾರಿಗೂ ಇರದು. ಮಂತ್ರಿಯು ತನ್ನ ಎಲ್ಲ ಕೆಲಸಗಳನ್ನು ತಿರಿಸಿಕೊಂಡು, ಕೊನೆಗೆ ಅಲ್ಲಿಯ ಏಳು ಬಾಗಿಲುಗಳನ್ನು ದಾಟಿ ದೊರೆಯ ಬಳಿಗೆ ಹೋಗುವನು ; ಆತನೆದುರಿಗೆ ತನ್ನ ಅಂದಿನ ಕಾರ್ಯವಿವರದ ವರದಿಯನ್ನು ಒಪ್ಪಿಸುವನು. "

*　　　*　　　*　　　*

"ಈ ರಾಜ್ಯದ ಜನಸಂಖ್ಯೆಯು ಅಗಣಿತವಾಗಿದೆ. ಅದನ್ನು ಪರಿಷ್ಕಾರವಾಗಿ ಹೇಳಬೇಕೆಂದರೆ ಸ್ವಲ್ಪದರಲ್ಲಿ ಆಗದು. ದೊರೆಗಳ ಸ್ವಂತದ ಅರಮನೆಯಲ್ಲಿಯೆ ಅದೆಷ್ಟೊ ಕಲ್ಲುಗಚ್ಚಿನ ಕಿರುಮನೆಗಳಿವೆ; ಅವೆಲ್ಲವುಗಳು ಚಿನ್ನ–ಬೆಳ್ಳಿಗಳಿಂದ ತುಂಬಿ ತುಳುಕುತ್ತಿವೆ."

* * * *

"ಸಭಾಮಂದಿರದ ಎದುರಲ್ಲಿಯೆ ಗಜಶಾಲೆಯಿದೆ. ಅಲ್ಲಿ ಒಂದೊಂದು ಆನೆಗಾಗಿ ಬೇರೆ ಬೇರೆ ಕೊಟ್ಟಿಗೆಗಳಿವೆ. ಕೊಟ್ಟಿಗೆಗಳ ಗೋಡೆಗಳು ದಪ್ಪಗಿದ್ದು, ಗಟ್ಟಿಮುಟ್ಟಾಗಿವೆ. ಮೇಲಿದ್ದ ಉಪ್ಪರಿಗೆಗಳು ದೊಡ್ಡ ದೊಡ್ಡ ಕಟ್ಟಿಗೆಯ ತೊಲೆಗಳ ಮೇಲೆ ನಿಂತುಕೊಂಡಿವೆ. ಟಂಕಸಾಲೆಯ ಸಮೀಪದಲ್ಲಿಯೆ ವಿಜಯನಗರದ ದುರ್ಗಾಧಿಪತಿಯ ಮನೆಯಿದೆ. ಅಲ್ಲಿ ಯಾವಾಗಲೂ ಹನ್ನೆರಡು ಸಾವಿರಕ್ಕೆ ಕಡಿಮೆಯಿಲ್ಲ ದಷ್ಟು ಸೈನಿಕರು ಶಸ್ತ್ರಾಸ್ತ್ರಗಳಿಂದ ಸಜ್ಜುಗೊಂಡು ನಿಂತಿರುವರು. ಟಂಕಸಾಲೆಯ ಹಿಂಬದಿಗೊಂದು ಮುಖ್ಯರಾಜಬೀದಿಯಿದೆ. ಇದು ನೇರ ವಾಗಿ ಮುನ್ನೂರು ಗಜ ನಿಡಿದಾಗಿದ್ದು, ಇಪ್ಪತ್ತು ಗಜ ಅಗಲಾಗಿದೆ. ಈ ಬೀದಿಯ ಎರಡು ಬದಿಗಳಲ್ಲಿಯೂ ಸುಂದರವಾದ ಮಹಡಿಯ ಮನೆ ಗಳಿರುವುವು. ಮನೆಗಳ ಮುಂಗಡೆಯಲ್ಲಿ ದಾರಿಯುದ್ದಕ್ಕೂ, ಕಲ್ಲುಗಳಲ್ಲಿ ಕಡೆದು ಮಾಡಿದ ವಿವಿಧಾಕಾರದ ವಿಶ್ರಾಮಾಸನಗಳುಂಟು. ರಾಜ-ಬೀದಿಯ ಎರಡೂ ಕಡೆಗಳಲ್ಲಿಯೂ, ಕಲ್ಲಿನಿಂದ ಮಾಡಿದ ಸಿಂಹ, ಹುಲಿ, ಚಿರತೆ ಮೊದಲಾದ ಮೃಗಾಕೃತಿಗಳನ್ನು ಸಾಲಾಗಿ ಇರಿಸಲಾಗಿದೆ."

ಮೇಲಿನ ವರ್ಣನೆ ಕಾದಂಬರಿಕಾರನ ಕಲ್ಪನಾಕಾಶದಲ್ಲಿಯದಲ್ಲ; ಕ್ರಿ. ಶ. ೧೪೪೩ ರಲ್ಲಿ ಅಬ್ದುರ್‌ರಝಾಕನು ಬರೆದಿಟ್ಟ ವಾಸ್ತವಸಂಗತಿ ಯಿದು. ಮಹಾಪ್ರತಾಪಶಾಲಿಯಾದ ಪ್ರೌಢದೇವರಾಯನ ಆಳಿಕೆ ಯಲ್ಲಿಯೂ ಮಲ್ಲಿಕಾರ್ಜುನದೇವನ ಆಳಿಕೆಯಲ್ಲಿಯೂ ವಿಜಯನಗರದ ರಮಣೀಯತೆಯು ಇನ್ನೂ ಎಷ್ಟರ ಮಟ್ಟಿಗೆ ಹೆಚ್ಚಿದ್ದಿತೊ! ಸಿರಿ-ಸಂಪತ್ತು ಇನ್ನೂ ಎಷ್ಟೊಂದು ಬಳೆದುಬಂದ್ದಿತೊ!

ಅರಮನೆಯಲ್ಲಿಯ ಚಿಕ್ಕ ಓಲಗಸಾಲೆಯಿಂದು ಸಂತೋಷಸಭೆಗಾಗಿ ಸುಸಜ್ಜಿತವಾಗಿರುವುದು. ಹಸ್ತಿದಂತದ ಹಲಗೆಗಳನ್ನೊಂದಿಸಿ, ಚಿನ್ನದ

ಮಿರುಗಿನ ಕುಸುರುಗೆಲಸಮಾಡಿದ್ದ ಗೋಡೆ-ಮಾಡುಗಳು, ಬೆಳ್ಳಿ-ಬಂಗಾರದ ಬಳ್ಳಿಬಳ್ಳಿಗಳ ತಗಡುಗಳ ಆವರಣದಲ್ಲಿ ಮರೆಗೊಂಡ ಕಂಬ ತೊಲೆಗಳು, ನಿಂತವರ ಮೈಯೆಲ್ಲವೂ ಪಡಿಮೂಡುವಂತಹ ನೀಲಪ್ರಸ್ತರದ ನೆಲಗಟ್ಟು, ಇವೆಲ್ಲವೂ ಮಂದಿರದ ನಿರ್ಮಾಣಕಾಲದಿಂದಲೂ ಇದ್ದು ವುಗಳೆ; ಇಂದಿನ ವಿಶೇಷಸಿದ್ಧತೆಯೆಂದರೆ, ಬಣ್ಣಬಣ್ಣದ ಹೂಬಳ್ಳಿ-ಸುಳಿವುಗಳುಳ್ಳ ಹಾಸುಗೆಗಳು; ಸದಸ್ಯರೆಲ್ಲರಿಗೂ ಸಾಲುವಷ್ಟು ಸಾಲು-ಸಾಲಾಗಿ ಇರಿಸಿದ– ಕಲಾಬತ್ತಿನ ಹೂಗಳಿಂದ ಕೂಡಿದ– ರೇಶಿಮೆಯ ಬಟ್ಟೆಯ ಗಾದಿ, ಒರಗುದಿಂಬುಗಳು; ಮಹಾರಾಜರು ಕುಳಿತು ಕೊಳ್ಳುವ ಉಚ್ಚಾಸನದ ಪಾವಟಿಗೆಯಿಂದ ಮೊದಲು ಮಾಡಿ ಓಲಗ-ಸಾಲೆಯ ಮುಂಬಾಗಿಲ ವರೆಗೂ, ದಾರಿಯನ್ನು ಗುರುತಿಸುವಂತೆ ಹಾಕಿದ್ದ ಕೆಂಪು ಮಖಮಲ್ಲಿನ ಪಾವುಡ; ದೊರೆಗಳು ಕುಳಿತುಕೊಳ್ಳುವ ಗದ್ದುಗೆಯ ಮೇಲುಬದಿಯಲ್ಲಿ ಮುಗಿಲುಬಣ್ಣದ ಬಟ್ಟೆಯಿಂದ ಕಮಾನಾಕೃತಿಯಾಗಿ ಕಟ್ಟಿದ್ದ ಮೇಲ್ಕಾಸು ಇವೇ ಮೊದಲಾದುವು.

ಮೇಲ್ಕಾಸಿನ ಬಟ್ಟೆಯಲ್ಲಿ ಚಿಕ್ಕ ಚಿಕ್ಕ ಹರಳುಗಳನ್ನು ಕೂಡಿಸಿ ಹೆಣೆದ ಜರಿಯ ಹೂಗಳು ಅಲ್ಲಲ್ಲಿ ತಾರೆಗಳಂತೆ ಮಿನುಗಿ, ಮೇಲ್ಕಾಸು ಮುಗಿಲಿನ ಭ್ರಾಂತಿಯನ್ನು ಹುಟ್ಟಿಸುತ್ತಿದೆ. ದೊರೆಗಳ ಆಸನದ ಮೇಲೆ ಇರಿಸಿದ್ದ ಗಾದಿ-ದಿಂಬುಗಳ ಸೊಬಗು, ನೋಡುವವರಲ್ಲಿ ಇಲ್ಲದ ಆಶೆಯನ್ನು ಹುಟ್ಟಿಸುವಂತಿದೆ. ಮುಖ್ಯಾಸನದ ಎಡಕ್ಕೆ ಬಲಕ್ಕೆ ಅದನ್ನೇ ಅನುಕರಿಸುವಂತಹ, ಗಾತ್ರದಲ್ಲಿ ಅದಕ್ಕೂ ಕಿರಿದಾಗಿರುವ ಕೆಲವು ಪೀಠ ಗಳಿರುವುವು. ಅವೆಲ್ಲ ಮಹಾರಾಜರ ತೀರ ಬಳಿಯ ಜನರಿಗಾಗಿ ಏರ್ಪಡಿಸಿ ದಂತಹವು. ಮುಖ್ಯಾಸನದ ಹಿಂಗಡೆಗೆ, ಎಡಬದಿಯಲ್ಲಿ ಎತ್ತರವಾದು ದೊಂದು ಜಗುಲಿಯಿದೆ. ಅದರ ಮೇಲೆ ಹುರಿರೇಶಿಮೆಯಿಂದ ಜಾಳಿಗೆ ಜಾಳಿಗೆಯಾಗಿ ಹೆಣೆದ ಬಟ್ಟೆಯೊಂದನ್ನು ಹಾಸಿದ್ದು, ಅದರ ಮೇಲೆ ಬಗೆಬಗೆಯ ಮದ್ಯಗಳಿಂದ ತುಂಬಿರುವ ಸುಂದರಪಾತ್ರೆಗಳನ್ನು ಇರಿಸ ಲಾಗಿದೆ. ವಿವಿಧಾಕಾರದ ಪಾನಪಾತ್ರೆಗಳು ಚಿನ್ನದ ದೊಡ್ಡ ತಟ್ಟೆಗಳೆರಡರಲ್ಲಿ ಚಿತ್ರವಿಚಿತ್ರವಾಗಿ ಬಾಯಿತೆರೆದುಕೊಂಡು ಕುಳಿತಿವೆ. ಬೇರೆ ಒಂದೆರಡು ತಟ್ಟೆಗಳಲ್ಲಿ ತಾಂಬೂಲದ ಸಾಹಿತ್ಯಗಳನ್ನು ತುಂಬಿ ಇರಿಸಲಾಗಿದೆ.

ಸಭಾಮಂದಿರದ ಮಧ್ಯದಲ್ಲಿ ನರ್ತಕಿಯರಿಗಾಗಿ ಕಾದಿಟ್ಟ ಸ್ಥಳವಿರುವುದು; ಸಭಿಕರೆಲ್ಲರಿಗೂ ಅಲ್ಲಿ ನಡೆಯುವ ಕಾರ್ಯಕ್ರಮವು ಕೇಳುವಂತೆ, ಕಾಣುವಂತೆ ವ್ಯವಸ್ಥೆಯಿರುವುದು.

ಔತಣವಿದ್ದ ಜನರು ಒಬ್ಬೊಬ್ಬರಾಗಿ ಬಂದು, ತಮ್ಮ ತಮ್ಮ ಆಸನಗಳನ್ನು ಅಲಂಕರಿಸಲು ತೊಡಗಿದರು. ಅರಮನೆಯ ಹೆಬ್ಬಾಗಿಲೆದುರಲ್ಲಿ ಆನೆ, ಕುದುರೆ, ಅಂದಣ, ಕಿರುದೇರು ಮೊದಲಾದ ವಾಹನಗಳ ಗೊಂದಣವೆ ಗೊಂದಣ. ವೆಂಕಟನಾಯಕನು ಇಂದಿನ ಸನ್ಮಾನ್ಯ ಸಭಾಸದ. ರಾಯನ ಬಲಗಡೆಯ ಮೊದಲನೆಯ ಆಸನವು ಇಂದು ವೆಂಕಟನಾಯಕನಿಗೆ ಸಲ್ಲಬೇಕಾಗಿದ್ದಿತು. ಅದು ಯಾವಾಗಲೂ ನರಸಿಂಹಮಂತ್ರಿಯ ಮರ್ಯಾದೆಯ ಸ್ಥಳವು. ಇಂದು ಅವನಿಗೆ ಔತಣವಿರಲೇ ಇಲ್ಲ. ಎರಡನೆಯದು ನಾಸೀರ್ ಮಹಮ್ಮದನದು. ಎಡಗಡೆಯ ಮೊದಲನೆಯ ಆಸನವಿಂದು ಷೇರ್ ಉದ್ದೀನನಿಗೆಂದು ನಿಯಾಮಕವಾಗಿದ್ದಿತು. ಯಾರಿಗಾದರೂ ಹೊಸತಾಗಿ ಮಹಾರಾಜರಿಂದ ಅಧಿಕಾರ, ಪದವಿ, ಮರ್ಯಾದೆ, ಮೆಚ್ಚುಗಳು ಸಲ್ಲುವುದಿದ್ದಲ್ಲಿ, ಅವರಿಗಾಗಿ ಕಾದಿಟ್ಟ ಸ್ಥಳವದು. ಇನ್ನುಳಿದ ಆಸನಗಳು ಬೇರೆ ಬೇರೆ ಜನರ ಅಧಿಕಾರ-ಪದವಿಗಳಿಗೆ ಅನುಗುಣವಾಗಿ ಕಾದಿರಿಸಿದುವು ಇದ್ದುವು. ಎಲ್ಲ ಆಸನಗಳೂ ಸಭಾಸದರಿಂದ ತುಂಬಿದುವು. ವೆಂಕಟನಾಯಕ, ನಾಸಿರ್ ಮುಹಮ್ಮದ್, ಷೇರ್ ಉದ್ದಿನ್, ದಿಲಾವರಖಾನ್ ಇವರು ಕೂಡ ಬಂದು ಕುಳಿತರು. ಎಷ್ಟೊಂದು ಜನರು ಬಂದರೂ ಸಭೆಯಲ್ಲಿ ಸೊಲ್ಲಿಲ್ಲ, ಗುಲ್ಲು-ಗಲಾಟೆಯಿಲ್ಲ. ಮೆತ್ತನೆಯ ಹಾಸುಗೆಯ ಮೇಲೆಯೆ ನಡೆದಾಡುತ್ತಿದ್ದುದರಿಂದ ಅಡಿಯಿಡುವ ಸಪ್ಪಳು ಕೂಡ ಕೇಳುತ್ತಿರಲಿಲ್ಲ. ಬರುವವರು ಯಂತ್ರದಂತೆ ಬರುವರು; ತಮ್ಮ ತಮ್ಮ ಸ್ಥಳದಲ್ಲಿ ಕುಳಿತುಕೊಳ್ಳುವರು. ಎಲ್ಲೆಲ್ಲಿಯೂ ಮೌನ, ಎಲ್ಲೆಲ್ಲಿಯೂ ನಿಶ್ಚಲತೆ.

ಇದ್ದುದಿದ್ದ ಹಾಗೆಯೆ ಅರಮನೆಯ ಮುಂಬಾಗಿಲ ಮೇಲುಮಾಳಿಗೆಯಲ್ಲಿ ವಾದ್ಯಗಳು ಮೊಳಗಲು ಆರಂಬಿಸಿದುವು. ಓಲಗಸಾಲೆಯ ಹೊರಗಣಿಂದ “ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರಾ! ಶ್ರೀಕರ್ಣಾಟಲಕ್ಷ್ಮೀಕರಕಮಲಧರಾ! ವಿಜಯನಗರವೈಭವವನಿತಾ ಮನೋಹರಾ!

ಯವನ ಸುರತ್ರಾಣ ತ್ರಾಣವಿದಾರಾ! ನಿಜಭುಜದಂಡ ಶಕ್ತಿ ಪ್ರಚಂಡಾ! ಮೂರುರಾಯರನಾಳ್ವ ಗಂಡಾ! ಹಿಂದೂರಾಯ ಸುರತ್ರಾಣಾ! ದೇವದ್ವಿಜಸೇವಾಧುರೀಣಾ! ಶ್ರೀಇಮ್ಮಡಿ ವಿರೂಪಾಕ್ಷ ಮಹಾ-ರಾಯ! ಭೋ! ಪರಾಕು!" ಎಂಬ ಕಟ್ಟಿಗೆಕಾರರ ಕೂಗು, ಸಭಾಸದರ ಕಿವಿದೆರೆಯನ್ನು ತುಂಬಿತು. ಅರೆನಿಮಿಷ ಸಭೆಗೆ ಸಭೆಯೆ ಅಲುಗಾಡಿದಂತೆ ಕಂಡಿತು. ಬಾಗಿಲಲ್ಲಿ ಮುಂಗಡೆಯ ಬೆತ್ತದವನನ್ನು ಕಂಡೊಡನೆಯೆ ಸಭಾಸದರೆಲ್ಲರೂ ಓರಣಕ್ಕೆ ಭಂಗಬಾರದಂತೆ ಒಮ್ಮೆಲೆ ಎದ್ದುನಿಂತರು.

ವಿರೂಪಾಕ್ಷದೇವರಾಯನು ಸಂದರ್ಭೋಚಿತ ಉಡುಗೆ-ತೊಡಿಗೆಗಳೊಂದಿಗೆ, ರಾಜೋಚಿತ ಪರಿವಾರದೊಂದಿಗೆ ಓಲಗಸಾಲೆಯೊಳಕ್ಕೆ ಬಿಜಯಮಾಡಿಸಿದನು. ಆಸನದ ಮೇಲೆ ಕುಳಿತುಕೊಳ್ಳುತ್ತಿರುವಾಗ, ಮತ್ತೊಮ್ಮೆ ಕಟ್ಟಿಗೆಯವರಿಂದ ದೊರೆಗಳ ಬಿರುದಾವಳಿಯ ಉಗ್ಗಡಣೆಯಾಯಿತು. ಆಸನವನ್ನಲಂಕರಿಸಿದೊಡನೆಯೆ ನೇತ್ರಸಂಕೇತದಂತೆ ಸದಸ್ಯರೆಲ್ಲರೂ ಕೆಳಕ್ಕೆ ಕುಳಿತುಕೊಂಡರು.

ಸಂಪ್ರದಾಯದಂತೆ ಆರಿಸಿದ ಕೆಲವು ಜನ ಅಧಿಕಾರಿಗಳು, ಸಾಮಂತ-ಮನ್ನೆಯರು ಒಬ್ಬೊಬ್ಬರಾಗಿ ಬಂದು, ರಾಯನೆದುರು ನಿಂತು, ಪ್ರಣಾಮಗಳನ್ನು ಸಲ್ಲಿಸಿದರು. ಬಳಿಕ ದೊರೆಯು ಕುಳಿತಲ್ಲಿಂದಲೆ ಸಭಾಸದರನ್ನು ಉದ್ದೇಶಿಸಿ ಮಾತನಾಡಲು ತೊಡಗಿದನು:

"ಸಭಿಕರೆ, ವೆಂಕಟನಾಯಕರು ತಮ್ಮ ಕನ್ಯೆಯನ್ನು ನಮಗೆ ಕೊಟ್ಟು, ಅರಮನೆತನದವರೊಂದಿಗೆ ಸಂಬಂಧಿಕರಾಗಲಿರುವುದರಿಂದ, ಅವರ ಮರ್ಯಾದೆಗಾಗಿ ಈ ಸಂತೋಷಸಭೆಯನ್ನು ನೆರೆಯಿಸಲಾಗಿದೆ. ಇದಲ್ಲದೆ ಇನ್ನೂ ಒಂದು ಮಹತ್ತ್ವದ ಕಾರ್ಯಭಾರವು ಇಂದು ನಡೆಯಬೇಕಾಗಿದೆ. ಅದಾವುದೆಂದರೆ ನಮ್ಮ ತರುಣವೀರರಾದ– ಸಾಮ್ರಾಜ್ಯದ ವಿಶ್ವಾಸದ ಏಕನಿಷ್ಠ ಸೇವಕರಾದ—ಷೇರ್ ಉದ್ದೀನರಿಗೆ 'ಅಮೀನ್ ಉಲ್‌ಮುಲ್ಕ್' ಎಂಬ ಬಿರುದಿನೊಂದಿಗೆ ರಾಯಚೂರು ಕೋಟೆಯ ಮುಖ್ಯಾಧಿಕಾರವನ್ನು ಒಪ್ಪಿಸಬೇಕಾಗಿದೆ........"

ಸಭೆಯಲ್ಲಿ ಕೆಲವು ಜನರು ವಿಸ್ಮಯದೃಷ್ಟಿಗಳಿಂದ ಒಬ್ಬರನ್ನೊಬ್ಬರು ನೋಡಿದರು ಮಾತ್ರ. ಮಹಾರಾಜರು ತಮ್ಮ ಮಾತನ್ನು ಸಾಗಿಸಿಯೆ ಇದ್ದರು:

“ ಅದಕ್ಕೆ ಮೊದಲು ನಾವೆಲ್ಲರೂ ವಿನೋದದ ಕಾರ್ಯಕಲಾಪ ಗಳಿಂದ ನಮ್ಮ ಮನಸ್ಸನ್ನು ತಣಿಸಿಕೊಳ್ಳೋಣ ! ”

ವಿರೂಪಾಕ್ಷದೊರೆಯ ಮಾತು ಮುಗಿದೊಡನೆಯೆ ಷೇರ್ ಉದ್ದೀ ನನು ನಿಧಾನವಾಗಿ ಮೇಲಕ್ಕೆದ್ದು, ಸೇವಕನೊಬ್ಬನು ತುಂಬಿಕೊಟ್ಟ ಮದ್ಯದ ಪಾನಪಾತ್ರೆಯನ್ನು ತಂದು, ದೊರೆಗೆ ವಿನಯದಿಂದ ಒಪ್ಪಿಸಿದನು. ಬೇರೆ ಬೇರೆ ಸೇವಕರು ತಂದುಕೊಟ್ಟ ಪಾನಪಾತ್ರೆಗಳನ್ನು ಸನ್ಮಾನಾಸನ ದಲ್ಲಿ ಕುಳಿತ ಬೇರೆ ಹಲವರೂ ಕೈಯಲ್ಲಿ ತೆಗೆದುಕೊಂಡರು. ಮೆಲ್ಲಮೆಲ್ಲಗೆ ಎಲ್ಲರ ಪಾತ್ರೆಗಳೂ ಕೆಳದುಟಿಯ ಕೆಳೆಯರಾಗಲು ತೊಡಗಿದುವು. ದೊರೆಯ ಕೈಯಲ್ಲಿಯ ಒಂದು ಬಟ್ಟಲು ಬರಿಯದಾಯಿತು; ಇನ್ನೊಂದು ತುಂಬಿದುದು ಎದುರಿಗೆ ಬಂದು ನಿಂತಿತು !

ಇತ್ತ ನರ್ತಕಿಯರ ನರ್ತನದ ಸಿದ್ಧತೆ ನಡೆದಿದ್ದಿತು. ವಾದ್ಯದವರು ಸ್ವರಗಳನ್ನು ಸರಿಪಡಿಸಿಕೊಳ್ಳಲು ತೊಡಗಿದ್ದರು. ನರ್ತಕಿಯರು ಕಾಲಿಗೆ ಗೆಜ್ಜೆಸರಗಳನ್ನು ಕಟ್ಟಿಕೊಂಡು, ಅದೊಂದು ಭಂಗಿಯಲ್ಲಿ–ಇಬ್ಬರೂ ಜೊತೆಜೊತೆಗೆ–ಎದ್ದು ನಿಂತುಕೊಂಡರು.

ಇಬ್ಬರೂ ಹಸುವಿನ ಬೆಣ್ಣೆಯ ಎರಡು ಬೊಂಬೆಗಳಂತೆ ಕಂಡರು. ಇಬ್ಬರದೂ ಒಂದೆ ಬಗೆಯ ವೇಷಭೂಷಣ. ಉಟ್ಟಿರುವ ತೆಳುವಾದ ದಟ್ಟಿಯ ಬೆಳ್ಪಿನೊಳಗಿಂದ, ಅಲ್ಲಲ್ಲಿ—ಬೇರೆ ಬೇರೆ ಅವಯವಗಳ ಆಕಾರ ದೊಂದಿಗೆ–ಮೈಯಬಣ್ಣವು ಹೊರಕ್ಕೆ ಹಣಿಯಿಕ್ಕುತ್ತಿದ್ದಿತು. ಅಂಚಲವು ಇರಲೇ ಇಲ್ಲ. ಪುಷ್ಟವಾದ ಎದೆಯ ಕೆಳಬದಿಯನ್ನು ಮೇಲಕ್ಕೆತ್ತಿ ಕಟ್ಟಿದ್ದ ಕಂಚುಕೀವಸ್ತ್ರವು ಮೇಲುಬದಿಯನ್ನು ಮುಚ್ಚಲಾರದಷ್ಟಿದ್ದಿತು. ಕೊರ ಳಲ್ಲಿ ಒಂದೊಂದು ಮಣಿಮಾಲೆಗಳು; ಮುಂಗೈಯಲ್ಲಿ, ಮುಂದೋಳಿನಲ್ಲಿ ನಯವಾಗಿ ಕುಂದಣದ ಕೆಲಸಮಾಡಿದ ಕಂಕಣ–ಬಾಹುಪೂರಗಳು. ಸೊಂಟದ ಹಿಂಬದಿಯ ಕೆಳಗಣ ದೇಹದ ನೈಸರ್ಗಿಕವಾದ ಉಬ್ಬು-

ತಗ್ಗುಗಳು ಸ್ಫುಟವಾಗಿ ಕಾಣುವಂತೆ ಉಡೆನೂಲು (ಕಾಂಚೀದಾಮ) ಉಟ್ಟ ದಟ್ಟಿಯನ್ನು ಅಲ್ಲಲ್ಲಿ ಚೆನ್ನಾಗಿ ಬಿಗಿದು ಹಿಡಿದಿದೆ.

ವಿರೂಪಾಕ್ಷರಾಯನು ಮದ್ಯದ ಬಟ್ಟಲನ್ನು ಕೆಳದುಟಿಯ ಮೇಲೆ ಇಟ್ಟುಕೊಂಡಿದ್ದರೂ, ಕುಡಿಯುವುದನ್ನು ಮರೆತು ನರ್ತಕಿಯರತ್ತ ತನ್ನ ನೆಟ್ಟ ನೋಟವನ್ನು ಕಳುಹಿಸಿದ್ದನು. ಇನ್ನುಳಿದ ಸಭಾಸದರೂ ತಮ್ಮ ನೋಟಗಳ ಈಟಿಗಳನ್ನು ನರ್ತಕಿಯರ ಅಂಗಾಂಗಗಳಲ್ಲಿ ಚುಚ್ಚಿ ಚುಚ್ಚಿ ತೆಗೆಯುತ್ತಿದ್ದರು. ಸಭಾಸದರೆಲ್ಲರ ಸಾವಿರಾರು ನೋಟಗಳ ಈಟಿಯ ಏಟುಗಳನ್ನೂ ಎದುರಿಸುವ ಶಕ್ತಿ ನರ್ತಕಿಯರಲ್ಲಿ ಇದ್ದಿತೇನೋ! ಎಂತಲೇ ಅವರು ಅವಿಚಲಚಿತ್ತರಾಗಿ, ಅಮೃತಶಿಲೆಯ ಪುತ್ತಳಿಗಳಂತೆ ನಿಂತ ನಿಲುವಿನಲ್ಲಿ ನಿಂತುಬಿಟ್ಟಿದ್ದರು. ಆದರೆ ಅವರಿಬ್ಬರ ಇಬ್ಬರ ಕಣ್ಣಾನೋಟದ ಕೂರಲಗು ಸಹಸ್ರಮುಖವಾಗಿ ಹೊರಟು, ಸಭಿಕರೆಲ್ಲರ ಎದೆಯನ್ನೂ ಇರಿಯುವಷ್ಟು ಶಕ್ತಿಯುಳ್ಳವುಗಳಾಗಿರಬೇಕು. ಏತಕ್ಕೆಂದರೆ ಕಿವಿಗೊಟ್ಟು ಕೇಳಿದ್ದರೆ ಎಲ್ಲರ ಎದೆಯಲ್ಲಿಯೂ ಎದ್ದಿದ್ದ ಕಲಕಲಾಟವು ಕೇಳಿಸಬಹುದಾಗಿದ್ದಿತು.

ಇಂಪಾದ ವಾದ್ಯವಾದನದೊಂದಿಗೆ ನರ್ತನಕ್ಕೆ ಮೊದಲಾಯಿತು. ನರ್ತಕಿಯರು ವಿವಿಧಭಾವಗಳ ಪರಿಪೋಷಣ, ಅನುಭಾವಗಳ ಅನುಭೂತಿ, ಆಂಗಿಕಾಭಿನಯಗಳ ಚಮತ್ಕೃತಿ ಮೊದಲಾದುವುಗಳನ್ನು ಚೆನ್ನಾಗಿ ಪ್ರದರ್ಶನಮಾಡಲು ತೊಡಗಿದ್ದರು. ಅವರ ಅಂಗಾಂಗಗಳ ಮಣಿತ, ತಾಳಲಯಗಳನ್ನರಿತು ಗೆಜ್ಜೆಸಪ್ಪಳಿನೊಂದಿಗೆ ಕುಣಿಯುವ ಕುಣಿತ ಇವು ಸಭಿಕರ ಮೈ-ಮನಗಳನ್ನು ಮರೆಯಿಸಿದುವು.

ವಿರೂಪಾಕ್ಷರಾಯನ ಉತ್ಸಾಹಕ್ಕೆ ಇತಿಮಿತಿಯಿಲ್ಲ; ಮೊದಲೇ ಮದ್ಯಪಾನದ ಮೊದಮೊದಲಿನ ಹುರುಪು ಬೇರೆ ಮೈಯಲ್ಲಿ; ಅದರಲ್ಲಿಯೆ ಈ ಅಪ್ಸರೆಯರ ಮನೋರಮವಾದ–ಉತ್ತೇಜಕವಾದ—ಸೌಂದರ್ಯ ದರ್ಶನ; ಉದ್ರೇಕಗೊಳಿಸುವ ಭಾವಾಭಿನಯ–ಅಂಗಾಭಿನಯಗಳು. ಅವನು ತನ್ನನ್ನು ತಾನು ಮರೆತನು. ಮದ್ಯಪಾತ್ರೆಯನ್ನು ಕೊಡಲಿಕ್ಕೆಂದು ಮುಂದೆ ಬಂದಿದ್ದ ಷೇರ್ ಉದ್ದೀನನನ್ನು ಕೈಹಿಡಿದು ಸೆಳೆದು, ತನ್ನ ಆಸನದ ಮೇಲೆಯೆ-ಜೊತೆಗೆ-ಕುಳ್ಳಿರಿಸಿಕೊಂಡನು. ಆತನ ಹೆಗಲ

ಮೇಲೆ ಸಲುಗೆಯಿಂದ ತನ್ನ ತೋಳನ್ನು ಚೆಲ್ಲಿದನು. ನರ್ತನದ ಒಂದು ಭಾಗವು ಮುಗಿದು ನರ್ತಕಿಯರು ಕುಳಿತುಕೊಂಡರು ; ವಾದ್ಯವಾದನದ ಸ್ವರತರಂಗಿಣಿಯು ತಡೆದುನಿಂತಿತು. ಮತ್ತೆ ಮೌನದ ಮೋಡ ಸಭೆಯಲ್ಲಿ ಬಂದು ಮುಸುಕಿಕೊಂಡಿತು. ವಿರೂಪಾಕ್ಷರಾಯನು ಕುಡಿತದಿಂದ ಜಡವಾಗಿರುವ ನಾಲಗೆಯಿಂದ ಮಾತನಾಡಲು ತೊಡಗಿದನು :

" ಭಲೆ ! ನಾಸೀರ್‌ಖಾನ್ ! ಭಲೆ ! ಭಲೆ ! ನೀವು ಇಂದು ನಮಗೆ ಸ್ವರ್ಗಲೋಕದ ದೇವತೆಗಳ ದರ್ಶನ ಮಾಡಿಸಿದಿರಿ. ನಿಮ್ಮ ಉಪಕಾರಕ್ಕೆ ಈಗಲೆ ಪ್ರತ್ಯುಪಕಾರ ದೊರೆಯಲೆ ಬೇಕು. ಈಗ ನಿಮ್ಮ ಮಗನಿಗೆ ಅಧಿಕಾರದ ಶಾಸನವನ್ನು ಒಪ್ಪಿಸಿಕೊಟ್ಟೇ ಮುಂದಿನ ಕಾರ್ಯವನ್ನು ಸಾಗಿಸೋಣ ! ಎಲ್ಲಿ ರಾಯಸದ ರಂಗಯ್ಯ ? ಏನು ರಂಗಯ್ಯ, ಶಾಸನಪತ್ರ ಬರೆದು ಸಿದ್ಧವಾಗಿದೆಯೇ ? "

ರಂಗಯ್ಯನು ಆಸ್ಥಾನದ ಮುಖ್ಯ ರಾಯಸಿಗ ; ಎದ್ದು ನಿಂತುಕೊಂಡು, ವಿನಯದ ಬದ್ಧಾಂಜಲಿಯೊಂದಿಗೆ ಬಿನ್ನವಿಸಿದನು :

" ಮಹಾರಾಜರ ಪಾದದಲ್ಲಿ ಅರಿಕೆಯಿರಬೇಕು. ಗಂಗಣಾರ್ಯರು ಶಾಸನವನ್ನು ಬರೆದು ಸಿದ್ಧಗೊಳಿಸಿ ಕೊಟ್ಟಿದ್ದಾರೆ ; ಆದರೆ . . "

" ಆದರೆ ಏನು ? "

" ಆದರೆ, ದಣ್ಣಾಯಕರು ಶಾಸನಪತ್ರಕ್ಕೆ ರಾಜಮುದ್ರೆಯನ್ನು ಮಾಡಿಕೊಡಲಿಕ್ಕೆ ಸಮ್ಮತಿಸಲಿಲ್ಲ ಮಹಾಸ್ವಾಮಿ ! "

" ನನ್ನ ಅಪ್ಪಣೆಯೆಂದು ಹೇಳಲಿಲ್ಲವೆ ? "

" ಹೇಳಿದೆ ಮಹಾಸ್ವಾಮಿ ! ಆದರೂ ಸಮ್ಮತಿಸಲಿಲ್ಲ ; ಹಾಗೆ ಮಾಡಲಿಕ್ಕೆ ಆಗದು. . . . ಎಂದು ಖಂಡಿತವಾಗಿ ನುಡಿದುಬಿಟ್ಟರು. "

" ಏನು, ನನ್ನ ಆಜ್ಞಾಭಂಗವೇ ? ನರಸಿಂಹನು ಇಷ್ಟೊಂದು ಮೇಲಕ್ಕೇರಿ ಕುಳಿತನೇನು ? ಆತನಿಗೆ ವಿಜಯನಗರದ ಸಿಂಹಾಸನಾಧೀಶ್ವರನ ಆಜ್ಞೆಯ ಬೆಲೆಯು ಇಲ್ಲದಂತಾಯಿತೆ ? "

ಹಠಾತ್ತಾಗಿ ನರಸಿಂಹನಾಯಕನೂ ರಾಜಶೇಖರನೂ ಯಾವ ತಡೆಯೂ ಇಲ್ಲದೆ ಓಲಗಸಾಲೆಯೊಳಕ್ಕೆ ಪ್ರವೇಶಿಸಿದರು. ರಾಯನಿಗೆ

ಅವರು ಬಂದುದರ ಅರಿವೆ ಇಲ್ಲ. ತನ್ನ ಮಾತನ್ನು ಹಾಗೆಯೆ ಮುಂದು ವರಿಸಿದ್ದನು :

"....ಈ ವಿರೂಪಾಕ್ಷರಾಯನ ಉಪ್ಪನ್ನು ತಿನ್ನುತ್ತಿರುವುದರ ಎಚ್ಚರವು ಆ ನರಸಿಂಹನಿಗೆ ಇಲ್ಲವೇನು ? ಸರಿ! ಇನ್ನೆಷ್ಟು ದಿನ ಆತನ ದಂಡನಾಯಕತ್ವದ ಜಂಭವಿರುತ್ತದೆಯೋ ನೋಡುತ್ತೇನೆ. ನೀಚ, ರಾಜದ್ರೋಹಿ !"

ನರಸಿಂಹನಾಯಕ-ರಾಜಶೇಖರರ ಆಗಮನದಿಂದ, ಮೈಮೇಲೆ ಎಚ್ಚರಿರುವವರೆಲ್ಲರೂ ತಮ್ಮ ಮುಖಗಳ ಮೇಲೆ ಭಯ-ಆಶ್ಚರ್ಯಗಳ ಬೆರಕೆಯ ಭಾವವನ್ನು ತಳೆದು, ಬೆಪ್ಪುಗೊಂಡು ಕುಳಿತಿದ್ದರು. ಬಂದವ ರಿಬ್ಬರೂ ನೇರವಾಗಿ ಮಹಾರಾಜನ ಆಸನದ ಬಳಿಯಲ್ಲಿಯೆ ಹೋಗಿ ನಿಂತರು. ಎಷ್ಟೋ ಜನ ಸಮಂಜಸಬುದ್ಧಿಯ ಸಭಾಸದರು, ದಂಡನಾಯ ಕನ ಆಗಮನಕ್ಕಾಗಿ ಆದರವನ್ನು ತೋರಿಸಲು ಎದ್ದುನಿಲ್ಲಬೇಕೆಂದು ಹವಣಿಸಿದರು. ವೆಂಕಟನಾಯಕನ ತಲೆಯಲ್ಲಿಯೂ ಈ ವಿಚಾರ ಬಾರದೆ ಹೋಗಲಿಲ್ಲ. ಆದರೆ ತಾನೊಬ್ಬನೇ ಎದ್ದು ನಿಂತರೆ ಏನಾದೀತೋ ಏನೋ....ಎಂಬ ಹೆದರಿಕೆಯಿಂದ ಅವರೆಲ್ಲರೂ ಹಾಗೆಯೆ ಕುಳಿತಲ್ಲಿ ಕುಳಿತುಬಿಟ್ಟರು. ನರಸಿಂಹನು ಗುಡುಗಿನ ದನಿಯಲ್ಲಿ ಮಾತನಾಡಿದ :

"ನೀಚ—ರಾಜದ್ರೋಹಿ....ಯಾರು ಮಹಾರಾಜ ? ಈ ಕ್ಷಣಕ್ಕೆ ನನ್ನ ಅಧಿಕಾರವನ್ನು ಬಿಟ್ಟುಕೊಡಲಿಕ್ಕೆ ನಾನು ಸಿದ್ಧನಿದ್ದೇನೆ; ಸನಾತನ ಧರ್ಮದ ಸಂರಕ್ಷಣೆಯನ್ನು ಗುರಿಯಾಗಿಟ್ಟುಕೊಂಡು ನಿಂತ ಈ ಸಾಮ್ರಾಜ್ಯದ ಹಿತಸಾಧನೆಯು ಕರ್ತವ್ಯವೆಂದು ಭಾವಿಸಿ, ಇದುವರೆಗೂ ಮುಂದೆ ಬಂದು ಸಿಲ್ಲುತ್ತಿದ್ದ ಕಾಲಕೂಟದ ರಸವನ್ನು ಕುಡಿದು ಕುಡಿದು ಸಾಕಾಗಿದೆ. ಇನ್ನು ಮೇಲೆ ನಾನದನ್ನು ಜೀರ್ಣಿಸಿಕೊಂಡು ಇರಲಾರೆ, ಸಹನೆಯ ಹದ್ದು ಮಿಾರಿಹೋಯಿತು !"

ಮದ್ಯದ ಮತ್ತಿನಲ್ಲಿಯೆ ಮಹಾರಾಜನು ಮಾತನಾಡಿದನು:

"ಹದ್ದು ಮಿಾರಿಹೋಯಿತೋ ಹಾರಿಹೋಯಿತೋ ? ನಾವು ಯಾವುದನ್ನೂ ಕೇಳುವವರಲ್ಲ; ಶಾಸನಪತ್ರಕ್ಕೆ ರಾಜಮುದ್ರೆಯನ್ನು

ರಾಜಶೇಖರನು ಬಿಟ್ಟ ಬಾಣದಂತೆ ಸಾಗಿಬಿಟ್ಟನು. ಸಭೆಯೆಲ್ಲವೂ ಅಚ್ಚರಿಯ ನೆಟ್ಟದಿಟ್ಟಿಯಿಂದ ನೋಡುತ್ತಲಿದ್ದಿತು. ಮಹಾರಾಜನು ನರಸಿಂಹನಾಯಕನ ಕಡೆಗೆ ತಿರುಗಿ ಕೇಳಿದನು :

" ಏನು....? ನರಸಿಂಹಾ....! ರಾಜಮುದ್ರೆ ಮಾಡಿಕೊಡು-ತ್ತೀಯೊ? ದಂಡನಾಯಕನ ಪದವಿ ಬಿಟ್ಟುಬಿಡುತ್ತೀಯೊ?"

"ಮಹಾರಾಜ, ನಾನು ಅಧಿಕಾರಲಾಲಸೆಗಾಗಿ ಈ ಪದದಲ್ಲ ಕುಳಿತಿಲ್ಲವೆಂಬುದನ್ನು ಮತ್ತೆಮತ್ತೆಯೂ ತಮಗೆ ಅರಿಕೆಮಾಡಿಕೊಳ್ಳುತ್ತೇನೆ. ಮಲ್ಲಿಕಾರ್ಜುನ ದೊರೆಗಳು ನನ್ನಲ್ಲಿಯ ಯಾವುದೋ ಗುಣಕ್ಕೆ ಮೆಚ್ಚಿ, ನನ್ನನ್ನು ಕರೆದುಕೊಂಡು ಬಂದು, ನಾನಿನ್ನೂ ತರುಣನಾಗಿರುವಾಗಲೆ ಈ ಅಧಿಕಾರವನ್ನು ನನಗೆ ಒಪ್ಪಿಸಿದರು. ಇದುವರೆಗೆ ಪ್ರಾಮಾ-ಣಿಕ ತನಕ್ಕೆ ಚ್ಯುತಿಬಾರದಂತೆ, ಈ ಕನ್ನಡಲಕ್ಷ್ಮಿಯ ಸೇವೆಮಾಡಿದೆ. ಇನ್ನು ನನ್ನ ಪ್ರಾಮಾಣಿಕತನಕ್ಕೆ ಇಲ್ಲಿ ಬೆಲೆ ಬಾರದು. ಹೂವು ಮಾರಿದ ಸ್ಥಳದಲ್ಲಿ ಈಗ ಹುಲ್ಲಿನ ಮಾರಾಟ ನಡೆದಿದೆ...."

ವಿರುಪಾಕ್ಷರಾಯನು ರೇಗಿ ನುಡಿದನು.

" ಸಾಕು, ಬಾಯಿಬಿಚ್ಚಬೇಡ ಇನ್ನು! ನಾಳೆಯಿಂದ ದಂಡನಾಯಕನ ಅಧಿಕಾರಸೂತ್ರ ವೆಂಕಟನಾಯಕನ ಕಡೆಗೆ. ಕೋಶಾಧಿಕಾರಕ್ಕಾಗಿ ಇನ್ನಾರನ್ನಾದರೂ ಆರಿಸೋಣವೆಂತೆ. ನಾಸೀರ್ ಖಾನ್! ನಮ್ಮ ಇಂದಿನ ಸಂತೋಷಸಭೆಯೆಲ್ಲಾ ಕೆಟ್ಟು ಹೋಯಿತು; ಮದುವೆಯಾದ ಮೇಲೆ ಇನ್ನೊಂದು ಸಭೆ ಕೂಡಲಿ! ಅಂದು ಇದೇ ನರ್ತಕಿಯರು ಬರಬೇಕು! ಇವರು ಇನ್ನು ಮೇಲೆ ನಮ್ಮ ನಗರವನ್ನು ಬಿಟ್ಟು ಹೋಗಲಿಕ್ಕಾಗದು! ನಿಮ್ಮ ಮಗನಿಗೆ ಕೊಡಬೇಕಾಗಿದ್ದ ಅಧಿಕಾರದಾನವೂ ಆವೊತ್ತೇ ನಡೆಯುವುದು! ಈಗ ನರ್ತನವೂ ಸಾಕು, ಎಲ್ಲವೂ ಸಾಕು! ಸಭೆಯ ಕಾರ್ಯಕಲಾಪ ಇಷ್ಟಕ್ಕೇ ನಿಂತುಬಿಡಲಿ!"

ಹೊಗಳುಭಟರ ಬಿರುದಾವಳಿಯ ಧ್ವನಿಯು ಸಭೆಯಲ್ಲಿ ಹಬ್ಬಿ ಹರಡಿತು. ವಿರೂಪಾಕ್ಷರಾಯನು ಒಂದು ಕೈಯನ್ನು ಷೇರ್ ಉದ್ದೀನನ ಹೆಗಲಮೇಲೆ, ಇನ್ನೊಂದನ್ನು ಜಕ್ಕನ ಹೆಗಲಮೇಲೆ ಇಟ್ಟು, ಆಸನದಿಂದೆದ್ದು—ತೊದಲಡಿಗಳಿಂದ—ಸಭಾಮಂದಿರವನ್ನು ಬಿಟ್ಟು ನಡೆದನು.

ಸಭೆಯಲ್ಲಿ ಆಗ 'ಪಿಸ ಪಿಸ' 'ಗುಜು ಗುಜು' 'ಗುಣು ಗುಣು' ಮಾತುಗಳು ನಡೆದಿದ್ದುವು. ರಾಜನ ಹಿಂಬದಿಯಲ್ಲಿ ಹೊರಬಿದ್ದ ನಾಶೀರ್ ಮುಹಮ್ಮದನ ಮುಖದ ಕಳೆಯು ಇಳಿದುಹೋಗಿ ಬಾಡಿ ಬತ್ತಿಯಾಗಿದ್ದಿತು. ನಾಲಗೆ ಒಣಗಿ ಹೋದುದನ್ನು, ಉದ್ದ ಗಡ್ಡಗಳ ಮೇಲೆ ಕುಳಿತುಕೊಂಡ ಸೊಪ್ಪೆದುಟಿಯು ಸೂಚಿಸುತ್ತಿದ್ದಿತು.

---

## ೭ನೆಯ ಪರಿಚ್ಛೇದ

ವೆಂಕಟನಾಯಕನು ಸಭೆಯಿಂದ ಮನೆಗೆ ಬಂದುದೆ ತಡ, ಒಡನೆಯೆ ಸಭೆಯ ಉಡುಪುಗಳನ್ನು ತೆಗೆದು, ಅವಸರದ ನಡಿಗೆಯಿಂದ ಅಂತಃಪುರದ ಕಡೆಗೆ ಸಾಗಿದನು. ಹೆಂಡತಿಯಿರುವ ಸ್ಥಳವನ್ನು ಸಮೀಪಿಸುತ್ತಿರು-ವಾಗಲೆ, ಉತ್ಸಾಹದಿಂದ ಒಂದೆರಡು ಸಲ ಹುಸಿಕೆಮ್ಮು ಕೆಮ್ಮಿದನು. ಗಂಡನನ್ನು ಆದರಿಸಿ ಸ್ವಾಗತಿಸಲಿಕ್ಕೆಂದು ಗೌರಾಂಬಿಕೆಯು ಮುಂಬಾಗಿಲಿಗೆ ಬಂದಳು. ಇಬ್ಬರೂ ಜೊತೆಗೂಡಿ ಹೋಗಿ, ಹಾಸಿದ್ದ ಮೆಲುವಾಸಿನ ಮೇಲೆ ಕುಳಿತುಕೊಂಡರು. ವೆಂಕಟನಾಯಕನು ಹೆಮ್ಮೆಯ ಧ್ವನಿಯಲ್ಲಿ ನುಡಿದನು:

"ನೋಡು, ದೇವೀ! ಅದೃಷ್ಟವೆಂದರೆ ಹೀಗೆ ಇರಬೇಕು!"

"ಇನ್ನೇನು? ಸಭೆಯಲ್ಲಿ ವಿಶೇಷವೇನಾದರೂ ನಡೆಯಿತೇನು?"

"ವಿಶೇಷವಿನ್ನೇನು? ನಡೆಯಲೆಬೇಕಾಗಿದ್ದುದು ನಡೆದು ಹೋಯಿತು!"

"ಎಂದರೆ?"

"ಎಂದರೆ ಎಂದು ಕೇಳುತ್ತೀಯಲ್ಲಾ ಇನ್ನೂ! ನೀನು ದಂಡ-ನಾಯಕನ ಹೆಂಡತಿಯಾಗುವಾಕೆ ಇನ್ನು ಮೇಲೆ!"

"ಸಾಕು, ಇದೇನಿದು ಹುಚ್ಚು ಹುಚ್ಚು ಮಾತು!"

"ಇದರಲ್ಲಿ ಹುಚ್ಚು ಹುಚ್ಚೇನು ಬಂದಿತೇ?"

“ಹುಚ್ಚಲ್ಲದೆ ಇನ್ನೇನು? ದೊರೆಯ ಮಾವನಾಗಬೇಕೆಂಬ ಆಶೆಯಿಂದ ಮಗಳನ್ನು ಮಹಾರಾಜರಿಗೆ ಕೊಡಲಿಕ್ಕಿದ್ದೀರಿ; ಅದೇನೋ ಸರಿಹೋಯಿತು. ಈಗ ಮುದುಕಿಯಾದ ನನ್ನನ್ನು ದಂಡನಾಯಕನ ಮನೆಗೆ ಕಳುಹಿಸಿಕೊಟ್ಟು, ಇನ್ನೂ ಯಾವ ಪದವಿಯನ್ನು ಪಡೆಯ ಬೇಕಾಗಿದೆಯೋನೋ ನಿಮಗೆ....ಎಂದುಕೊಂಡೆ.”

“ಬುದ್ಧಿಯೆಂದರೆ ಬುದ್ಧಿನೋಡು ನಿನ್ನದು, ಎಲ್ಲವೂ ತಲೆಕೆಳಗಾದ ತಿಳಿವಳಿಕೆ. ಹಾಗಲ್ಲವೇ! ಮಹಾರಾಜರು ದಂಡನಾಯಕನ ಅಧಿಕಾರ ವನ್ನು ನನ್ನ ಕಡೆಗೆ ಒಪ್ಪಿಸುವವರಿದ್ದಾರೆ, ಇನ್ನು ಮೇಲೆ!”

“ಅದೇತಕ್ಕೆ ಹೀಗೆ? ನರಸಿಂಹನಾಯಕರು ಇಲ್ಲವೇನು?”

“ನರಸಿಂಹನಾಯಕನಂತೆ! ಹ! ಹ! ಹ! ನರಸಿಂಹನಾಯಕನ ಅಧಿಕಾರ ಹೋಯಿತಿಷ್ಟೇ ಅಲ್ಲ; ಅವನ ಜೀವಕೂಡ ಉಳಿಯುತ್ತಿರಲಿಲ್ಲ; ಮಹಾರಾಜರ ಮನಸ್ಸು ದೊಡ್ಡದು. ಉಸಿರುಳಿಸಿಕೊಂಡು ಹೋಗಲಿಕ್ಕೆ ಕೊಟ್ಟರು....ಇಷ್ಟೇ!”

“ಅಂತಹದನ್ನು ಅವರು ಮಾಡಿದುದಾದರೂ ಏನು?”

“ಇನ್ನೇನು ಮಾಡಬೇಕು? ಅವನೊಬ್ಬ ಪುಂಡ ಬಂಡುಗಾರನು! ಇದು ನೋಡು, ಇದುವರೆಗೆ ನಾನು ರಾಜಶೇಖರನು ಒಳ್ಳೆಯ ಹುಡುಗನೆಂದು ಭಾವಿಸಿದ್ದೆ. ಸರಿ! ಈವೊತ್ತು ಅವನ ಸ್ವರೂಪವೂ ತಿಳಿದಂತಾಯಿತು. ರಾಜದ್ರೋಹಿ! ಇನ್ನು ಮೇಲೆ ಆತನು ನಮ್ಮ ಮನೆಗೆ ಎಂದೂ ಬರಲಾಗದು...., ತಿಳಿಯಿತೇನು?”

“ರಾಜಶೇಖರನು ಏನು ಮಾಡಿದ?”

“ನರಸಿಂಹನಾಯಕನಿಗೆ ಅವನೇ ಬೆಂಬಲಿಗನಾಗಿದ್ದಾನೆ. ಇಬ್ಬರೂ ಸೇರಿ, ಜನರ ಮನಸ್ಸನ್ನು ಕೆಡಿಸಿ, ದೊಂಬಿಯೆಬ್ಬಿಸಿ, ಸಿಂಹಾಸನವನ್ನು ಅಪಹರಿಸಬೇಕೆಂದಿದ್ದಾರೆ. ಮಹಾರಾಜರು ರಾಜಶೇಖರನಿಗೆ ದಾಯಾದಿ ಗಳಲ್ಲವೆ? ಎಲ್ಲಿ ಹೋದೀತು ದಾಯಾದಮತ್ಸರ? ಮತ್ತೆ ಜನರಲ್ಲಿ ಇಲ್ಲದ ಹೊಗಳಾಟ; ‘ರಾಜಶೇಖರನು ಹಾಗಿದ್ದಾನೆ, ಹೀಗಿದ್ದಾನೆ, ಅವನೊಂದು ಮಹರ್ಷಿಯ ಮರುಕು, ಸಾಕ್ಷಾತ್ ಪರಬ್ರಹ್ಮನ ತುಣುಕು’ ಎಂದು. ರಾಜ್ಯದ ಲೋಭ ಯಾರನ್ನು ಬಿಟ್ಟೀತು ಹೇಳು!’

ಗೌರಾಂಬಿಕೆಯು ಆಶೆ ಉತ್ಸಾಹಗಳ ಬೆರಕೆಯ ದನಿಯಲ್ಲಿ ನುಡಿದಳು :

“ ರಾಜಶೇಖರನು ದೊರೆಯಾದರೆ ನಿಜವಾಗಿಯೂ ಸಾಮ್ರಾಜ್ಯದ ಕಲ್ಯಾಣವಾದೀತು ! ಜನರು ನಗುತ್ತ ಕೆಲೆಯುತ್ತ ಬದುಕಿಕೊಂಡಾರು !”

“ ಮೂರ್ಖತನಕ್ಕೆ ನಿನ್ನಲ್ಲಿಯೂ ಕೊರತೆಯಿಲ್ಲವೆನ್ನು ! ನೋಡು, ಇಂತಹ ಮಹಾರಾಜರು ಪ್ರಪಂಚದಲ್ಲಿ–ಹುಡುಕುತ್ತ ಹೋದರೂ–ಎಲ್ಲಿಯಾದರೂ ಸಿಕ್ಕಾರೇನು ? ಎಷ್ಟು ದೊಡ್ಡ ಮನಸ್ಸು ! ಎಂತಹ ಉದಾರ ಹೃದಯ ! ಹೆಂಗುಸರಿಗೆ ರಾಜಕಾರ್ಯವೇನು ಗೊತ್ತು ? ರಾಜರ ಯೋಗ್ಯತೆಯ ಪರೀಕ್ಷೆಯಾದರೂ ಹೇಗೆ ಆಗಬೇಕು ? ಇಂದು ನರಸಿಂಹನಾಯಕ, ರಾಜಶೇಖರ ಕೂಡಿ ಮಾಡಿದ ರಾಜದ್ರೋಹದ ಕೆಲಸ ನಿನಗೆ ಗೊತ್ತಿದೆಯೇನು ?”

“ ಏನದು ?”

“ ಹಾಂ! ಎಂತಲೇ ಹೀಗೆ ಹೇಳುತ್ತಿದ್ದೀಯೆ! ಇಂದಿನ ಸಂತೋಷ-ಸಭೆಯ ಕಾರ್ಯಕಲಾಪವನ್ನೆಲ್ಲ, ಅವರಿಬ್ಬರೂ ಕೂಡಿ ಕೆಡಸಿ ಹಾಳು ಮಾಡಿಬಿಟ್ಟರು. ತುಂಬಿದ ಸಭೆಯಲ್ಲಿ–ಎದುರೆದುರಲ್ಲಿಯೆ–ದೊರೆಗಳಿಗೆ ಬಾಯಿಗೆ ಬಂದಂತೆ ಮಾತನಾಡಿದರು. ಇಂದಿನ ನರ್ತಕಿಯರ ನರ್ತನ ವೆಂದರೆ ಇನ್ನೇನು ಹೇಳಲಿ ? ಖಂಡಿತವಾಗಿಯೂ ಅವರು ಇಂದ್ರಸಭೆ ಯಿಂದಲೆ ಇಳಿದು ಬಂದಿರಬೇಕು. ಇಂತಹ ದೊರೆಗಳ ಆಶ್ರಯದಲ್ಲಿ ಇದ್ದುದರಿಂದಲೆ ನಮಗೆಲ್ಲಾ ಅಂತಂತಹ ವಿಭೂತಿಗಳ ದರ್ಶನವಾಗುತ್ತದೆ. ರಾಜಧಾನಿಯಲ್ಲಿಯ ಸೂಳೆಯರನ್ನೆಲ್ಲ ತಂದು, ಆ ನರ್ತಕಿಯರ ಮೇಲೆ ನಿವಾಳಿಸಿ ಚೆಲ್ಲಬೇಕು ನೋಡು. . . .”

“ ಮುಪ್ಪಿನ ಕಾಲ ಬಂದಿತಲ್ಲವೇ ? ಇನ್ನೂ. . . .”

“ ಇದು ನಗೆಯಾಟದ ವೇಳೆಯಲ್ಲ ತಿಳಿಯಿತೇ; ಅಂತಹರ ನರ್ತನವು ಅವರಿಬ್ಬರ ಮೂಲಕ ನಮಗೆ ಎರವಾಯಿತು. ಪಾಪ ! ಷೇರ್ ಉದ್ದೀನನ ಅಧಿಕಾರದಾನಸಮಾರಂಭ ನಿಂತುಹೋಯಿತು ; ತುಂಬಿದ ಸಭೆಯಲ್ಲಿ ನನಗೆ ದೊರೆಯಬೇಕಾಗಿದ್ದ ಆದರಸತ್ಕಾರವು ದೊರೆಯದೆ ಹೋಯಿತು. ರಾಜಶೇಖರನ ನಿಷ್ಠುರ ಮಾತುಗಳನ್ನು ಕೇಳಿ, ನನಗಂತೂ

ಹೊಟ್ಟೆ ಉರಿದುಹೋಯಿತು. ನೋಡು ಗೌರಾ! ಮಹಾರಾಜರ ಸ್ಥಳದಲ್ಲಿ ಒಂದುವೇಳೆ ನಾನೆ ಇರುತ್ತಿದ್ದರೆ, ಆತನನ್ನು ಹಾಗೆಯೆ ಏನೂ ಬಿಡುತ್ತಿರಲಿಲ್ಲ ನೋಡು!"

ನಿರುತ್ಸಾಹದ ನಗೆಯೊಂದಿಗೆ ಗೌರಾಂಬಿಕೆ ಮಾತನಾಡಿದಳು :

"ಏನೇ ಆಗಲಿ, ನಿಮಗವರು ಉಪಕಾರವನ್ನೆ ಮಾಡಿದರಲ್ಲವೆ?"

"ಎಂದರೇನು?"

"ಅವರು ಹಾಗೆ ವರ್ತಿಸದಿದ್ದಲ್ಲಿ, ದಂಡನಾಯಕನ ಅಧಿಕಾರ ನಿಮಗೆ ಹೇಗೆ ಸಿಕ್ಕುತ್ತಿದ್ದಿತು?"

ವೆಂಕಟನಾಯಕನು ಗಟ್ಟಿಯಾಗಿ ನಕ್ಕು ಹೇಳಿದ:

"ನಿನ್ನ ಮಾತೂ ಸರಿ ನೋಡು! ತುಂಬ ಬುದ್ಧಿವಂತಳಿದ್ದೀ ಬಿಡು ನೀನೂ! ನನ್ನಂತಹ ನನ್ನನ್ನೂ ಮಾತಿನಲ್ಲಿ ಹಿಡಿದು ಬಿಟ್ಟೆ! ದಂಡನಾಯಕನ ಹೆಂಡತಿಯಾಗುವ ಯೋಗ್ಯತೆ ನಿನ್ನಲ್ಲಿದೆಯೆಂದು ನಾನು ಮೊದಲಿನಿಂದಲೂ ತಿಳಿದುಕೊಂಡಿದ್ದೇನೆ!"

ಗೌರಾಂಬಿಕೆಯ ಮುಖದಲ್ಲಿ ಆನಂದದ ಚಿಹ್ನಗಳೇನೂ ಮೂಡಿದಂತೆ ತೋರಲಿಲ್ಲ; ವಿಷಾದ–ಜುಗುಪ್ಸೆಗಳ ಭಾವರೇಷೆಗಳು ಮಾತ್ರ ಮತ್ತೆ ಮತ್ತೆ ಮೂಡಿ ಮರೆಯಾಗುತ್ತಿದ್ದುವು.

* * * *

ಗೌರಾಂಬಿಕೆ–ವೆಂಕಟನಾಯಕರ ಮಾತುಕತೆ ನಡೆದಿರುವಾಗ, ಹೇಮಾಂಬಿಕೆಯು ತನ್ನ ವಿಶ್ರಾಂತಿಭವನದಲ್ಲಿ, ಬಲದ ಅಂಗೈಯ ಮೇಲೆ ಗದ್ದವನ್ನಿರಿಸಿ, ಕರುಣಾಸನವನ್ನು ಹಾಕಿ ಕುಳಿತುಕೊಂಡಿದ್ದಳು. ಬಳಿಯಲ್ಲಿಯೆ ಬಾಯಮ್ಮನು ಕುಳಿತಿದ್ದಳು. ಹೇಮಾಂಬಿಕೆಯದು ಅರೆಗಣ್ಣಿನ ಶೂನ್ಯದೃಷ್ಟಿ; ಬಾಯಮ್ಮನದು ಹೇಮಾಂಬಿಕೆಯನ್ನು ಎಡೆ-ಬಿಡದೆ ನೋಡುತಿರುವ ಅಲುಗದ ದೃಷ್ಟಿ. ಇಬ್ಬರೂ ಮಾತಿಲ್ಲದೆ–ಅದೆಷ್ಟು ಸಮಯನ್ನು–ಹೀಗೆಯೆ ಕುಳಿತು ಕಳೆದಿರಬಹುದೊ! ಕೊನೆಗೆ ಹೇಮಾಂಬಿಕೆ ಬಾಯಮ್ಮನ ಕಡೆಗೆ ತನ್ನ ನೋಟಗಳನ್ನು ಹೊರಳಿಸಿ ಕೇಳಿದಳು :

"ರಾಜಶೇಖರನು ಇನ್ನೇನು ಹೇಳಿದನೆಂತೆ?"

" ಸಭೆಯಲ್ಲಿದ್ದವರೆಲ್ಲರಿಗೂ ಮೂರುಬಾರಿ ಎಚ್ಚರಿಕೆ ಹೇಳಿ, ಹಾಗೆಯೆ ಬಿರುಗಾಳಿ ಹೋದಂತೆ ಸಭೆಯಿಂದ ಹೊರಟುಬಿಟ್ಟರೆಂತೆ. ಸಭೆಗೆ ಸಭೆಯೆ ಬೆರಗುವಟ್ಟು ನೋಡುತ್ತಿದ್ದಿತೆಂತೆ. ಮಹಾರಾಜರು ಮದ್ಯದ ಮತ್ತಿನಲ್ಲಿ ಏನೇನನೋ ಬಡಬಡಿಸುತ್ತಿದ್ದರೆಂತೆ. "

ಹೇಮಾಂಬಿಕೆಯು ಮತ್ತೆ ಮೊದಲಿನ ಭಂಗಿಯಲ್ಲಿಯೆ ಕುಳಿತಳು. ಬಾಯಮ್ಮನು ತನ್ನ ರೀತಿಯನ್ನು ತಾನು ಅನುಸರಿಸಿದಳು. ಆಗ ಹೇಮೆಯ ಮನಸ್ಸಿನ ಕಣ್ಣುಗಳೆದುರಲ್ಲಿ, ರಾಜಶೇಖರ-ವಿರೂಪಾಕ್ಷ ರಾಯರಿಬ್ಬರ ಚಿತ್ರಗಳೂ– ಜೊತೆಜೊತೆಯಾಗಿ–ಸ್ಫುಟವಾಗಿ ಮೂಡಿ ನಿಂತುಕೊಂಡಿದ್ದುವು:—

' ರಾಜಶೇಖರನ ಮುಖದಲ್ಲಿ ತಪಸ್ವಿಯ ಸಾತ್ತ್ವಿಕ ತಪಸ್ತೇಜವೂ, ಕಣ್ಣುಗಳಲ್ಲಿ ವೀರಕ್ಷತ್ರಿಯನ ಧೈರ್ಯ-ಸ್ಥೈರ್ಯಗಳ ಆಕರ್ಷಕತೆಯೂ ತೊಳಗುತ್ತಲಿದೆ; ವಿರೂಪಾಕ್ಷನ ಮೊಗ–ಕಣ್ಣುಗಳಲ್ಲಿ ಮದ್ಯದ ಉನ್ಮತ್ತತೆಯು ತಾಂಡವವನ್ನಾಡುತ್ತಿದೆ. ರಾಜಶೇಖರನ ಹರವಾದ ತುಂಬಿದೆದೆಯು ನಿರ್ಭೀತಿಯ ನೆಲೆಮನೆಯಾಗಿದೆ; ಕಾಠಿನ್ಯ– ಕರ್ಕಶತೆಗಳ ನ್ನೊಳಗೊಂಡ ನವರತ್ನಹಾರಗಳ ಮರೆಯಲ್ಲಿದ್ದರೂ ವಿರೂಪಾಕ್ಷನ ಬೆಂಡೆದೆಯು, ಹೇಡಿತನ ಹುಟ್ಟುವ ಹೊಲೆಮನೆಯಾಗಿದೆ. ಒಂದರ ಹೃದಯವು ಆಶೆಯಿಂದ ಆಕಾಶವನ್ನು ಅಪ್ಪಿಕೊಳ್ಳಲಿಕ್ಕೆ ಕೈಚಾಚಿದ್ದರೆ, ಇನ್ನೊಂದರ ಹೃದಯವು ಸೂಳೆಯರ ಮೈಯನ್ನು ಮುಟ್ಟಿ ಮುಟ್ಟಿ ತಣಿಯುವುದರಲ್ಲಿದೆ. ಧರೆಯ ಭೋಗಗಳೆಲ್ಲವೂ ಗುಂಪುಗೂಡಿ, ನಾಯಿ ಯಂತೆ ಬೆನ್ನುಹತ್ತಿಬರುತ್ತಿದ್ದರೂ ಮೊದಲನೆಯ ಚಿತ್ರದ ವ್ಯಕ್ತಿ ಅದರ ಕಡೆಗೆ ಹೊರಳಿ ಕೂಡ ನೋಡದಿದೆ; ಕ್ಷಣಿಕಸುಖದ ಕ್ಷುದ್ರಭೋಗಗಳ ಕೊಳೆತ ಮಾಂಸದ ತುಣುಕಿಗಾಗಿ, ಎರಡನೆಯ ಚಿತ್ರದ ವ್ಯಕ್ತಿ–ಹದ್ದಿನಂತೆ ಹಾರಿಹಾರಿ ಬಂದು– ಎರಗುತ್ತಲಿದೆ. ಎಲ್ಲಶಕ್ತಿಗಳು ತನ್ನಲ್ಲಿದ್ದರೂ ಸ್ವಂತಸುಖಕ್ಕಾಗಿ– ಸ್ವಾರ್ಥಕ್ಕಾಗಿ— ಉಪಯೋಗಿಸಿಕೊಳ್ಳಲಾರೆನೆಂದು ಸಾರಿ ಹೇಳುವುದೊಂದು; ಕೈಗಡತಂದ ಕೆಲವು ಶಕ್ತಿಗಳನ್ನು ಕೂಡ ಸ್ವಾರ್ಥದ ಬೆನ್ನಹಿಂದೆ ಓಡಿಸಿ, ಬಾಯಿಬಾಯಿಬಿಡುತ್ತಿರುವುದಿನ್ನೊಂದು.'

ಹೇಮಾಂಬಿಕೆಯು ಎರಡು ಚಿತ್ರಗಳನ್ನೂ ತೂಗಿ ತೂಗಿ ನೋಡಿದಳು. ಎದೆಯನ್ನು ಕಳವಳದ ಕುಣಿದಾಟಕ್ಕೆ ಇಂಬುಮಾಡಿಕೊಟ್ಟಳು. ಮೂಗಿನಿಂದ ಬಿಸಿಯುಸಿರುಗಳನ್ನು ಮೆಲ್ಲಮೆಲ್ಲಗೆ ಹೊರಕ್ಕೆ ಹಾಕುತ್ತಲಿದ್ದಳು. ಇದ್ದುದಿದ್ದಂತೆಯೆ ಆಕೆಯ ಬಾಯಿಂದೊಂದು ಉದ್ಗಾರವು ಹೊರಟಿತು:

" ನನ್ನ ಶಕ್ತಿಸರ್ವಸ್ವವೂ ರಾಜಶೇಖರನ ಬದುಕನ್ನು ಅನುಕರಣ ಮಾಡಬೇಕಾಗಿದೆ ! "

ಮತ್ತೆ ಸುಮ್ಮನೆ ಕುಳಿತು ಯೋಚಿಸತೊಡಗಿದಳು :

" ನಾನು ಈ ನನ್ನ ಕೈಗಳಿಂದಲೆ ವಿರೂಪಾಕ್ಷರಾಯನಿಗೆ ಮಾಲೆ ಹಾಕಬೇಕೆ ? ಆತನ ಕೈಯನ್ನು ಹಿಡಿಯಬೇಕೆ ? ಅವನ ರಾಣಿಯೆಂದೆನಿಸಿಕೊಂಡು ಜೀವನ ನೂಕಬೇಕೆ ? ಹಿಂದೆ ಎಂದೊ ಒಂದು ಸಲ ಕರ್ತವ್ಯವು, ದ್ರೌಪದಿಯನ್ನು ವಿರಾಟರಾಯನಲ್ಲಿ ಸೈರಂಧ್ರಿಯಾಗಿರಲಿಕ್ಕೆ ಮಾತ್ರ ಹಚ್ಚಿತೆಂತೆ; ಮನಸ್ಸೊಲ್ಲದವರ ಮೈಸೋಂಕಿನ ಸಂದರ್ಭವನ್ನೇನೂ ತರಲಿಲ್ಲ ಆಕೆಗೆ. ನನ್ನ ಕರ್ತವ್ಯವೀಗ ಅದಕ್ಕೂ ಹೆಚ್ಚಿನದೇನೋ ! ಚಂದ್ರಮತಿಯನ್ನು ಬ್ರಾಹ್ಮಣನೊಬ್ಬನ ಮನೆಯಲ್ಲಿ ಕಸ-ಮುಸುರೆಯ ಊಳಿಗಕ್ಕೆ ತೊಡಕಿಸಿತೆಂತೆ–ಆಕೆಯ ಕರ್ತವ್ಯನಿಷ್ಠೆ; ನಾನದನ್ನು ಆನಂದದಿಂದ ಮಾಡುವೆನಾದರೂ ಕಾಲನಿಗೆ ಅಷ್ಟರಿಂದಲೆ ಸಮಾಧಾನವಿದ್ದಂತೆ ಕಾಣಲಿಲ್ಲ ; ಅದಕ್ಕೂ ಮುಂದೆ ನನ್ನನ್ನು ಎಳೆದೊಯ್ಯುತ್ತಲಿದೆ ! "

ಬಾಯಮ್ಮ ಸುಮ್ಮಗೆ ಇರಲಾರದೆ ಮಾತನಾಡಿದಳು:

"ಅಮ್ಮಾಜಿ, ನಿಮ್ಮ ತಂದೆಯವರಿಗೆ ದಂಡನಾಯಕನ ಅಧಿಕಾರವು ಬರುವುದಿದೆಯಂತೆ ! "

" ಅದೇನು ? ಅಪ್ಪಾಜಿಯವರೇಕೆ ದಂಡನಾಯಕರು ? ಸಾಮ್ರಾಜ್ಯವು ನರಸಿಂಹನಾಯಕರ ಬಲವನ್ನೂ ಕಳೆದುಕೊಂಡು ಬಿಟ್ಟಿತೇ ? ನನ್ನ ಕರ್ತವ್ಯದ ಹೊಟ್ಟೆ ಇನ್ನೂ ದೊಡ್ಡದಾದಂತಾಯಿತು. ಮರುಳುದೊರೆಗೆ ಮಂಕುದಿಣ್ಣೆಯೊಬ್ಬ ದಂಡನಾಯಕ ! ಜೊತೆ ಸರಿಯಾಗಿದೆ ಬಾಯಮ್ಮ ! "

ಬಾಯಮ್ಮನು ಏನನೋ ಹೇಳಬೇಕೆಂದಿರುವಾಗಲೆ ಉಲ್ಲಾಸದ ನಡಿಗೆಯಲ್ಲಿ, ನರೆಗೂಡಿದ ಮೀಸೆಗಳನ್ನು ಹುರಿಗೂಡಿಸುತ್ತ ವೆಂಕಟ ನಾಯಕನು ಅಲ್ಲಿಗೆ ಬಂದ. ವಿನಯದಿಂದ ಇಬ್ಬರೂ ಎದ್ದುನಿಂತು ಕೊಂಡರು. ವೆಂಕಟನಾಯಕನು ಮಗಳೊಡನೆ ನಗೆಯಾಡಿದ :

" ಮಹಾರಾಣಿಯವರು ಎದ್ದುನಿಲ್ಲುವ ತೊಂದರೆ ತಕ್ಕೊಳ್ಳ ಲಾಗದು; ನಾವೆಲ್ಲ ಸನ್ನಿಧಿಯ ಸೇವಕರು ! "

" ಮಹಾರಾಣಿಯವರ ಬಳಿಯಲ್ಲಿಯೂ, ದಂಡನಾಯಕರಿಗೆ ಸಲ್ಲಬೇಕಾದ ಮರ್ಯಾದೆ ಸಲ್ಲಲೆ ಬೇಕಲ್ಲವೆ ? "

ಹೇಮಾಂಬಿಕೆಯ ಕೊಂಕಿನ ಬಗೆಯನ್ನು ಅರಿತುಕೊಳ್ಳುವಷ್ಟು ಚುರುಕು, ವೆಂಕಟನಾಯಕನ ಬುದ್ಧಿಯಲ್ಲಿ ಎಲ್ಲಿಂದ ಬರಬೇಕು ? ಆತನು ಹಿಗ್ಗಿನ ನಗೆ ನಗುತ್ತ ಕೇಳಿದ :

" ನಿನಗೆ ಇಷ್ಟರಲ್ಲಿಯೆ ಗೊತ್ತಾಗಿಬಿಟ್ಟಿದೆಯೇನು ಹೇಮಾ ? ಕೆಲಸವೆಲ್ಲವೂ ಕೆಟ್ಟುಹೋಯಿತು. ನಾನೆ ನನ್ನ ಬಾಯಿಂದ ಈ ಒಸಗೆ ಯನ್ನು ಹೇಳಬೇಕೆಂದು ಆತುರಪಟ್ಟುಕೊಂಡು ಇಲ್ಲಿಗೆ ಬಂದೆ. "

" ಬಾಯಮ್ಮನಿಗೆ ದೊರೆಯಬೇಕಾಗಿದ್ದ ಉಡುಗೊರೆಯನ್ನು ತಪ್ಪಿಸಿ ಬಿಡುತ್ತಿದ್ದಿರಿ ! ನಾಳೆಯ ದಿನವೇ ಪಂಪಾಪತಿಗೆ ದೀಪೋತ್ಸವ ಮಾಡಿಸಲಿಕ್ಕೆ ನಿಮಗೆ ಹೇಳಬೇಕೆಂದು ಸಂಕಲ್ಪಿಸಿದ್ದೆ ಕೂಡ ಮನಸ್ಸಿನಲ್ಲಿ ! ನಾನು ಮಹಾರಾಣಿಯಾಗುತ್ತೇನೆ ; ನೀವು ಮಹಾಮಂತ್ರಿಗಳಾಗು ತ್ತೀರಿ. ಇದಕ್ಕಿಂತ ಹೆಚ್ಚಿಗೆ ಪಂಪಾಪತಿ ನಮಗೇನು ಕೊಡಬೇಕಾಗಿದೆ ? "

ಮಾತಿನ ಕೊನೆಯೊಡನೆಯೆ ಹೇಮಾಂಬಿಕೆಯ ಮುಖದಿಂದ ನಿಡುಸುಯಿಲೊಂದು ಹೊರಕ್ಕೆ ಬಂದಿತು; ಒತ್ತಾಯದ ಮೆಲುನಗೆ ತಟ್ಟನೆ ಅಡಗಿ, ಮತ್ತೆ ಮೂಡಿಕೊಂಡಿತು.

---

## ೮ನೆಯ ಪರಿಚ್ಛೇದ

ರಂಗಸೆಟ್ಟಿಗೆ ಪಗಡೆಯಾಟದಲ್ಲಿ ವಿಪರೀತವಾದ ಆಸಕ್ತಿ. ವ್ಯವಹಾರದ ಭಾರವನ್ನು ವಯಸ್ಸಿಗೆ ಬಂದಿದ್ದ ತನ್ನ ಮಕ್ಕಳ ಮೇಲೆ ಚೆಲ್ಲಿ, ಮುಪ್ಪಿನಕಾಲದ ಆಯುಸ್ಸನ್ನೆಲ್ಲ ಪಗಡೆಯಾಟಕ್ಕೆ ಮುಡಿಪು ಕೊಟ್ಟಂತೆ ಮಾಡಿದ್ದನು. ಸೆಟ್ಟಿಗೆ ಮೂರುಹೊತ್ತೂ ಬಿಡುವು; ಬಿಡುವಿನ ವೇಳೆಯೆಲ್ಲವೂ ಪಗಡೆಯಾಟದಲ್ಲಿ ತಿಳಿಯದಂತೆ ಹೋಗಿಬಿಡುವುದು. ಪಗಡೆಯನ್ನು ಆಡಲಿಕ್ಕೆಂದೂ ನೋಡಲಿಕ್ಕೆಂದೂ ಬರುವ ಜನರ ನೆರವಿಯಿಂದ, ಸೆಟ್ಟಿಯ ಮನೆಯ ಮೊಗಸಾಲೆ ಯಾವಾಗಲೂ ನೆರೆದಿರುವುದು. ವಿಶ್ರಾಂತಿಕಾಲದ ಸೆಟ್ಟಿಯ ಈ ಆಟದ ವ್ಯಸನವು, ಎಷ್ಟೋ ಜನ ಉದ್ಯೋಗಿಗಳನ್ನು ಕೂಡ, ಕೆಲಸಬಿಡಿಸಿ ತನ್ನಲ್ಲಿಗೆ ಸೆಳೆದುಕೊಂಡು ಬರುತ್ತಿದ್ದಿತು.

ಸಂತೋಷಸಭೆಯು ನಡೆದ ಮರುದಿನದ ಹಗಲು; ಮೂರುವರೆ ಪ್ರಹರಗಳು ಮುಗಿದು ಹೋಗಿರಬಹುದು. ರಂಗಸೆಟ್ಟಿಯ ಮನೆಯ ಮೊಗಸಾಲೆಯಲ್ಲಿ ಸೇರಿದ್ದ ಜನರು, ನಡೆದಿದ್ದ ಪಗಡೆಯಾಟವನ್ನು ಮುಗಿಸಿಕೊಂಡು, ತಮ್ಮ ತಮ್ಮ ಮನೆಗಳಿಗೆ ತೆರಳುವುದರಲ್ಲಿದ್ದರು. ಮೊದಮೊದಲು ಅಲ್ಲಿದ್ದವರಲ್ಲಿ ನಡೆದ ಮಾತು-ಕತೆಯೆಂದರೆ, ಅಂದಿನ ಆಟದ ಸೋಲು-ಗೆಲುವುಗಳ ಪರಿಣಾಮದ ವಿಚಾರ. ಈ ವಿಚಾರದ ರಭಸವು ಕಸುವುಗುಂದುತ್ತ ಬಂದಿದ್ದಿತು; ಆಗ ಬಡಿಗರ ದೇವಪ್ಪನು ಕೈಯಲ್ಲಿ ನಸ್ಯವನ್ನು ತಿಕ್ಕಿ ಹದಗೊಳಿಸುತ್ತ, ಸಂದರ್ಭವನ್ನು ಒದಲಿಸಿ ಮಾತನಾಡಲು ಮೊದಲು ಮಾಡಿದನು:

"ನಮ್ಮ ಕರ್ಣಾಟಕರಾಜ್ಯ ಬರುತ್ತಾ ಬರುತ್ತಾ ಸುಲ್ತಾನರ ರಾಜ್ಯವಾಗುತ್ತ ನಡೆದಿದೆಯಪ್ಪಾ!"

ಅಡಿಕೆಯ ಚೂರೊಂದನ್ನು ಬಾಯೊಳಕ್ಕೆ ಚೆಲ್ಲಿಕೊಂಡು, ಗೋಪಾಲ ಜೋಯಿಸರು ನುಡಿದರು:

"ಆಗಬೇಕಾಗಿ ಇದ್ದುದನ್ನು ತಪ್ಪಿಸುವವರು ಯಾರು ದೇವಪ್ಪಾ!

ಕಲಿಯುಗದಲ್ಲಿ ಪ್ರಪಂಚವೆಲ್ಲವೂ ಮ್ಲೇಚ್ಛಮಯವಾಗಿ ಹೋಗುವು ದೆಂದು, ನಮ್ಮ ಶಾಸ್ತ್ರಗಳೆ ಕೂಗಿ ಹೇಳುತ್ತಿವೆಯಲ್ಲಾ!"

ಗುರಿಕಾರ ಓಬಲಣ್ಣನು ಬಿಂಕದಿಂದ ಹೇಳಿದನು:

"ಆಹಾ! ಭಟ್ಟರು ತೆಗೆದರು ತಮ್ಮ ಇಲ್ಲದ ಶಾಸ್ತ್ರದ ಕಂತೇ ಪುರಾಣವನ್ನ! ಶಾಸ್ತ್ರವಂತೆ ಶಾಸ್ತ್ರ! ನಮ್ಮ ತೋಳಿನಲ್ಲಿಯೆ ಸಾಮರ್ಥ್ಯ ವಿದ್ದದ್ದಾದರೆ, ನಿಮ್ಮ ಶಾಸ್ತ್ರ-ಗೀಸ್ತ್ರ ಎಲ್ಲಾ ಹಾರಿಹೋಗಿ ಬಿಡಬಹುದು!"

"ತೋಳಿನಲ್ಲಿ ಸಾಮರ್ಥ್ಯವಿದ್ದದ್ದಾದರೆ....! ಅಹುದಲ್ಲವೋ? ನಾನೂ ರಾಜನಾಗಿ ಹುಟ್ಟಿದ್ದಾಗಿದ್ದರೆ ವಿಜಯನಗರದ ಸಿಂಹಾಸನದ ಮೇಲೆ ಕುಳಿತುಕೊಳ್ಳುತ್ತಿದ್ದೆ!" ಭಟ್ಟರ ಮಾತಿದು.

ರಂಗಸೆಟ್ಟಿ ನಿಶ್ಚಿಂತೆಯ ನಗೆನಗುತ್ತ ಹೇಳಿದ:

"ಈಗಲಾದರೂ ಏನಾಗಿದೆ ಭಟ್ಟರೆ! ಕಾಲವು ಈಗ ಚೆನ್ನಾಗಿದೆ; ನೀವೂ ದೊಂಬೆಯೆಬ್ಬಿಸಿ ಬಿಡಿರಿ; ನಿಮಗೇ ಸಿಂಹಾಸನ ಸಿಕ್ಕುಬಿಡ ಬಹುದು! ಅದೃಷ್ಟದಾಟವನ್ನು ಯಾರು ಬಲ್ಲರು? ನೋಡಿರಿ, ಈಗ ವೆಂಕಟನಾಯಕರು ದಣ್ಣಾಯಕನ ಅಧಿಕಾರಕ್ಕೆ ಏರುವುದಕ್ಕೆ ಕುಳಿತಿಲ್ಲವೆ?"

ಓಬಲಣ್ಣ ಜುಗುಪ್ಸೆಯ ಭಾವದಿಂದ ನುಡಿದ:

"ವೆಂಕಟನಾಯಕನದೇನು ಮಹತ್ತ್ವಹಚ್ಚಿದ್ದೀರಿ ಬಿಡಿರಿ ಸೆಟ್ಟರೇ! ಮಹಾರಾಜರಿಗೆ ಮಗಳನ್ನು ಕೊಟ್ಟು ಸಂಪಾದಿಸಿದ್ದಾನೆ ಆ ಅಧಿಕಾರ! ಅದೆಂದಾದರೂ ನೆಲೆಗೊಂಡು ಬಲುದಿನ ನಿಂತೀತು....ಅಂತೀ ರೇನು? ಅಧಿಕಾರ ಸಂಪಾದಿಸಬೇಕು....ತನ್ನ ವೈರಿಯ ಕಣ್ಣೀರನ್ನ ರಣದಲ್ಲಿ ಸುರಿಸಿ ಸುರಿಸಿ! ವೈರಿಯ ನೆತ್ತರಿನ ಹೊಳೆ ಹರಿಸಿ ಹರಿಸಿ!"

ಬಡಿಗರ ದೇವಪ್ಪ ಮೆಲ್ಲಗೆ ನುಡಿದ:

"ನಮ್ಮಪ್ಪ ರಾಜಶೇಖರದೊರೆ ಸಿಂಹಾಸನದ ಮೇಲೆ ಕೂತರೆ, ರಾಜ್ಯಕ್ಕೆಲ್ಲ ಅಮೃತದ ಮಳೆ ಆದಂತೆ ಆದೀತು ನೋಡು! ನಮ್ಮಂತಾ ಬಡವರ ಬಗ್ಗರ ಮೇಲೆ ಎಷ್ಟೊಂದು ವಿಶ್ವಾಸ ಆತನದು!"

ಗೊಂಬೆಯಾಟದ ಗಣಾಚಾರಿ, ದೇವಪ್ಪನ ಅಭಿಪ್ರಾಯವನ್ನು ಎತ್ತಿ-ಹಿಡಿದು ಹೇಳಿದ.

"ದೇವಪ್ಪಾ, ನಿನ್ನ ಮಾತು ಸಾವಿರದೊಳಗಿನದೊಂದು ಸತ್ಯ ನೋಡು ; ನಮ್ಮಪ್ಪ ಪಂಪಾಪತಿ ಅಷ್ಟು ಮಾಡಿದರೆ ನಮ್ಮ ಮೊರೆ ಕೇಳಿದಂತಾಗುತ್ತದೆ !"

ಕೂಡಿದವರಲ್ಲಿ ಅನೇಕ ಜನರು ಒಬ್ಬೊಬ್ಬರು ಒಂದೊಂದು ಮಾತನಾಡಿ, ರಾಜಶೇಖರನ ಒಂದೊಂದು ಗುಣಾಂಶವನ್ನು ಹೊಗಳಿ ಹಾಡಿದರು. ಓಬಲಣ್ಣನು ಅಸಹನೆಯಿಂದ ಒಮ್ಮೆಲೆ ಸಿಡಿಸುಡಿದನು :

"ಸಾಕು ಬಿಡಿರಪ್ಪಾ ಎಲ್ಲಾ ಗೊತ್ತಿದೆ ನನಗೆ ! ಇದ್ದದ್ದನ್ನು ಬಿಟ್ಟು ಇಲ್ಲದ್ದನ್ನು ಬೇಡುತ್ತಿರುವುದೇ ಲೋಕದ ಸ್ವಭಾವವಾಗಿ ಕುಳಿತಿದೆ. ಅಲ್ಲಾ ! ಈಗಿದ್ದ ಮಹಾರಾಜರಲ್ಲಿ ಏನು ಕೊರತೆಯಿದೇ. . . . ಎಂದು ನಾನು ಕೇಳುತ್ತೇನೆ. ಇವರು ಜನರಿಗೆ ಮಾಡಿರುವ ದಾನವೆಷ್ಟು, ಧರ್ಮವೆಷ್ಟು, ಉಪಕಾರವೆಷ್ಟು !"

ಗೋಪಾಲ ಜೋಯಿಸರು ಅಣಕದ ದನಿಯಲ್ಲಿ ಹೇಳಿದರು :

"ಸರಿ ಸರಿ ! ದಾನ, ಧರ್ಮ, ಉಪಕಾರಗಳನ್ನು ಈ ಮಹಾ-ರಾಜರು ಮಾಡಿದ್ದಾರೆಯೆ ? ಮಾಡಿದ್ದರೂ ಮಾಡಿರಬಹುದು; ಆದರೆ ಅದನ್ನು ಪಾತ್ರವನ್ನು ಅರಿತೇನೂ ಮಾಡಿದಂತೆ ಕಾಣೆ !"

"ಪಾತ್ರವನ್ನು ಅರಿತೇಕೆ ಮಾಡಿಲ್ಲ ? ಎಲ್ಲ ದಾನ-ಧರ್ಮವನ್ನೂ ಪಾತ್ರದವರಲ್ಲಿಯೆ ಮಾಡಿದ್ದಾರೆ !"

ರಂಗಸೆಟ್ಟಿಯ ಈ ಮಾತಿಗೆ ಅಲ್ಲಿದ್ದವರೆಲ್ಲರೂ ಗಟ್ಟಿಯಾಗಿ ನಗಲು ತೊಡಗಿದರು ; ಓಬಲಣ್ಣನು ಅಭಿಮಾನದಿಂದ ರೇಗಿದವನಾಗಿ ಕೂಗಿ ಹೇಳಿದ :

"ಬರೀ ಬಾಯಿ ಇದೆಯೆಂದು ನಕ್ಕುಬಿಟ್ಟರಾಯಿತೇನು ? ಏನು ಸೆಟ್ಟರೆ, ನಿಮಗೆ ಗೊತ್ತಿಲ್ಲವೇ ? ಅದೊಂದು ಸಲ ನೀವೇ ಹೇಳಿದ್ದಿಲ್ಲವೇ ? ಇದೇ ಮಹಾರಾಜರು ಶ್ರೀಶೈಲದ ಮಲ್ಲಿಕಾರ್ಜುನದೇವರಿಗೆ ಎಷ್ಟೊಂದು ದತ್ತಿ ಬಿಟ್ಟಿದ್ದಾರೆ....ಎಂದು ! ನಮ್ಮ ಗಣಾಚಾರಿಯು ಸೋದರಮಾವ-

ವೀರಣ್ಣಯ್ಯ ಇಲ್ಲವೇ! ಆತನೇ ಆ ದಾನಶಾಸನ ಕಡೆದುಕೊಟ್ಟಿದ್ದಾ ನಂತೆ! ಏನಪ್ಪಾ ಗಣಾಚಾರೀ!"

"ಹೌದು, ಹೌದು! ಓಬಲಣ್ಣಾ ನಿನ್ನ ಮಾತು ನಿಜ! ನಮ್ಮ ವೀರಣ್ಣಯ್ಯಮಾವನವರೇ ಆ ತಾಮ್ರಶಾಸನ ಕಡೆದು ಕೊಟ್ಟರು. ನಾನಾಗ ಅವರ ಬಳಿಯಲ್ಲಿಯೆ ಇದ್ದೆ. ಪಾಪ! ಎಂಬತ್ತುವರುಷದ ಮುದುಕ ನೋಡಿ ಜೋಯಿಸರೆ,.. ಕಣ್ಣು ಚೆನ್ನಾಗಿ ಕಾಣುತ್ತಿರಲಿಲ್ಲ ಕೂಡ! ಆ ಶಾಸನವನ್ನು ನಮ್ಮ ಮಾವನವರು ಎಷ್ಟು ಅಂದವಾಗಿ ಕಡೆದಿದ್ದಾರೆ ಗೊತ್ತಿದೆಯೇ..!"

"ಹೋಗಲಿ ಬಿಡು ಓಬಲಣ್ಣಾ! ಆ ಶ್ರೀಶೈಲದ ದಾನವೊಂದನ್ನು ಬಿಟ್ಟುಬಿಡೋಣ; ಸಿಂಹಾಸನವನ್ನು ಏರುತ್ತಿರುವ ಉತ್ಸಾಹದಲ್ಲಿ, ಅದೊಂದು ಹೇಗೋ ನಡೆದು ಹೋಯಿತು. ಅದರ ತರುವಾಯ ಯಾವ ಸದ್‌ಬ್ರಾಹ್ಮಣನಿಗೆ ಮಹಾರಾಜರಿಂದ ಮಠ-ಮಾನ್ಯಗಳು ದೊರೆತಿವೆ- ಹೇಳು ನೋಡೋಣ!" ಗೋಪಾಲಜೋಯಿಸರು ಕೊಂಚ ಬಿರುಸಾಗಿ ಕೇಳಿದರು.

"ನಿಮ್ಮಂತಹ ಸದ್‌ಬ್ರಾಹ್ಮಣರಿಗೊಬ್ಬರಿಗೆ ಮಾತ್ರ ದೊರೆತಿರ ಲಿಕ್ಕಿಲ್ಲ; ಎಂತಲೆ ಇಷ್ಟೊಂದು ಹೊಟ್ಟೆಯುರಿ ನಿಮಗೆ! ಎಟೂರು ನರಸಿಂಹಾಚಾರ್ಯರು ಮಹಾರಾಜರಿಂದ ಸಂಪಾದಿಸಿದ ಆಸ್ತಿ-ವೃತ್ತಿ ಗಳೇನು ಕಡಿಮೆಯಾಗಿಲ್ಲ!"

ಓಬಲಣ್ಣನ ಈ ಮಾತುಗಳನ್ನು ಕೇಳಿ, ರಂಗಸೆಟ್ಟಿ ಒಮ್ಮೆಲೆ ಮಾತಿಗೆ ಮೊದಲು ಮಾಡಿದ:

"ಆಹಾ! ಎಟೂರು ನರಸಿಂಹಾಚಾರ್ಯರ ವಿಷಯ ಏನು ಹೇಳುತ್ತೀ ಬಿಡೋ ಓಬಲಣ್ಣಾ! ಅದರ ಗುಟ್ಟಿನ ಗುಟ್ಟನ್ನೆಲ್ಲಾ ನಾನು ಬಲ್ಲೆ. ನರಸಿಂಹಾಚಾರ್ಯರು ಸಂಪಾದಿಸಿದುದಕ್ಕೆ ಮಹಾರಾಜರ ಧರ್ಮಬುದ್ಧಿ ಕಾರಣವಲ್ಲ; ಸಂದರ್ಭವೇ ಅಂತಹದೊಂದು ಒದಗಿ ಬಂದಿದ್ದಿತು."

"ಅದೇನು ಸಂದರ್ಭ ಸೆಟ್ಟರೇ?"

ಬಹುಜನರ ಬಾಯಿಂದ ಒಮ್ಮೆಲೆ ಈ ಆತುರದ ಪ್ರಶ್ನೆಯು ಹೊರಟಿತು. ಸೆಟ್ಟರು ಕದ್ದು ಹೇಳುವವರಂತೆ ಧ್ವನಿಯನ್ನು ಕೊಂಚ ಒಳಕ್ಕೆ ಜಗ್ಗಿಹಿಡಿದು, ಸಿಧಾನವಾಗಿ ಹೇಳಲು ತೊಡಗಿದರು :

"ನೋಡಿ, ವಿರೂಪಾಕ್ಷಮಹಾರಾಜರು ಎಂದಿನಿಂದಲೂ ಹೀಗೆಯೆ. ಮಲ್ಲಿಕಾರ್ಜುನ ದೊರೆಗಳು ಸಿಂಹಾಸನದ ಮೇಲಿರುವಾಗ, ಈ ತಮ್ಮನ ಖೋಡಿತನಗಳಿಗೆ ಬೇಸತ್ತುಹೋಗಿ, ಆಗಾಗ ರಾಜಧಾನಿಯಿಂದ ಹೊರಕ್ಕೆ ಅಟ್ಟಿಬಿಡುತ್ತಿದ್ದರು; ಮತ್ತೆ ತಮ್ಮನೆಂಬ ಭ್ರಮೆಯಿಂದ ತಪ್ಪುಮನ್ನಿಸಿ ಕರೆಯಿಸಿಕೊಳ್ಳುತ್ತಿದ್ದರು. ಒಂದುಸಲ ಹೀಗೆಯೆ ಹೊರಕ್ಕೆ ಅಟ್ಟಿಬಿಟ್ಟಿದ್ದಾಗ ವಿರೂಪಾಕ್ಷರಾಯನು, ಯಾರಿಗೂ ತಿಳಿಯ ದಂತೆ ಅಲ್ಲಿಯಿಲ್ಲಿಯ ಕೊಲೆಗಡಿಕರ ತಂಡವೊಂದನ್ನು ಕೂಡಿಸಿಕೊಂಡು ನಗರಿಯೊಳಕ್ಕೆ ಬಂದ; ಯಾವ ಮೋಸವನ್ನೂ ಕಂಡರಿಯದ ಮಲ್ಲಿಕಾರ್ಜುನ ದೊರೆಗಳ ಒಳ್ಳೆಯತನದ ದುರುಪಯೋಗಮಾಡಿಕೊಂಡು, ನಟ್ಟಿರುಳಿನಲ್ಲಿಯೆ ಅರಮನೆಗೆ ನುಗ್ಗಿ, ಮಹಾರಾಜರ ಪರಿವಾರವನ್ನೆಲ್ಲ ಮೋಸದಿಂದ ಕಡಿದುಚೆಲ್ಲಿಸಿದ. ರಾಜಶೇಖರ, ಪೆದ್ದಣ್ಣ ಇಬ್ಬರೂ ಮೊದಲ ದಿನವೆ ದೇವರ ದರ್ಶನಕ್ಕೆಂದು ಶ್ರೀಶೈಲಕ್ಕೆ ಹೋದುದರಿಂದ, ಧರ್ಮಕ್ಕೆ ಅವರಿಬ್ಬರು ಬದುಕಿಕೊಂಡರು. ತಮ್ಮವರೆಲ್ಲರ ಕೊಲೆಯಾದ ವರ್ತಮಾನ ಶ್ರೀಶೈಲದಲ್ಲಿರುವಾಗಲೆ ತಿಳಿದುಬಂದುದರಿಂದ, ಆ ಅಣ್ಣ-ತಮ್ಮಂದಿರಿಬ್ಬರೂ ಎಷ್ಟೋ ದಿನಗಳವರೆಗೆ ಈ ಪಟ್ಟಣಕ್ಕೆ ಬಾರದೆ, ಹೊರಗಿಂದ ಹೊರಕ್ಕೆಯೆ ಅಲೆದಾಡುತ್ತಲಿದ್ದರೆಂಬುದನ್ನು ನೀವೆಲ್ಲರೂ ಬಲ್ಲಿರಿ!"

ಗೋಪಾಲಜೋಯಿಸರು ಮಧ್ಯದಲ್ಲಿಯೇ ಮಾತನಾಡಿದರು :

"ಹೊರಗಿಂದ ಹೊರಕ್ಕೆ ಇನ್ನೆಲ್ಲಿ ಅಲೆದಾಡುತ್ತಾರೆ? ಮಲ್ಲಿಕಾರ್ಜುನನ ಮುಖ್ಯಪೂಜಾರಿಯೊಬ್ಬರ ಮನೆಯಲ್ಲಿ ಅಡಗಿಕೊಂಡು ಇರುತ್ತಿದ್ದರಂತೆ. ಆ ಪೂಜಾರಿಯೆಂದರೆ ನಮಗೆ ದೂರದವರೇನೂ ಅಲ್ಲ; ಹತ್ತಿರದ ಬಳಗಕ್ಕೆ ಸೇರಿದವರೇ! ನಮ್ಮ ಸಾಕ್ಷಾತ್ ಸೋದರಮಾವಂದಿರ ಮಗನ ಭಾವಮೈದನಿಗೆ ಹೆಣ್ಣುಕೊಟ್ಟ ಮಾವ ಅವರು!"

ಸೆಟ್ಟಿ ಮಾತನ್ನು ಮುಂದುವರಿಸಿದ :

"ಸರಿ, ಹಾಗೂ ಇರಬಹುದು; ವಿರೂಪಾಕ್ಷರಾಯನು ಸತ್ತ ದೊರೆಗಳಿಗೆ ತಮ್ಮನಾದುದರಿಂದಲೂ, ಇವನಿಗಿಂತ–ದೊರೆಗೆ–ಇನ್ನಾರೂ ಸಮೀಪದವರು ಇರದುದರಿಂದಲೂ, ರಾಜವಂಶಕ್ಕೇ ಸಿಂಹಾಸನವು ಸಲ್ಲಬೇಕಾದುದರಿಂದಲೂ ಜನರೆಲ್ಲರೂ ವಿರೂಪಾಕ್ಷರಾಯನನ್ನೆ ಸಿಂಹಾಸನಾಧಿಕಾರಿಯೆಂದು ಒಪ್ಪಿಕೊಂಡರು."

ಓಬಲಣ್ಣನು ನಡುವೆ ಬಾಯಿಯಿಕ್ಕಿ ಕೇಳಿದ:

"ಒಂದೇ ಮನೆತನದವರೆ ರಾಜರಾಗಬೇಕೆಂಬ ನಿಯಮ ಎಲ್ಲಿಯದು ಸೆಟ್ಟರೇ?"

"ಆ ನಿಯಮವಿಲ್ಲದಿದ್ದರೆ ಪಾಪ! ನಮ್ಮ ಓಬಲಣ್ಣನಿಗೇ ಸಿಂಹಾಸನವು ಸಿಕ್ಕಬಹುದಾಗಿದ್ದಿತೇನೋ!" ಬಸವಯ್ಯನು ನಗೆಯಾಡಿದ. ಜನರೆಲ್ಲರೂ ಬಿದ್ದು ಬಿದ್ದು ನಕ್ಕರು. ನಗೆಯ ಭರವು ಕಡಿಮೆಯಾದ ಬಳಿಕ ಗಣಾಚಾರಿ ತವಕದಿಂದ ಎಲ್ಲರ ಪರವಾಗಿ ಕೇಳಿದ:

"ಮುಂದೇನಾಯಿತು ಸೆಟ್ಟರೇ?"

"ಅದನ್ನೆ ಹೇಳುತ್ತೇನೆ ಕೇಳಿರಿ; ಮಲ್ಲಿಕಾರ್ಜುನದೊರೆಗಳೆಂದರೆ ಅಂತಿಂತವರಲ್ಲ, ಅಸಾಮಾನ್ಯ ಶೂರರು. ಒಂದು ಸಲ ಏನಾಯಿತೆಂದಿರಿ! ದಕ್ಷಿಣದೇಶದ ಸುಲ್ತಾನ, ತೆಲುಗಾಣ್ಯದ ಗಜಪತಿಮಹಾರಾಜ ಇಬ್ಬರೂ ಸೇರಿ, ನಮ್ಮ ಮಹಾರಾಜರ ಮೇಲೆ ಪೂರ್ವವೈರವನ್ನು ಸಾಧಿಸಿಕೊಳ್ಳಬೇಕೆಂದು, ಎಣಿಸಲು ಬಾರದಷ್ಟು ದಂಡು-ದಳ ಕೂಡಿಸಿದರು; ನಮ್ಮ ವಿಜಯನಗರವನ್ನು ಇಬ್ಬರೂ ಕೂಡಿ ಮುತ್ತಿಗೆಹಾಕಿದರು. ಆಗ ಮಲ್ಲಿಕಾರ್ಜುನ ದೊರೆಗಳು—ಆನೆಗಳ ಹಿಂಡಿನ ಮೇಲೆ ಒಂದೆ ಒಂದು ಮರಿಸಿಂಹ ಹಾರಿಬಂದು ಎರಗುವಂತೆ—ಒಬ್ಬರೆ ಒಬ್ಬರು ಕೋಟೆಯಿಂದ ಹೊರಬಿದ್ದು, ತಮ್ಮ ಬಿಚ್ಚುಗತ್ತಿಯ ಕೈಚಳಕದಿಂದ ವೈರಿಗಳ ಸೈನ್ಯವನ್ನು ಕೊಚ್ಚಿ ಕೊಚ್ಚಿ, ಸುಲ್ತಾನ್–ಗಜಪತಿಗಳಿಬ್ಬರನ್ನೂ ಕಂಗೆಡಿಸಿ ಬಿಟ್ಟರು. ಅವರಿಬ್ಬರಿಗೂ ತಮ್ಮ ಮೈಯನ್ನಷ್ಟು ಗಟ್ಟಿಮುಟ್ಟಾಗಿ ಉಳಿಸಿಕೊಂಡು, ತಮ್ಮ ರಾಜಧಾನಿಗಳಿಗೆ ಓಡಿಹೋಗಬೇಕಾದರೆ 'ಸಾಕು ಸಾಕು' ಎನಿಸಿಹೋಯಿತು. . . ."

"ಇಷ್ಟೊಂದು ಶೂರರಲ್ಲವೆ ನಮ್ಮ ಮಲ್ಲಿಕಾರ್ಜುನ ದೊರೆಗಳು?"

“ಶೂರರೆಂದು ಇನ್ನೂ ಬೇರೆಯಾಗಿ ಹೇಳಬೇಕೆ? ರಣಾಂಗಣದಲ್ಲಿ ಮಡಿದು, ವೀರಸ್ವರ್ಗಕ್ಕೆ ಏರಿಹೋಗುವ ಘಟಾನುಘಟಿಯದು! ಮೋಸಗಾರನಾದ ತಮ್ಮನ ಕೊಲೆಯ ಕತ್ತಿಗೆ ಗುರಿಯಾಗಿ, ಅಪಮೃತ್ಯುವಿನ ಬಾಯಿಗೆ ತುತ್ತಾಗಬೇಕಾಯಿತು....”

“ಅಯ್ಯೋ! ಪಾಪ! ಪಾಪ!” ಓಬಲಣ್ಣನು ಮರುಕದ ಉದ್ಗಾರ ತೆಗೆದ.

“ಸರಿ! ಇನ್ನೇನು, ತಿಳಿದೇ ಇದೆಯಲ್ಲವೇ? ಅಪಮೃತ್ಯುವಿನಿಂದ ಸತ್ತವರು ಪಿಶಾಚಿಗಳಾಗುವುದು ಕಟ್ಟಿಟ್ಟ ಮಾತು. ಕೊಲೆಗೊಂಡ ರಾಜಪರಿವಾರವೆಲ್ಲವೂ ದೆವ್ವಗಳ ದಂಡಾಗಿ, ಸಿಂಹಾಸನವನ್ನೇರಿದ ಈ ನಮ್ಮ ಹೊಸ ಮಹಾರಾಜರನ್ನು ಎಡೆಬಿಡದೆ ಕಾಡಲು ತೊಡಗಿತು..”

“ಅಯ್ಯೋ, ಹೀಗೆಯೇನು? ಮುಂದೇನಾಯಿತು?” ಬಡಿಗರ ದೇವಪ್ಪ ಕೇಳಿದ.

“ಮಹಾರಾಜರು ದೆವ್ವಗಳ ಪೀಡೆಯಿಂದ ಕಂಗೆಟ್ಟುಹೋದರು. ಇನ್ನೇನು ಮಾಡಬೇಕೆಂದು ಮುಂಗಾಣದ ಯೋಚನೆಯಲ್ಲಿರುವಾಗಲೆ ಏಟೂರು ನರಸಿಂಹಾಚಾರ್ಯರು ಇಲ್ಲಿಗೆ ಬಂದರು. ಆಚಾರ್ಯರು ಪ್ರಚಂಡವಾದ ರಾಮಭಕ್ತರು. ಅಖಂಡವಾಗಿ ಹನ್ನೆರಡು ವರ್ಷಗಳ ವರೆಗೆ ಶ್ರೀರಾಮಮಂತ್ರದ ಪುರಶ್ಚರಣವನ್ನು ಮಾಡಿ, ಮಹಾಸಿದ್ಧಿಯನ್ನು ಪಡೆದವರು. ಮಹಾರಾಜರವರಿಂದ ಭೂತಬಾಧೆಯ ವೃತ್ತಾಂತವನ್ನು ಕೇಳಿ, ಅವರು ನಿಶ್ಚಿಂತರಾಗಿರುವಂತೆ ದೊರೆಗಳಿಗೆ ಹೇಳಿದರು; ತಾವು ಆ ಪಿಶಾಚಪರಿವಾರವಿರುವ ಅರಮನೆಯಲ್ಲಿಯೆ ಇದ್ದುಕೊಂಡು, ರಾಮಾಯಣಮಹಾಗ್ರಂಥದ ಪಾರಾಯಣ–ಪಠನಗಳಿಗೆ ಮೊದಲು ಮಾಡಿದರು. ಆ ಅರಮನೆಯಲ್ಲಿಯೆ ಶ್ರೀರಾಮಪಟ್ಟಾಭಿಷೇಕದ ಮಹೋತ್ಸವವು ನಡೆಯುವಂತೆ ಏರ್ಪಾಡು ಮಾಡಿದರು. ರಾಮಾಯಣದ ಮಾಹಾತ್ಮ್ಯದಿಂದ–ಶ್ರೀರಾಮಪಟ್ಟಾಭಿಷೇಕೋತ್ಸವದ ದರ್ಶನದಿಂದ–ಅಲ್ಲಿಯ ಪಿಶಾಚಗಳೆಲ್ಲ ಸದ್ಗತಿಯೊಂದಿ ಸ್ವರ್ಗವನ್ನು ಸೇರಿದುವು. ಅದರಿಂದ ಮಹಾರಾಜರ ಪೀಡೆಯು ಹೊರಟುಹೋಯಿತು;

ಎಂತಲೆ ಆ ಏಟೂರು ನರಸಿಂಹಾಚಾರ್ಯರಿಗೆ ಮಹಾರಾಜರಿಂದ ಬೇಕಾದಷ್ಟು ಹಣ-ಹೊನ್ನು ಆಸ್ತಿ-ವೃತ್ತಿ ದೊರೆಯಿತು. ನಮ್ಮ ಮೊದಲಿನ 'ಶ್ರೀವಿರೂಪಾಕ್ಷ' ಮುದ್ರಿಕೆಯ ಹೊನ್ನುಗಳು ಹೋಗಿ, ಈಗಿನ ರಾಮಟಂಕವರಹಗಳು ಪ್ರಚಾರಕ್ಕೆ ಬರಲು ಕಾರಣವೇನೆಂದು ತಿಳಿದಿದ್ದೀರಿ? ಆ ನರಸಿಂಹಾಚಾರ್ಯರ ಶ್ರೀಮದ್ರಾಮಾಯಣ ಪಾರಾಯಣದ ಪ್ರಭಾವವೆ ಎಲ್ಲವೂ ಇದು!"

"ನರಸಿಂಹಾಚಾರ್ಯರಿಗೆ ಆಸ್ತಿ-ವೃತ್ತಿಗಳು ದೊರೆತುದರ ಇತಿಹಾಸ ಹೀಗಿದೆಯೇ? ಇದುವರೆಗೆ ಈ ಸಂಗತಿ ನನಗೆ ಗೊತ್ತಿರಲಿಲ್ಲ ಬಿಡಿ, ಸೆಟ್ಟರೆ!" ಓಬಲಣ್ಣ ಬೆರಗುಗೊಂಡು ನುಡಿದ.

"ಮೊನ್ನೆಮೊನ್ನೆಯ ಹುಡುಗ ನೀನು; ಇದೆಲ್ಲ ನಿನಗೆ ಹೇಗೆ ಗೊತ್ತಾಗಬೇಕು?" ಸೆಟ್ಟಿಯೆಂದ.

"ಒಬ್ಬಿಬ್ಬರು ಬ್ರಾಹ್ಮಣರಿಗೆ ಭಟ್ಟರಿಗೆ ದಾನಕೊಟ್ಟರೆ ಏನಾದ ಹಾಗಾಯಿತು? ಅವ್ಯವಸ್ಥಿತ ಆಡಳಿತಕ್ಕಾಗಿ ನಾಡಿಗೆ ನಾಡೇ ಗೋಳಿಟ್ಟಿರುತ್ತದೆ. ಇಷ್ಟು ದಿನಗಳವರೆಗೆ ನರಸಿಂಹ ದಣ್ಣಾಯಕರಾದರೂ ಇದ್ದರು; ತಕ್ಕಮಟ್ಟಿಗಾದರೂ ಜನರಿಗೆ ನ್ಯಾಯ ದೊರೆಯುತ್ತಲಿದ್ದಿತು. ಈಗ ಅವರ ಕುತ್ತಿಗೆಗೂ ಕತ್ತರಿಯ ಪ್ರಯೋಗ ಬಂದುಬಿಟ್ಟಿತು. ಇನ್ನು ಮೇಲೆ ನಮ್ಮ ಕನ್ನಡ ರಾಜ್ಯದ ಪಾಡೇನೂ ಚೆನ್ನಾಗಿ ಇದ್ದಂತೆ ಕಾಣುವುದಿಲ್ಲ–ಸೆಟ್ಟರೆ!" ದೇವಪ್ಪ ನಿಟ್ಟುಸಿರಿನೊಂದಿಗೆ ಮಾತನಾಡಿದ.

"ರಾಜಶೇಖರನು ದೊರೆಯಾಗಬೇಕು; ನರಸಿಂಹನಾಯಕನು ದಣ್ಣಾಯಕನಾಗಬೇಕು. ಅವರಿಬ್ಬರ ಕೈಗೆ ರಾಜ್ಯಸೂತ್ರಗಳು ಹೋದರೆ ಎಲ್ಲ ಮಾತೂ ಸರಿಹೋಗುವುದು!" ರಂಗಸೆಟ್ಟಿ ತನ್ನ ಅನುಭವದ ಬುದ್ಧಿಯಿಂದ ಅಳೆದು ಮಾತನಾಡಿದನು.

"ಅದು ಆಗುವುದೆಂದೋ, ನಮ್ಮ ಕಣ್ಣು ಕಾಣುವುದೆಂದೋ! ರಾಜ್ಯಕ್ಕೆ ಒಳ್ಳೆಯ ಕಾಲವಿದ್ದರೆ ಮೊದಲಿನಿಂದ ನಮಗೆ ರಾಜಶೇಖರನೆ ದೊರೆಯಾಗಿ ಇರುತ್ತಿರಲಿಲ್ಲವೇ!" ಓಬಲಣ್ಣನು ಹಣ್ಣಾದ ದನಿಯಲ್ಲಿ ಮಾತನಾಡಿದ.

"ಹೀಗೆ ಹಾದಿಗೆ ಹೊಂದಿ ಮಾತನಾಡೋ ಓಬಲಣ್ಣಾ ! ಯಾವಾಗಲೂ ನೋಡುತ್ತೇನೆ....ಇನ್ನೊಬ್ಬರ ಕೊರಡಿಗೆ ನಿನ್ನ ಕುಂಟೆಯಿದ್ದೇ ಇರುತ್ತದೆ." ಗಣಾಚಾರಿ ಮಾತಿನ ಕೊನೆಯೊಡನೆಯೆ ಮೇಲಕ್ಕೆದ್ದು ಬಿಟ್ಟ. ಎಲ್ಲರೂ ಒಬ್ಬರ ಹಿಂದೆ ಒಬ್ಬರಂತೆ ಎದ್ದು, ತಮ್ಮ ತಮ್ಮ ಮನೆಗಳಿಗೆ ಹೊರಟುನಡೆದರು ; ಸೆಟ್ಟಿ ಚುಟಿಕೆಯಲ್ಲಿದ್ದ ನಸ್ಯವನ್ನು ಮತ್ತೊಂದು ಸಲ ಸೊರ್‌ರ್ರೆಂದು ಮೂಗಿನ ಸೊಳ್ಳೆಗೇರಿಸಿ, ಕೆಳಕ್ಕೆ ಬಿದ್ದಿದ್ದ ಪಗಡೆ-ದಾಳಗಳನ್ನು ಕಟ್ಟಿಡಲು ತೊಡಗಿದನು.

---

## ೯ನೆಯ ಪರಿಚ್ಛೇದ

ಮರುದಿನದ ಸೂರ್ಯ ಶ್ರೀಪಂಪಾಪತಿಯ ದರ್ಶನಕ್ಕೆಂದು ಬಂದು ವಿಜಯನಗರದ ಮೂಡಣ ಬಾನಲ್ಲಿ ಮುಖವೆತ್ತಿ ನಿಂತುಕೊಂಡಿದ್ದಾನೆ. ಬಲಿಯುವುದರಲ್ಲಿದ್ದ ಆತನ ಹೊಂಗದಿರುಗಳು, ರಾಜಧಾನಿಯ ಸೌಧ-ಶಿಖರಗಳೆಲ್ಲಕ್ಕೆ ಮಿರುಗುಹಾಕಲು ತೊಡಗಿವೆ. ಶರತ್ಕಾಲದ ಕೊನೆ-ಕೊನೆಯ ದಿನದ ಬೆಳಗಿನ ಕುಳಿರ್‌ಗಾಳಿಯಿಂದ, ಇದ್ದೆಡೆಯಲ್ಲಿಯೆ ಮುದುರಿಕೊಂಡು ಕುಳಿತ ಜೀವಜಂಗುಳಿಯು, ಪೂರ್ವಸೂರ್ಯರಶ್ಮಿಯ ಮೃದೂಷ್ಣತೆಯಿಂದ ಹುರಿಗೊಂಡು, ಅಲಸಿಕೆಯ ಮುಸುಕನ್ನು ಓಸರಿಸಿ ಚೆಲ್ಲಿ, ಮೇಲಕ್ಕೆದ್ದು, ಸುತ್ತಿ ಸುಳಿದಾಡುವುದರಲ್ಲಿದೆ. ಬೆಳುಗಾಲದ ಬಗೆಬಗೆಯ ಹೂಗಳು ಅರಳಿ ಬಾಯ್ದೆರೆದು ನಿಂತು, ಸೌಂದರ್ಯವನಿತೆಯ ಪೂರ್ಣಯೌವನದ ಬಣ್ಣನೆಯ ಗೀತವನ್ನು, ಶಬ್ದಗಳಿಲ್ಲದ ಮೂಗು-ನುಡಿಯಲ್ಲಿ ಹಾಡುತ್ತಲಿವೆ.

ರಾಜಶೇಖರನು ಪ್ರಾತರ್ವಿಧಿಗಳನ್ನು ತೀರಿಸಿಕೊಂಡು, ಹಾಗೆಯೆ ಕೈದೋಟದಲ್ಲಿ ಸುತ್ತಾಡುತ್ತಿದ್ದನು. ಪ್ರತಿಯೊಂದು ಗಿಡ-ಬಳ್ಳಿಗಳೂ ರಾಜಶೇಖರನಿಗೆ ಪ್ರೀತಿಯ ಸಂತಾನವಿದ್ದಂತೆ; ಅವುಗಳ ಕೊನರು-ಚಿಗುರುಗಳನ್ನು ಕಂಡು, ಮಕ್ಕಳ ಬೆಳೆವಣಿಗೆಯನ್ನು ಕಂಡು ಹಿಗ್ಗುವ ಹೆತ್ತ

ತಾಯಂತೆ ಆತನ ಎದೆ ಉಬ್ಬುವುದು. ಕಂಪು ಸೂಸುತ್ತಿರುವ ಒಂದೊಂದು ಹೂಗಳನ್ನೂ ಕಂಡು, ಸದ್ಗುಣಿಯಾದ ಮಗನನ್ನು ಪಡೆದ ತಂದೆಯಂತೆ ಹೃದಯವು ಹೆಮ್ಮೆಯಿಂದ ಭಾರವಾಗಿ ನಿಲ್ಲುವುದು. ಹೀಚು, ಮಿಡಿ, ಕಾಯಿಗಳನ್ನು ಕಂಡಾಗ, ಹಾಡಿ ಊಡಿ ಬಳೆಯಿಸಿದ ಮಗುವು ಗಳಿಸಾಳಾಗಿ–ಹೀನದೀನರಿಗೆ ದಾನಮಾಡಿ–ಜನರಿಂದ ಹೊಗಳಿಸಿಕೊಳ್ಳು ತ್ತಿರುವುದನ್ನು ಕೇಳಿದ ಪರಿಪೋಷಕನ ಆನಂದೋನ್ನತಿಯನ್ನು ರಾಜ-ಶೇಖರನ ಮನಸ್ಸು ಅನುಭವಿಸುವುದು. ಎಲ್ಲವನ್ನೂ ನೆಟ್ಟದಿಟ್ಟಿಯಿಂದ ನಿಟ್ಟಿಸಿ ನೋಡುವನು. ಮೆಲುಗೈಯಿಂದ ಮುಟ್ಟಿಮುಟ್ಟಿ ಮುತ್ತಿಡು ವನು. ಅವನ ಈ ಪ್ರತಿದಿನದ ಬೆಳಗಿನ ಕಾರ್ಯಕ್ರಮವು ಒಂದೊಂದು ದಿನವೂ ಒಂದೊಂದು ಹೊಸ ತತ್ತ್ವವನ್ನು ತಿಳುಹಿಸುವುದು ; ಒಂದೊಂದು ಬಗೆಯ ಆತ್ಮಸಂತೃಪ್ತಿಯಲ್ಲಿ ಆತನನ್ನು ತೇಲಾಡಿಸುವುದು.

ರಾಜಶೇಖರನ ತೋಟದ ನೋಟವು ದಿನಕ್ಕಿಂತ ಬೇಗನೆ ಮುಗಿ ಯಿತು. ಇಂದಿನ ನಿರೀಕ್ಷಣೆಯಲ್ಲಿ ಯಾವ ಹೊಸ ಅನುಭೂತಿ ದೊರೆಯಿ ತೇನೋ ! ಮನೆಯ ಕಡೆಗೆ ತಿರುಗಿ ಬರುತ್ತಿರುವಾಗ, ಆತನ ಮುಖವು ಸ್ವಲ್ಪ ಬಾಡಿದಂತೆ ಕಾಣುತ್ತಿದ್ದಿತು. ನಿಧಾನವಾಗಿ ನಡೆದಿದ್ದ ಉಸಿರಾಟವು ಕಾತರಭಾವವನ್ನು ಸೂಚಿಸುತ್ತಿದ್ದಿತು.

ನಿತ್ಯವೂ ಒಳಚೌಕಿಗೆ ಬಂದೊಡನೆಯೆ ರಾಜಶೇಖರನು, ಹಕ್ಕಿಗಳೊ ಡನೆ ಹಕ್ಕಿಯಾಗಿ ಮಾತನಾಡುವವನು ; ಹಸುಗಳೊಡನೆ ಕರುವಿನಂತಾಗಿ ಚಿಣ್ಣಾಟವಾಡುವವನು ; ಕರುಗಳನ್ನು ತಾಯಿಯ ಹೃದಯದಿಂದ ಮೈದಡವಿ ಮುದ್ದಿಸುವವನು ; ಎರಳೆಗಳೊಡನೆ ಎರಳೆಯಾಗಿ ನೆಗೆದಾಡು ವವನು ; ಇಂದು ಅದೊಂದನ್ನೂ ಮಾಡದೆ, ಎಲ್ಲ ಪ್ರಾಣಿಗಳನ್ನೂ ಬರಿಯೆ ಸ್ನೇಹಪೂರಿತ ದೃಷ್ಟಿಗಳಿಂದ ನೋಡುತ್ತ ಚೌಕಿನಲ್ಲಿ ಸುಮ್ಮಗೆ ಸುತ್ತಾಡಿ ದನು ಮಾತ್ರ, ವಿನೋದದಾಟಗಳನ್ನು ನಡೆಯಿಸಲಿಲ್ಲ. ಪ್ರತಿದಿನದಂತೆ ತಮ್ಮೊಡನೆ ಮಾತುಕತೆಯಾಡದೆ– ಆಟವನ್ನಾಡದೆ— ಒಳಕ್ಕೆ ಹೊರಟು ನಡೆದಿರುವ ರಾಜಶೇಖರನನ್ನು ನೋಡಿ, ಎಲ್ಲ ಪಕ್ಕಿಗಳೂ ರೆಕ್ಕೆಗಳನ್ನು ಬಿದಿರಿ ಪಂಜರದಲ್ಲಿಯೆ ಅತ್ತಿತ್ತ–ಫಡಫಡನೆ– ಹಾರಾಡಲು ಮೊದಲು ಮಾಡಿದುವು. ಹಸುಗಳು ಗೋಣೆತ್ತಿ ಆಶೆಯ ನೆಟ್ಟನೋಟದಿಂದ

ನೋಡುತ್ತ ಅಂಭಾರವವನ್ನು ಮಾಡಿದುವು. ಹುಲ್ಲೆಗಳು ನಿಂತಲ್ಲಿ ನಿಲ್ಲದೆ ಹಾಗೆ ಹೀಗೆ ನೆಗೆದಾಡಿದುವು. ಒಂದು ಮರಿಹುಲ್ಲೆಯಂತೂ ಓಡಿ-ಓಡಿಹೋಗಿ, ಬಾಗಿಲೊಳಕ್ಕೆ ಕಾಲಿಡುತ್ತಲಿರುವ ರಾಜಶೇಖರನ ಹಿಂಬದಿಯನ್ನು ಸ್ನೇಹಶ್ವಾಸದ ಮೂಗಿನಿಂದ ಸೋಂಕಿತು. ಆಗ ರಾಜಶೇಖರನು ಹಾರಿ ಬಿದ್ದವನಂತಾಗಿ, ನಿಂತಿದ್ದಲ್ಲಿಯೆ ಹಿಂತಿರುಗಿ ನಿಂತ; ಮರಿಯ ಮೈಮೇಲೆ ಕೈಯನ್ನಾಡಿಸಿ, ಮುಖಕ್ಕೆ ಮುಖಹಚ್ಚಿ ಮುತ್ತಿಟ್ಟು, ಎರಡೂಗಲ್ಲಗಳನ್ನು ಹಿಡಿದು ಅಲುಗಾಡಿಸುತ್ತ 'ಹೂಂ, ಇನ್ನು ಹೋಗು ಚಿನ್ನಾ!' ಎಂದು ಮಮತೆಯಿಂದ ನುಡಿದ. ತನ್ನ ಜಾಣತನಕ್ಕಾಗಿ ಮೆಚ್ಚುಪಡೆದ ಬಾಲಕನೊಬ್ಬನ ಗಂಭೀರಭಾವದಿಂದ ಮರಿಯು ನುರಳಿತು; ಹೋಗಿ ತನ್ನ ತಾಯಿಗೆ ಅರಳಿದ ಎಳಗಣ್ಣುಗಳಿಂದ ಏನೇನನೋ ಹೇಳಲು ತೊಡಗಿತು.

ರಾಜಶೇಖರನು ಹಾಗೆಯೆ ಅಡಿಯಿಟ್ಟು ಹೋಗಿ, ಸಭಾಭವನದ ಆಸನವೊಂದರಲ್ಲಿ ಜೋಲುಮೈಯಿಂದ ಕುಳಿತುಕೊಂಡನು. ಒಂದೆರಡು ನಿಮಿಷಗಳು ಮೌನದಲ್ಲಿ ಮುಳುಗಿ ಸಾಗಿಹೋದುವು. ಬಳಿಕ ಆತನ ಮುಖದಿಂದ ಮಂಜುಲ ರಾಗತರಂಗಿಣಿಯೊಂದಿಗೆ ಬೆರೆತುಕೊಂಡು, ತುಂಡುಗಪನವೊಂದು ಹೊರಕ್ಕೆ ಹೊರಟಿತು :—

"ಹೊಸಬೆಳಕದೊಂದು ಮುಂಬಾನೊಳಗೆ ಮಿರುಮಿರುಗಿ
'ಹೊಸದಾರಿಯೊರೆವೆ ನಿನಗೆ' ನ್ನುತಿರಲು-
ಹೊಸರಾಗವೊಂದು ವೀಣೆಯ ತಂತಿಯುನು ಮಿಡಿದು
'ಹೊಸ ಹಾಡ ಕೇಳು ನೀ' ನೆನ್ನುತಿರಲು-
ಹೊಸದೊಂದುಮಂತ್ರ ಬಂದೆದುರು 'ನಿನ್ನಯ ಬದುಕ
ಹಸನಾಗಿಸುವೆ' ನೆಂದು ಸಾರುತಿರಲು-
ಹುಸಿಗನಸು ಹರಿದು, ಕಗ್ಗತ್ತಲೆಯು ಕಂಗೆಡಿಸೆ,
ಉಸಿರುಗಳೆಯುತೆ ಬಿದ್ದೆನಯ್ಯೊ! ಗೋಳು!"

ಹಠಾತ್ತಾಗಿ ತೋಟಗಾರರ ಚಿಕ್ಕಮಕ್ಕಳಿಬ್ಬರು ದುಡುದುಡನೆ ಓಡುತ್ತ ಒಳಕ್ಕೆ ಬಂದರು. ಮುಂದೆ ಇದ್ದ ಹುಡುಗನು ರಾಜಶೇಖರನ ಮೈಯನ್ನು ಮೊದಲು ಸೋಂಕಿ 'ನೋಡು, ನಾನು ಮೊದಲು

ಮುತ್ತಿದೆ. ' ಎಂದು ಮುದ್ದುಮುದ್ದಾಗಿ ಮಾತನಾಡಿದನು. ಹಿಂದೆ ಇದ್ದ ಹುಡುಗಿ ಸೋತಿದ್ದಳಾದುದರಿಂದ ಮುಖ ಸಣ್ಣಗೆ ಮಾಡಿಕೊಂಡು, ಕೆಳಕ್ಕೆ ತಗ್ಗಿಸಿ, ನಿಂತಲ್ಲಿಯೆ ನಿಂತುಬಿಟ್ಟಳು. ರಾಜಶೇಖರನು ಹುಡುಗಿಯತ್ತ ನೋಡಿದ; ಎದ್ದು ಹೋಗಿ ಆ ಹುಡುಗಿಯ ಕೈಹಿಡಿದು ಕರೆದುಕೊಂಡು ಬಂದ. ಹುಡುಗ-ಹುಡುಗಿಯರಿಬ್ಬರನ್ನೂ ಮುಂದೆ ಕುಳ್ಳಿರಿಸಿಕೊಂಡು ತಾನೂ ಕುಳಿತ. ಹುಡುಗಿ ತನ್ನ ಮುಖದಲ್ಲಿಯ ಮೊದಲಿನ ಸೋಲಿನ ವ್ಯಸನವನ್ನು, ಸಂತೃಪ್ತಿಯ ಸ್ಮಿತಹಾಸದಲ್ಲಿ ತೇಲಿಸಿಬಿಟ್ಟಳು. ರಾಜಶೇಖರನು ಮಕ್ಕಳೊಡನೆ ಮಗುವಾಗಿ ಮಾತನಾಡಿದ:

" ಹುಂ! ನಿನ್ನೆ ನಿಮಗೆ ನಾನು ಕಲಿಸಿದ್ದ ಹಾಡು ಬರುತ್ತದೆಯೊ, ಇಲ್ಲವೊ ? "

ಹುಡುಗಿ ಗೆಲುವಿನ ನಗೆಯೊಂದಿಗೆ ಹೇಳಿದಳು :

" ನನಗೆ ಬತ್ತೈತೆ; ಬಾಲಯ್ಯಗೆ ಬಲೂದೇ ಇಲ್ಲಾ. "

ಹುಡುಗ ಆವೇಶದಿಂದ ಹೇಳಿದ:

" ಅದ್ಯಾಕೇ ಶುಲ್ಲಾಡ್ತೀಯಾ? ನಂಗೂ ಬತ್ತೈತೆ ಅಣ್ಣಾಜೀ ! "

" ನಿನ್ನೆ ನಮ್ಮ ತಾತಯ್ಯ ಕೇಲಿದಾಗ ಹಾದಲಿಲ್ಲ್ಯಾಕೆ ಮತ್ತೆ ?"

" ಆಗ ಇನ್ನೂ ಚೆನ್ನಾಗಿ ಬತ್ತಿದ್ದಿಲ್ಲೇಲೇ ! ಎತ್ತು ನಿನ್ನ ಜಂಬ!"

ರಾಜಶೇಖರನು ಎರಡೂ ಕೈಗಳಿಂದ ಇಬ್ಬರ ಕೆನ್ನೆಗಳೆರಡನ್ನೂ ಹಿಡಿದು, ಮುಖವನ್ನು ಮೇಲಕ್ಕೆತ್ತಿ, ವಾತ್ಸಲ್ಯದ ನೋಟದಿಂದ ನೋಡುತ್ತ ನುಡಿದನು :

" ಹಾಗಾದರೆ ಇಬ್ಬರೂ ಜೊತೆಗೂಡಿ ಹೇಳಿ. . ನೋಡುತ್ತೇನೆ. "

ಹುಡುಗರಿಬ್ಬರೂ ಸರಿಯಾದ ಆಸನದಲ್ಲಿ ಕುಳಿತರು. ಮುಗಿದ ಕೈಗಳನ್ನು ಎದೆಯ ಒಳಿಯಲ್ಲಿ ಹೊಂದಿಸಿ ಹಿಡಿದರು. ರಾಜಶೇಖರನ ಕಡೆಗೆ ಕಣ್ಣನೋಟವನ್ನು ನೆಲೆಗೊಳಿಸಿ, ತೊದಲು ತೊದಲು ಮಾತುಗಳಲ್ಲಿ ಹಾಡುಹೇಳಲು ತೊಡಗಿದರು :

**" ಜಯ, ಜಯ, ವಿರೂಪಾಕ್ಷ ತಂದೆ !—ನಮ್ಮಯ—**
**ಮೊರೆಯ ಕೇಳು ! ಇಂದೆ ! "**

**" ಜಯ, ಜಯ, ಭುವನೇಶ್ವರಿಯಮ್ಮಾ !–ನಾಡಿನ**
**ಭಯ ಕಳೆಯುವುದಮ್ಮಾ ! "**

ಹಾಡನ್ನು ಎರಡೆರಡು ಸಲ ಹೇಳಿ ಮುಗಿಸಿ, ಮೆಚ್ಚಿಕೆಯನ್ನು ಹಾರಯಿಸುವ ನೋಟಗಳಿಂದ ಹುಡುಗ-ಹುಡುಗಿಯರಿಬ್ಬರೂ ರಾಜಶೇಖರನ ಕಡೆಗೆ ನೋಡುತ್ತಲಿದ್ದರು. ಆತನು ಇಬ್ಬರ ಬೆನ್ನನ್ನೂ ತಟ್ಟುತ್ತ ಹೇಳಿದನು :

" ಭಲೆ ಚೆನ್ನಾಗಿ ಹೇಳುತ್ತೀರಿ! ನೀವಿಬ್ಬರೂ ಬಲು ಜಾಣರು, ತಿಳಿಯಿತೇ ? "

ಹೆಮ್ಮೆಯ ದನಿಯಲ್ಲಿ ಇಬ್ಬರೂ ಹೇಳಿದರು :

" ನಮಗೆ ಮತ್ತೊಂದು ಹಾಡು ಕಲಿತಬೇಕು ! "

ಇದ್ದುದಿದ್ದ ಹಾಗೆಯೆ ನರಸಿಂಹನಾಯಕನು ಹೊಸಬನೊಬ್ಬನನ್ನು ಒಡಗೊಂಡು ಒಳಕ್ಕೆ ಬಂದುದರಿಂದ, ರಾಜಶೇಖರನು ಹುಡುಗರಿಬ್ಬರನ್ನೂ ಆಗಿನ ಮಟ್ಟಿಗೆ ನಿರಾಶೆಗೊಳಿಸಬೇಕಾಯಿತು. ಬಂದಿದ್ದವರನ್ನು ಸ್ವಾಗತಿಸಿ ಕುಳ್ಳಿರಿಸಿ, ಹುಡುಗರತ್ತ ತಿರುಗಿ ಹೇಳಿದನು :

" ನಾಳೆಗೆ ನಿಮಗೆ ಹೊಸ ಹಾಡು ಕಲಿಸುತ್ತೇನೆ. ಈಗ ಆಟವಾಡಲಿಕ್ಕೆ ಹೋಗುತ್ತೀರಾ ? "

ಹುಡುಗರಿಬ್ಬರೂ ಹುಲ್ಲೆಯ ನೆಗೆತದಿಂದ ಹಾರುತ್ತ ಹೊರಕ್ಕೆ ನಡೆದುಬಿಟ್ಟರು. ನರಸಿಂಹನಾಯಕನು ಹೊಸಬನ ಕಡೆಗೆ ಕೈಮಾಡಿ ತೋರಿಸಿ, ರಾಜಶೇಖರನಿಗೆ ಹೇಳಿದನು :

" ಅಣ್ಣಾಜಿ, ಇವರೊಬ್ಬರು ನನ್ನ ಅಂತರಂಗದ ಸ್ನೇಹಿತರು; ನಮ್ಮ ಕನ್ನಡಸಾಮ್ರಾಜ್ಯದಲ್ಲಿ ನಿಷ್ಠೆಯುಳ್ಳವರು. ದಿಲಾವರ್‌ಖಾನರೆಂದು ನೀವು ಹೆಸರು ಕೇಳಿರಬಹುದಲ್ಲ ! ಅವರೇ ಇವರು ! "

" ಅಂ ! ದಿಲಾವರ್‌ಖಾನರೇ ಇವರು ? ಹೆಸರನ್ನು ಮಾತ್ರ ಕೇಳಿ ಬಲ್ಲೆ; ಆದರೆ ನಾನು ಕೇಳಿದ ಹೆಸರು ಸಾಮ್ರಾಜ್ಯನಿಷ್ಠರದೆಂದಲ್ಲ; ಸಾಮ್ರಾಜ್ಯವಿರೋಧಿಯದೆಂದು ! "

" ಅದೇ ರೂಪದಲ್ಲಿಯೆ ಇವರು ನಗರದಲ್ಲೆಲ್ಲ ಪರಿಚಿತರು; ನನ್ನ ಹೇಳಿಕೆಯಿಂದಲೆ ಹೀಗೆ ಇರಬೇಕಾಗಿ ಬಂದಿದೆ ಇವರಿಗೆ. ಇಲ್ಲದಿದ್ದರೆ ವೈರಿಗಳ ಸೊಲ್ಲು-ಸುಳಿದಾಟಗಳು ನಮಗೆ ಸಮಯಕ್ಕೆ ಸರಿಯಾಗಿ ಗೊತ್ತಾಗಲಾರವು ! "

“ ಇವರು ಇಲ್ಲಿಗೆ ಬಂದು ಇನ್ನೂ ಒಂದು ವರ್ಷವೇನೂ ಆಗಿರಲಾರದಲ್ಲವೇ ? ”

“ ಎರಡು ವರ್ಷಗಳು ಮುಗಿಯಲು ಬಂದುವು ! ಕೆಲವು ದಿನಗಳವರೆಗೆ ಅಜ್ಞಾತರಾಗಿ ನನ್ನ ಬಳಿಯಲ್ಲಿ ಇದ್ದರು; ಬಳಿಕ ಉಪಾಯಾಂತರದಿಂದ ನಾಷೀರ್‌ಮುಹಮ್ಮದನನ್ನು ಆಶ್ರಯಿಸಿದರು. ”

“ ನಾಷೀರ್ ಮುಹಮ್ಮದನು ಆಶ್ರಯವಿತ್ತುದು ಹೇಗೆ? ಆತನಲ್ಲಿ ಇವರು ಏನು ಮಾಡುತ್ತಾರೆ ? ”

“ ಸದ್ಯಕ್ಕೆ ಇಷ್ಟೇ ಹೇಳುತ್ತೇನೆ. ಆ ಖಾನನಿಗೆ ‘ ದಿಲ್‌ರುಬಾ ’ ಕೇಳುವ ಹುಚ್ಚು ಬಹಳ. ದಿಲಾವರ್‌ಖಾನರು ದಿಲ್‌ರುಬಾ ನುಡಿಸುವುದರಲ್ಲಿ ನುರಿತ ಕೈಯವರು. ಆಗಾಗ ಇವರ ಸಂಗೀತವಾದನವನ್ನು ಕೇಳುವನಲ್ಲದೆ, ತನ್ನ ಮಗಳಿಗೆ ಇವರಿಂದ ಸಂಗೀತಪಾಠ ಹೇಳಿಸುತ್ತಿರುವನು. ಇವರ ಊಟ-ಉಡುಗೆ ಎಲ್ಲವೂ ಅವನಲ್ಲಿಯೆ ನಡೆಯುವುವು. ಇನ್ನೊಂದು ವಿಶೇಷವೇನೆಂದರೆ: ವಿಜಯನಗರದ ವೈದಿಕಸಾಮ್ರಾಜ್ಯವನ್ನು ಮಣ್ಣುಮುಕ್ಕಿಸಿ, ಎಲ್ಲೆಲ್ಲಿಯೂ ಇಸ್ಲಾಮ್‌ಧರ್ಮದ ಬಾವುಟವನ್ನು ಮೆರೆಯಿಸುವಂತೆ ಮಾಡಬೇಕೆಂದು ಹೊಂಚುಹಾಕುತ್ತಲಿರುವ ಆ ಖಾನನು– ಇವರ ಹೃದಯವನ್ನು ಅರಿಯದೆ–ಇವರನ್ನು ತನ್ನ ಆಪ್ತಾಲೋಚಕರೊಬ್ಬರನ್ನಾಗಿ ಮಾಡಿಕೊಂಡಿದ್ದಾನೆ. ಅಲ್ಲಿ ಆಗಾಗ ನಡೆಯುತ್ತಿರುವ ಚರ್ಚೆ–ವಿಚರ್ಚೆಗಳೆಲ್ಲ ನನಗೆ ಕಾಲಕಾಲಕ್ಕೆ ತಿಳಿಯುತ್ತಿದ್ದುದರಿಂದಲೆ ನಾನು, ಸಮಯೋಚಿತವಾದ ಮಾರುಬಲೆಗಳನ್ನು ಹೂಡಿ, ಇದುವರೆಗೆ ಹಗೆಗಳ ಬೇಳೆ ನಸುವೂ ಬೇಯದಂತೆ ಮಾಡಿದ್ದೇನೆ. ಎಂತಲೆ ನಾಷೀರ್‌ಖಾನನಿಗೆ ನನ್ನನ್ನು ಕಂಡರೆ ಹೆದರಿಕೆ– ಹೊಟ್ಟೆಯಕಿಚ್ಚು ಎರಡೂ ಇವೆ. ”

“ ರಾಜಕಾರ್ಯವೆಂದರೆ ಮೋಸ–ವಂಚನೆ–ಸುಳ್ಳು ಇವುಗಳ ತಳಹದಿಯ ಮೇಲೆಯೆ ನಿಂತಿದೆಯೇನು ನಾಯಕರೆ ! ಮೊದಲಿನವರು ನಿಃಸ್ವಾರ್ಥಿಗಳಾಗಿ, ಕೇವಲ ಸಮಾಜದ ಹಿತಸಾಧನೆಗೆಂದು ಈ ರಾಜ್ಯಸಂಸ್ಥೆಗಳನ್ನು ಹುಟ್ಟಿಸಿದರು; ಅವೇ ಈಗ ಅನೇಕ ಬಗೆಯ ಸ್ವಾರ್ಥಸಾಧನೆಗಳಿಗೆ ಕಾರಣವಾಗಿ, ಸಮಾಜದ ಅಹಿತಕ್ಕಾಗಿ ಮುಖವೆತ್ತಿ

ಕೊಂಡು ನಿಂತಿವೆ. ಈ ರಾಜ್ಯಸಂಸ್ಥೆಗಳಿಗಾಗಿ ಇಲ್ಲದ ಅಭಿಮಾನಗಳು ಜಾಗೃತವಾಗಿ ರೋಷ-ಹಗೆತನಗಳು ಹೆಚ್ಚುತ್ತಲಿವೆ. ನನ್ನ ಹೃದಯವನ್ನು ನಾನೆ ಅದೇಷ್ಟೋ ಸಲ ನಿರೀಕ್ಷಿಸುತ್ತಿರುವೆನಲ್ಲವೆ! ಅಲ್ಲಿ ಕೂಡ ಇನ್ನೂ ಅನೇಕ ಅಭಿಮಾನದ ಬೀಜಗಳು ಉಳಿದುಕೊಂಡಿವೆ. 'ವಿಜಯನಗರದ ಸಾಮ್ರಾಜ್ಯ' ಎಂಬ ಹೆಸರನ್ನು ಕೇಳಿದೊಡನೆಯೆ ಮೈಗೆ ಜುಮ್ಮುದಟ್ಟುತ್ತದೆ; ನವಿರು ಎದ್ದು ನಿಲ್ಲುತ್ತದೆ. 'ಸಾಮ್ರಾಜ್ಯವಿರೋಧಿಗಳು' ಎಂದೊಡನೆಯೆ ಸರನರಗಳಲ್ಲಿಯ ನೆತ್ತರೂ ಕುದಿಯಲು ತೊಡಗುತ್ತದೆ. ನಾಯಕರೆ, ವೈಯಕ್ತಿಕ ಸ್ವಾರ್ಥದಂತೆಯೆ ಇದೂ ಒಂದು ಬಗೆಯ ವಿಶಿಷ್ಟಸ್ವಾರ್ಥದ ರಾಜಸವೃತ್ತಿಯೆಂಬುದು ಆಗಾಗ ನನ್ನ ವಿಚಾರಾಕಾಶದಲ್ಲಿ ಮೂಡುವುದು; ಆದರೆ ಏನು ಮಾಡಿದರೂ ಈ ಮನೋವೃತ್ತಿಯನ್ನು ಕಡಿಮೆಮಾಡಿಕೊಳ್ಳಲಿಕ್ಕೆ ಬರಲೊಲ್ಲದಾಗಿದೆ. ಉಸಿರಾಟವು ಚೇತನದೇಹದ ಸ್ವಭಾವವಾಗಿರುವಂತೆ, ಈ ಸಾಮ್ರಾಜ್ಯಾಭಿಮಾನವೂ ನನ್ನದೊಂದು ಸ್ವಭಾವವಾಗಿ ಬಿಟ್ಟಿದೆ."

"ಕ್ಷತ್ರಿಯ ಸಂತಾನ ಅಣ್ಣಾಜಿ; ರಾಜಸತನವೆ ಅದರ ಸ್ವಭಾವವಲ್ಲವೇ? ನಿಮ್ಮ ಈ ಅಭಿಮಾನದ ಪರಿಚಯವು ನನಗೆ ಆದಂದಿನಿಂದ, ಸಾಮ್ರಾಜ್ಯೋನ್ನತಿಯ ವಿಷಯದಲ್ಲಿ ನನ್ನ ಆಶೆ ಹೆಚ್ಚುತ್ತಲಿದೆ. ಇಂದಿನ ಗಂಡಾಂತರದ ಸಮಯವನ್ನೂ-ಕಷ್ಟದಿಂದಾದರೂ-ದಾಟಿ ಪಾರುಗಂಡೇವೆಂಬ ಭರವಸೆ ನನ್ನಲ್ಲಿ ನೆಲೆಗೊಳ್ಳುತ್ತಲಿದೆ. ಆದರೆ ವಿಚಿತ್ರವನ್ನು ನೋಡಿ ಅಣ್ಣಾಜಿ! ರಾಜ್ಯದ ಶತ್ರುಗಳು ರಾಜರಿಗೆ ಬೇಕಾದವರಾಗಿ ರಾಜಧಾನಿಯಲ್ಲಿಯೆ ಬೀಡುಬಿಟ್ಟು ಕುಳಿತಿದ್ದಾರೆ. ದೇಶದಲ್ಲಿ ದೊಂಬೆಗಾರರ ಉಲುಹು ಎತ್ತಕಡೆಯಿಂದಲೂ ಕೇಳಿಸುತ್ತಲಿದೆ. ಇಂತಹ ವೇಳೆಯಲ್ಲಿ ಮುಖ್ಯಾಧಿಕಾರದ ಸೂತ್ರ ನನ್ನ ಕೈಯಿಂದ ಸಿಡಿದು ದೂರಕ್ಕೆ ಹೊರಟುಹೋಯಿತು. ಸಾಲದುದಕ್ಕೆ ಪೆದ್ದರಾಯನು ಬೇರೆ ಉತ್ತರ ಭಾಗದಲ್ಲಿ, ಬಂಕಾಪುರದ ಮಾಂಡಲಿಕನೊಂದಿಗೆ ಸಂಚುಮಾಡಿಕೊಂಡು ವಿಜಯನಗರದ ಮೇಲೆ ಏರಿಬರಲಿದ್ದಾನೆಂಬ ಸುದ್ದಿ ಬಂದಿದೆ ನನಗೆ. ದಿಕ್ಕು-ದಿಕ್ಕುಗಳಿಂದಲೂ ಸಂಕಟಗಳು ಸುತ್ತಿಕೊಂಡು ಬರುತ್ತಿವೆ, ಸಾಮ್ರಾಜ್ಯದ ಮೇಲೆ. ಈಗ ನಿಮ್ಮ ಜಾಗೃತಸಾಮ್ರಾಜ್ಯಾಭಿಮಾನದ ಸಹಾಯವು

ನಮಗೆ ಪೂರ್ಣವಾಗಿ ದೊರೆಯದಿದ್ದರೆ ಬದುಕುವುದಕ್ಕೆ ಬೇರೆ ದಾರಿಯೆ ಇಲ್ಲ ಅಣ್ಣಾಜಿ!"

"ನಾಯಕರೆ, ಸಾಮ್ರಾಜ್ಯಕ್ಕಾಗಿ ನಾನು ಸತ್ಯದ ದಾರಿಯಲ್ಲಿಯ ಎಂತಹ ಮೇಲು ಕೀಳು ಕೆಲಸಗಳನ್ನು ಮಾಡಲಿಕ್ಕೂ ಸಿದ್ಧನಾಗಿದ್ದೇನೆ. ಮೊದಲಿನಿಂದಲೂ ನನ್ನದು ಒಂದುಬಗೆಯ ನೇರವಾದ ಜೀವನ. ರಾಜ-ಕಾರ್ಯದ ತೊಡಕುಬಲೆಗಳನ್ನು ತಂದು ಬಿಡಿಸುತ್ತ ಕುಳಿತುಕೊಳ್ಳುವ ಮನಸ್ಸಿಲ್ಲದವನು. ಎಂತಲೆ ನಾನದರ ಗೊತ್ತು-ಗುರಿಗಳನ್ನು ಹೆಚ್ಚಾಗಿ ಅರಿತವನಲ್ಲ. ನೀವು ಹೇಳುವವರು; ನಾನು ಮಾಡುವವನು! ನಾನೀಗ ಮಾಡಬೇಕಾದುದೇನು? ಹೇಳಿಬಿಡಿ!"

"ಅಣ್ಣಾಜಿ, ಪೆದ್ದಣ್ಣನ ಮನಸ್ಸನ್ನೊಲಿಸಿ, ಸದ್ಯ ಒಳಜಗಳವೊಂದನ್ನೆಬ್ಬಿಸಿ ಸಾಮ್ರಾಜ್ಯದ ಮೂಲಕ್ಕೆ ಕೊಡಲಿಯನ್ನೆತ್ತುವ ಆತ್ಮಘಾತಕ-ತನವನ್ನು ಮಾಡಬೇಡಿರೆಂದು ಬಿನ್ನವಿಸಿಕೊಂಡು ಬರಬೇಕೆಂದು ನನ್ನ ಹಂಬಲ;ಅದಕ್ಕಾಗಿ ನಾನು ಬಂಕಾಪುರದತ್ತ ಹೋಗಿ ಬರಬೇಕೆಂದಿದ್ದೇನೆ. ನನ್ನ ಹೊರತು ಇನ್ನೊಬ್ಬರಿಂದ ಈ ಕೆಲಸವಾಗದು. ನಾನು ಇಲ್ಲಿ ಇಲ್ಲದಿದ್ದಾಗ, ನಿಮ್ಮ ದಿನಚರ್ಯೆಯನ್ನು ಸ್ವಲ್ಪ ಮಾರ್ಪಡಿಸಿಕೊಂಡಿರಬೇಕಾದ ಸಂದರ್ಭ!"

"ನಾನೇನು ಮಾಡಬೇಕು?"

"ಮಹಾರಾಜರ ಅವಿವೇಕದ ಮೂಲಕವಾಗಿ ಘಡೆಯುತ್ತಿರುವ ರಾಜಧಾನಿಯ ಅವ್ಯವಸ್ಥೆಯಲ್ಲಿಯಂತೂ ಕೈಯಿಕ್ಕಲು ಯಾರಿಗೂ ಬರುವಂತಿಲ್ಲ. ಅದನ್ನು ನೋಡಿ ಸಹಿಸಿಕೊಂಡು ಇರಬೇಕಾದುದಷ್ಟೇ! ಆದರೆ ಹೊರಗಿನ ಅಭಿಯೋಗಗಳು ಯಾವ ಕಾಲಕ್ಕೆ ಹೇಗೆ ಬಂದಾವೆಂಬುದರ ನಿಯಮವಿಲ್ಲ. ಅದೆಲ್ಲವನ್ನೂ ಸರಿಯಾಗಿ ವಿಚಾರಿಸಿ, ನಾನು ಬರುವವರೆಗೆ ನನ್ನ ಸ್ಥಳದಲ್ಲಿ ನೀವಿದ್ದುಕೊಂಡು, ಇಲ್ಲಿಯ ಸಾಮ್ರಾಜ್ಯನಿಷ್ಠರ ಬಳಗದಿಂದ ತಕ್ಕ ಏರ್ಪಾಡುಗಳನ್ನು ಮಾಡಿಸಬೇಕಾಗಿದೆ. ನಾನು ಎಲ್ಲರಿಗೂ ಹೇಳಿ ಇಟ್ಟಿದ್ದೇನೆ. ಯಾವುದಾದರೂ ಆಜ್ಞೆಹೊರಡುವುದಿದ್ದಲ್ಲಿ ಅದು ನಿಮ್ಮ ಹೆಸರಿನಿಂದ ಹೊರಟು ಎಲ್ಲರಿಗೂ ಗೊತ್ತಾಗಬೇಕು. ಕೋಟೆಯೊಳಗಿನ ಮುಖ್ಯ ಸೈನ್ಯದ ಅಧಿಪತಿಗಳು ನಮ್ಮ ಕೈಯಲ್ಲಿಲ್ಲ. ಆನೆಗೊಂದೆಯ

ಚಿಕ್ಕ ಸೈನ್ಯದ ದಳಪತಿಯಾದ ಇರುಗನಾಯಕನ ಸಹಾಯ ನಮಗೆ ಪೂರ್ಣವಾಗಿ ಇದೆ. ದಿಲಾವರ್‌ಖಾನನು ಆಗಾಗ ಅಲ್ಲಲ್ಲಿಯ ಸಂಗತಿಗಳನ್ನು ತಿಳುಹುತ್ತಿರುವನು. ನೀವೂ ನಿಮ್ಮ ಒಳಗಣ್ಣನ್ನು ಹೊರಕ್ಕೆ ತಿರುಗಿಸಿರಿ. ಕಾಲವು ಕಠಿನವಿದೆ. ಇದೆಲ್ಲವನ್ನೂ ನಿಮಗೆ ಬಿನ್ನವಿಸಿ, ದಿಲಾವರ್‌ಖಾನನ ಪರಿಚಯ ಮಾಡಿಕೊಟ್ಟು, ನನ್ನ ಕೆಲಸಕ್ಕೆ ನಾನು ಹೊರಡಬೇಕೆಂದೇ ಈಗ ಇಲ್ಲಿಯವರೆಗೆ ಬಂದಿದ್ದೇನೆ."

"ನರಸಿಂಹನಾಯಕರೆ, ನಿಮ್ಮಲ್ಲಿರುವ ಕನ್ನಡರಾಜ್ಯದ ಪ್ರೇಮ-ಕಳವಳಗಳು ನನ್ನನ್ನು ಸೇವಕನನ್ನಾಗಿ ಮಾಡಿಕೊಂಡು ಬಿಟ್ಟಿವೆ. ನೀವು ಏನು ಹೇಳಿದರೂ ಅದನ್ನು ತಲೆಗೊಟ್ಟು ಮಾಡಲಿಕ್ಕೆ ಸಿದ್ಧನಾಗಿ ನಿಲ್ಲುತ್ತೇನೆ. ನೀವು ಬಂಕಾಪುರಕ್ಕೆ ಅವಶ್ಯವಾಗಿ ಹೋಗಿ ಬನ್ನಿ ; ಪೆದ್ದಣ್ಣನಿಗೆ ನಾನೂ ಒಂದು ಓಲೆ ಬರೆದು ಕೊಡುತ್ತೇನೆ."

ನರಸಿಂಹನಾಯಕನು ಕೃತಕೃತ್ಯಭಾವದ ದೃಷ್ಟಿಯಿಂದ, ದಿಲಾವರನನ್ನೊಮ್ಮೆ ರಾಜಶೇಖರನನ್ನೊಮ್ಮೆ ನೋಡಿ, ಸಮಾಧಾನದ ನಿಟ್ಟುಸಿರೊಂದನ್ನು ಹೊರಕ್ಕೆ ಹಾಕಿದನು.

---

## ೧೦ನೆಯ ಪರಿಚ್ಛೇದ

ವಿರೂಪಾಕ್ಷರಾಯನು ವಿಜಯನಗರದಲ್ಲಿ ಆಳುತ್ತಿರುವಾಗ, ಬಾಮನೀರಾಜ್ಯದ ರಾಜಧಾನಿಯಾದ ಕಲಬುರ್ಗೆಯಲ್ಲಿ ಎರಡನೆಯ ಮಹಮ್ಮದಶಹನು ದಕ್ಷಿಣದ ಸುಲ್ತಾನನಾಗಿದ್ದನು. ಇವನು ಮಹ-ಮ್ಮೂದ ಗವಾನನೆಂಬ ಚತುರನಾದ ಮಂತ್ರಿಯ ಸಹಾಯದಿಂದ ತನ್ನ ರಾಜ್ಯವನ್ನು ಬಹಳವಾಗಿ ವಿಸ್ತರಿಸಿದನು. ವಿಜಯನಗರದ ರಾಜ್ಯಕ್ಕೆ ಸೇರಿದ ಗೋವೆ, ಚೌಲ, ದಾಬೋಲ ಮೊದಲಾದ ತೀರಪ್ರದೇಶಗಳನ್ನು ಗೆದ್ದು, ತನ್ನ ರಾಜ್ಯಕ್ಕೆ ಸೇರಿಸಿಕೊಂಡು, ವಿಜಯನಗರದವರ ವಿದೇಶಿಯ

ವ್ಯಾಪಾರದ ಬಲುಹನ್ನು ಕಡಿಮೆಮಾಡಿದನು. ಉತ್ತರದ ಗಡಿಯ ಬೆಳಗಾಂವಿಯ ಭದ್ರವಾದ ದುರ್ಗವನ್ನು ಹಿಡಿದು, ಸಾಮ್ರಾಜ್ಯದ ಉತ್ತರದ ಮೇರೆಯನ್ನು ದೂರದ ವರೆಗೆ ಕೆಳಕ್ಕೆ ಸರಿಸಿದನು. ಬಾಮನಿ ಸುಲ್ತಾನರಲ್ಲೆಲ್ಲ ಎರಡನೆಯ ಮುಹಮ್ಮದನೆ ಹೆಚ್ಚು ಘನತೆಗೇರಿದವನೆಂದು ಇತಿಹಾಸವು ಕೂಗಿ ಕೂಗಿ ಹೇಳುತ್ತಿದೆ. ವಿಜಯನಗರದ ಸಿಂಹಾಸನದ ಮೇಲೆ ವಿರೂಪಾಕ್ಷನಂತಹ ಕಣ್ಣಿದ್ದ ಕುರುಡದೊರೆಯು ಕುಳಿತು ಆಳುತ್ತಿರುವಾಗ, ಈ ಎರಡನೆಯ ಮುಹಮ್ಮದಶಹನಲ್ಲದೆ ಇನ್ನಾವ ಶಹನು ಸುಲ್ತಾನನಾಗಿದ್ದರೂ ಅವನು ಇತಿಹಾಸದಲ್ಲಿ ಶೂರ-ವೀರನೆನಿಸಿಕೊಂಡು ಮೆರೆಯಬಹುದಾಗಿದ್ದಿತು.

ನಮ್ಮ ಕಥಾನಕದ ಕಾಲದಲ್ಲಿ, ಮುಹಮ್ಮದಶಹನ ರಾಜ್ಯದ ಪರಿಸ್ಥಿತಿಯು ಅಷ್ಟೊಂದು ಅನುಕೂಲವಾಗಿರಲಿಲ್ಲ. ಮೇಲೆ ಹೇಳಿದ ತೀರಪ್ರದೇಶಗಳನ್ನೂ ಬೆಳಗಾಂವಿಯ ಕೋಟೆಯನ್ನೂ ಹಿಡಿದಕೊಳ್ಳುವಾಗ, ಸುಲ್ತಾನನ ಅಸಂಖ್ಯಬಲವೂ ಅಗಣಿತಸಂಪತ್ತಿಯೂ ಸೂರೆಸೂರೆಯಾಗಿದ್ದಿತು. ದೊರೆಯು ದುರ್ಬಲನಾಗಿದ್ದರೂ ವಿಜಯನಗರದ ಸಾಮ್ರಾಜ್ಯದಲ್ಲಿಯ ಅಲ್ಲಲ್ಲಿಯ ಸಾಮಂತ-ಮಾಂಡಲಿಕರುಗಳಲ್ಲಿಯ ಸ್ವಧರ್ಮಪ್ರೀತಿ ಅಖಂಡವಾಗಿ ಜಾಗೃತವಾಗಿದ್ದಿತು. ಸಾಮ್ರಾಜ್ಯಕ್ಕಾಗಿ ಅಲ್ಲದಿದ್ದರೂ ಸ್ವಧರ್ಮ-ಸ್ವಾಭಿಮಾನಗಳ ಸಂರಕ್ಷಣೆಗಾಗಿ, ಹಿಂದುಗಳಿಗೆ ಮುಹಮ್ಮದೀಯರೊಡನೆ- ಜೀವದ ಹಂಗುದೊರೆದು-ಕಾದಬೇಕಾಗುತ್ತಿದ್ದಿತು. ಎಂತಲೆ ಕಲಬುರ್ಗೆಯ ಮುಹಮ್ಮದಶಹನು ಉತ್ತರದ ವಿಜಯಯಾತ್ರೆಗೆಂದು ತೆಗೆದುಕೊಂಡು ಹೋಗಿದ್ದ ಪ್ರಚಂಡಸೈನ್ಯದಲ್ಲಿ, ನೂರರಲ್ಲೊಂದು ಪಾಲು ಮರಳಿ ಬಂದು ಕಲಬುರ್ಗೆಯನ್ನು ತಲ್ಪಬೇಕಾದರೆ ಸಾಕುಸಾಕಾಗಿ ಹೋಯಿತು. ಹಿಂದುಗಳು ಏನು ಮಾಡಿಯೂ ಪ್ರಯೋಜನವೇನು ? ಶಿಥಿಲವಾಗಿದ್ದ ಆಡಳಿತದಲ್ಲಿ, ಬೇಡಿದ್ದ ಬೆಂಬಲವು ಸಮಯಕ್ಕೆ ದೊರೆಯದೆ, ವ್ಯರ್ಥವಾಗಿ ಕನ್ನಡವೀರರು ರಣದಲ್ಲಿ ಬಿದ್ದುಉರುಳಬೇಕಾಯಿತು; ಕೈಯಲ್ಲಿದ್ದ ಪ್ರದೇಶಗಳನ್ನು ಪ್ರಾಣದೊಡನೆಯೆ ಬಿಟ್ಟುಕೊಡಬೇಕಾಗಿ ಬಂದಿತು. ಆಗಿನ ಬೆಳಗಾಂವಿಯ ದುರ್ಗಾಧಿಪತಿಯಾಗಿದ್ದ ವೀರಕರ್ಣರಾಯನು ಮುಹಮ್ಮದಶಹನಿಗೆ ತೋರಿಸಿದ

ಕೈಯೇನು ಸಾಧಾರಣವಾದುದಲ್ಲ; ಆದರೆ ಮಹಮ್ಮದಶಹನ ಸೈನ್ಯದ ಹುಚ್ಚುಹೊಳೆಯ ಎದುರು, ಆ ಕನ್ನಡವೀರ ಕರ್ಣರಾಯನೊಬ್ಬನ ಶೌರ್ಯದ ಬೆಟ್ಟವು ಎಷ್ಟು ದಿನ ತಡೆದು ನಿಂತೀತು ?

ವಿರೂಪಾಕ್ಷರಾಯನಿಗೆ ತನ್ನ ಜನರ–ಅರ್ಥಾತ್ ತನ್ನ–ಪರಾಭವ ಗಳೊಂದೂ ಕಾಣುತ್ತಿರಲಿಲ್ಲವೇನೊ ! ಅಭಿಮಾನವು ಹೃದಯದ ಮೇಲೆ ಬರೆಯ ಚುರುಕನ್ನು ಎಳೆಯುತ್ತಿರಲಿಲ್ಲವೇನೊ ! ರಾಜ್ಯವನ್ನು ಆಕ್ರಮಿಸುವಾಗ ಎಡೆಬಿಡದೆ ಜ್ವಲಿಸುತ್ತಿದ್ದ ಮಹತ್ವಾಕಾಂಕ್ಷೆಯ ದಳ್ಳುರಿಯು, ರಾಜ್ಯಾಭಿಷೇಕದ ಜಲದಿಂದ ತಣ್ಣಗಾಗಿ ಹೋಯಿತೇನೊ! ಎದೆಯ ಕೆಚ್ಚು ಸಿಂಹಾಸನಾರೋಹಣಕಾಲದ ಹೋಮಾಗ್ನಿಯಲ್ಲಿ ಬೆಂದು ಬೂದಿಯಾಗಿದ್ದಿತೇನೊ !

ಮಹಮ್ಮದಶಹನ ರಾಜ್ಯದಲ್ಲಿ ಈಗ ವಿಜಯಯಾತ್ರೆಯ ಮೂಲಕ ವಾದ ಸ್ವಯಂಕೃತ ಸಂಕಟವಲ್ಲದೆ, ಒಂದರ ಹಿಂದೆ ಒಂದರಂತೆ ಮೂರು ವರ್ಷಗಳವರೆಗೆ ಮಳೆಯಾಗದೆ–ಬೆಳೆಬಾರದೆ–ಇದ್ದುದರಿಂದ, ಕ್ಷಾಮದ ದೈವಕೃತವಿಪತ್ತೊಂದು ರಾಜ-ಪ್ರಜೆಗಳಿಬ್ಬರ ಮನಸ್ಸನ್ನೂ ತಿಕ್ಕಿಮುಕ್ಕು ತ್ತಿದ್ದಿತು. ಅದರಲ್ಲಿಯೆ ಸಿಯಾ-ಸುನ್ನೀಪಂಥಗಳ ಮತಕಲಹವೊಂದು ಉಗ್ರರೂಪತಾಳಿ ನಿಂತಿದ್ದಿತು. ಈ ಮತಕಲಹದ ಪರಿಣಾಮವಾಗಿಯೆ ವಿರೋಧಿಗಳು ಮಹಮ್ಮೂದ್‌ಗವಾನನ ವಿಷಯಕ್ಕೆ ಸುಲ್ತಾನನ ಕಿವಿಯಲ್ಲಿ – ಇಲ್ಲದುದಿಲ್ಲದುದನ್ನು–ಊದಿದುದರಿಂದ, ರಾಜಮಂತ್ರಿಗಳ ನಡುವೆ ವಿಪರೀತವಾದ ವೈಷಮ್ಯವು ನಿಂತುಕೊಂಡು, ಇಬ್ಬರ ಎದೆ ಗಳನ್ನೂ ಚುಚ್ಚಿಚುಚ್ಚಿ ನೋಯಿಸುತ್ತಿದ್ದಿತು: ಮಹಮ್ಮದಶಹನ ಮುನ್ನಿನ ಉತ್ಸಾಹವು ಕೊನೆಯತನಕ ಉಳಿದು ಬಂದಿದ್ದಲ್ಲಿ, ವಿಜಯ ನಗರದ ಕೊನೆಯ ಸಮ್ರಾಟನು ವಿರೂಪಾಕ್ಷರಾಯನೆ ಆಗುತ್ತಿದ್ದನು. ತಾಳಿಕೋಟೆಯ–ಅಲ್ಲಲ್ಲ– ರಾಕ್ಷಸತಂಗಡಿಗೆಯ ಕಾಳೆಗದ ಕತೆಯು, ವಿಜಯನಗರದ ವಿನಾಶದ ಕತೆಯಾಗಿ ನಮ್ಮ ಇತಿಹಾಸಾಕಾಶದಲ್ಲಿ ಸೊಲ್ಲುಗೊಡದೆ ಹೋಗುತ್ತಿದ್ದಿತು. 'ನಮ್ಮ ಕನ್ನಡಸಾಮ್ರಾಜ್ಯವು ಅಂದೆಯೆ ಹೋಗಿದ್ದರೇನು, ಮುಂದೆ ಹೋದರೇನು ! ಅಂತೂ ಹೊರಟುಹೋದುದು ಮಾತ್ರ ಸರಿಯಷ್ಟೆ ! ' ಎಂದು ಕೆಲವರು

ಅಸಮಾಧಾನದ ಉದ್ಗಾರ ತೆಗೆಯಬಹುದು. ಆದರೆ ಮುಂದೆ ಹೋದುದರಿಂದ, ನರಪತಿ ಕೃಷ್ಣದೇವರಾಯ, ಅಳಿಯ ರಾಮರಾಯರಂತಹ ಅಪ್ರತಿಮ ವೀರರ ಚರಿತ್ರೆಯು ಕನ್ನಡಿಗರಿಗೆ ದೊರೆತು, 'ಅಂತಹರ ವಂಶಜರು ನಾವು' ಎಂದು ಹೆಮ್ಮೆ-ಹಿಗ್ಗುಗಳಿಂದ ಹೇಳುವುದಕ್ಕೆ ಆಸುವು ದೊರೆಯಿತು. ಅದೂ ಒಂದು ಕಾಲರಾಯನು ಕನ್ನಡಿಗರ ಮೇಲೆ ಮಾಡಿದ ಮಹೋಪಕಾರವೆಂದೆ ಹೇಳಬೇಕು.

ಏನಾದರೇನು! ಕಲಬುರ್ಗಿಯು ರಾಜಧಾನಿಯಲ್ಲವೆ! ಬರದ ಬಾಧೆ ಹಳ್ಳಿಗರಿಗೆ—ಒಕ್ಕಲಿಗರಿಗೆ—ಅದರಲ್ಲಿಯೂ ಬಡವರಿಗೆ. 'ಸುಂಕದವನಿಗೇನು ಗೊತ್ತು ಸುಖದುಃಖ?' ಎಂದು ನಮ್ಮಲ್ಲೊಂದು ನಾಡನುಡಿಯಿದೆ. ಅದರಂತೆಯೆ 'ರಾಜಧಾನಿಯವರೇನು ಬಲ್ಲರು ರೈತರ ಕಷ್ಟ-ನಷ್ಟ?' ಎಂದೊಂದು ಹೊಸಗಾದೆಯನ್ನೂ ಹೆಣೆಯಬಹುದು. ಇದೇ ಮಹಮ್ಮದ್‌ಶಹನ ಕಾಲದಲ್ಲಿಯೇ ನಡೆದುದಿರಬಹುದು; ಪರಂಪರೆಯಿಂದ ನಮ್ಮಲ್ಲೊಂದು ಕತೆ ನಡೆದುಕೊಂಡು ಬಂದಿದೆ:—

'ಬರದ ಬಾಧೆಯಿಂದ ಬಡಜನರು ಹೊಟ್ಟೆಗಿಲ್ಲದೆ ಬಳಲುತ್ತಿದ್ದಾರೆ. ಅವರ ತೆರಿಗೆ ಬಿಟ್ಟುಬಿಡಬೇಕು, ಅವರಿಗೆ ಏನಾದರೂ ಕೊಟ್ಟು ಸಹಾಯ ಮಾಡಬೇಕು' ಎಂದು ನಾಡಿನ ಪರಿಸ್ಥಿತಿಯನ್ನರಿತಿದ್ದ ದಿವಾಣನು—ಕರುಳುಕರಗುವಂತೆ—ಸುಲ್ತಾನನೆದುರು ಬಿನ್ನವಿಸಿದನಂತೆ. ಸುಲ್ತಾನನು ಅಚ್ಚರಿಗೊಂಡು 'ಏನು, ಹಾಲು ಅನ್ನ ಕೂಡ ಅವರಿಗೆ ಸಿಕ್ಕಲಾರದೇನು?' ಎಂದು ಕೇಳಿದನಂತೆ. ಸಮಾಜಜೀವನವನ್ನು ಕಣ್ಣಿಟ್ಟು ವಿಮರ್ಶೆ ಮಾಡದ, ಸ್ವಾನಂದಮತ್ತರಾದ ದೊರೆಗಳ ಅಪಹಾಸಕ್ಕಾಗಿ ಈ ಕತೆ ಹುಟ್ಟಿದ್ದರೂ ಹುಟ್ಟಿರಬಹುದು. ಸರಿ, ಮತ್ತೆ ನಾವೀಗ ಕಲಬುರ್ಗಿಯ ಕಡೆಗೆ ಕಣ್ಣಿಡೋಣ!

ಎರಡುತಾಸು ರಾತ್ರಿಯಾಗಿರಬಹುದು. ರಾಜಧಾನಿಯ ಮುಖ್ಯ ಮುಖ್ಯ ಬೀದಿಗಳಲ್ಲೆಲ್ಲ ಕುದುರೆ, ರಥ, ಅಂದಣ, ತೆರೆಯಂದಣ ಮೊದಲಾದ ವಾಹನಗಳನ್ನೇರಿ ಅಮೀರರೂ ಉಮರಾವರೂ ಸರದಾರರೂ ನವಾಬರೂ ಅತ್ತಣಿಂದಿತ್ತ, ಇತ್ತಣಿಂದತ್ತ ಹೋಗಿ ಬರುವುದರಲ್ಲಿದ್ದಾರೆ.

ಒಬ್ಬರೆದುರು ಹತ್ತು ಜನ ದೀವಟಿಗೆಯವರಾದರೆ ಇನ್ನೊಬ್ಬರೆದುರು ಇನ್ನೂ ಹೆಚ್ಚು. ಬೀದಿಯಲ್ಲೆಲ್ಲ ನಡೆದಾಡುವ ದೀಪದ ತೋರಣಗಳನ್ನು ಕಟ್ಟಿದಂತೆ ಕಾಣುತ್ತಿರುವುದು. ಪಟ್ಟಣದ ಬೀದಿಗಳಲ್ಲಿ ಭವ್ಯವಾಗಿ ತಲೆಯೆತ್ತಿಕೊಂಡು ನಿಂತ ಮಸೀದೆ ಮಿನಾರುಗಳ ಹಿಂದೆ, ವೈದಿಕರ ದೇವಮಂದಿರಗಳು ಎಲ್ಲಿ ಅಡಗಿ ಕುಳಿತುಕೊಂಡಿದ್ದುವೊ! ಮೌಲವಿಗಳ ಕುರಾನದ ಪಠನವು, ಆಚಾರ್ಯರ—ಭಟ್ಟರ—ವೇದಮಂತ್ರಧ್ವನಿಯನ್ನು ಯಾವ ಮೂಲೆಗೆ ಕಳುಹಿ ಬಿಟ್ಟಿದ್ದಿತೊ! ಅಫಘಾನ್, ಇರಾಣ, ತುರ್ಕಸ್ತಾನ್ ಮೊದಲಾದ ವಿದೇಶಗಳಿಂದ ಬಂದ ಮುಹಮ್ಮದೀಯರು ವಸತಿಮಾಡಿಕೊಂಡಿದ್ದ ಸುಂದರವಾದ ಮಹಲುಗಳು, ಕನ್ನಡಿಗರ ಮನೆ–ಮಠಗಳನ್ನು ಮುಖ್ಯಬೀದಿಯಿಂದ ಬಹಿಷ್ಕರಿಸಿ ಬಿಟ್ಟಿದ್ದುವೇನೊ! ಭೂದೇವಿ ಅಬಲೆ, ಗೆದ್ದವರನ್ನು ತಕ್ಕೈಬೀಳುವುದು ಅಬಲೆಯರ ಸ್ವಭಾವ; ಅಹುದಲ್ಲವೆ?

ಸುಲ್ತಾನ್ ಮುಹಮುದ್‌ಶಹನು ತನ್ನ ಆಲೋಚನಾಗಾರದಲ್ಲಿ, ತೀವಾಸಿಗೆಯೊಂದರ ಮೇಲೆ ಒಬ್ಬನೆ ಕುಳಿತುಕೊಂಡಿದ್ದಾನೆ; ಯಾರದೊ ದಾರಿಯನ್ನು ಕಾಯುತ್ತಲಿದ್ದಾನೆ. ಆರೇಳು ನಿಮಿಷಗಳು ಕಳೆಯುವುದರಲ್ಲಿಯೆ ಖಾಸ್‌ದಿವಾನ್—ದಿನಾಜಖಾನನು ಬಂದು, ಸಂಪ್ರದಾಯದಂತೆ ಸಲ್ಲಾಂ ಮಾಡಿ, ಅಡಿಗಳು ಹೊರಕ್ಕೆ ಕಾಣದಂತೆ ಮಂಡೆಗಾಲೂರಿ, ಬಾದಶಹನ ಮುಂಬದಿಯ ಆಸನದ ಮೇಲೆ ಕುಳಿತುಕೊಂಡನು. ಸುಲ್ತಾನನು ಲಖೋಟೆಯೊಂದನ್ನು ಮುಂದೆ ಮಾಡಿ ಹೇಳಿದ:

"ಇದು ನೋಡಿ, ವಿಜಯನಗರದಿಂದ ಕಾಗದ ಬಂದಿದೆ."

ದಿನಾಜಖಾನನು ಎದ್ದುನಿಂತು, ವಿನಯದಿಂದ ಎರಡೂ ಕೈಗಳಲ್ಲಿ ಆ ಕಟ್ಟೋಲೆಯನ್ನು ತೆಗೆದುಕೊಂಡನು. ಮತ್ತೆ ಮೊದಲಿನಂತೆಯೆ ಕುಳಿತು, ಕಟ್ಟೋಲೆಯ ಬಾಯನ್ನು ಬಿಚ್ಚಿ, ಕಾಗದವನ್ನು ಕೈಗೆ ತೆಗೆದುಕೊಂಡು, ಪರ್ಶಿಯನ್ ಭಾಷೆಯಲ್ಲಿದ್ದ ಆ ಓಲೆಯನ್ನು ಓದಲು ತೊಡಗಿದನು. ಬಿರುದಾವಳಿ ಸಲ್ಲಾಂಗಳ ಸಂಪ್ರದಾಯ ಮುಗಿದ ಮೇಲೆ, ಮುಂದಿನ ವಿಚಾರವಿದ್ದುದು ಹೀಗೆ:

"**ಖಾವಿಂದ!**

ನಮ್ಮ ದಖ್ಖನ್ನಿನ ರಾಜ್ಯಕ್ಕೊದಗಿದ ಆಪತ್ತಿಯ ವಿಷಯ ನನಗೆ

ಗೊತ್ತಿಲ್ಲದೆ ಇಲ್ಲ. ಮೊದಲಿನ ಸೈನ್ಯಬಲ, ಸಂಪತ್ತಿಯ ಬಲ ನಮಗೆ ಇದ್ದುದಾಗಿದ್ದರೆ, ಇಂತಹ ಅನುಕೂಲಕಾಲದಲ್ಲಿ ವಿಜಯನಗರದಂತಹ ಹತ್ತು ಸಾಮ್ರಾಜ್ಯಗಳನ್ನೂ ಬಗ್ಗುಬಡಿಯಬಹುದಾಗಿದ್ದಿತೆಂಬ ಮಾತನ್ನು ಈ ಮೊದಲು ಅನೇಕಸಲ ಸನ್ನಿಧಿಗೆ ವಿದಿತಪಡಿಸಿದ್ದೇನೆ. ಹುಜೂರಿಗೆ ಹೆಚ್ಚು ಹಣ ಹೆಚ್ಚು ಶ್ರಮ ವೆಚ್ಚವಾಗದೆ, ಸುಲಭವಾಗಿ ವಿಜಯನಗರವು ಕೈವಶವಾಗುವಂತೆ, ನಾನಿಲ್ಲಿ ಹಲವುರೀತಿಯಿಂದ ಹೊಂಚುಹಾಕುತ್ತಿರುವುದು ಅಡಿಗಳಿಗೆ ಅರಿಕೆಯಿರುವ ವಿಷಯ. ಇದುವರೆಗೆ ನನ್ನ ಯಾವ ಹಂಚಿಕೆಯೂ ಅಷ್ಟೊಂದು ಸಾಧಿಸಿರಲಿಲ್ಲ. ಈ ಕಾಫರರ ಮಹಾರಾಜನಿಂದ ರಾಯಚೂರಿನ ಕೋಟೆಯ ಆಧಿಪತ್ಯವನ್ನು ನಮ್ಮ ಷೇರ್ ಉದ್ದೀನನಿಗೆ ಕೊಡಿಸುವಂತೆ ಏರ್ಪಾಡು ಮಾಡಿದ್ದೆ. ಆ ಕೆಲಸದಲ್ಲಿ ಸನ್ನಿಧಿಗೆ ಬರೆದು ತರಿಸಿಕೊಂಡಿದ್ದ ಸರ್ತಕಿಯರಿಂದ ತುಂಬ ನೆರವು ದೊರೆಯಿತು. ಆದರೇನು? ಆ ಸೈತಾನ್ ನರಸಿಂಹಮಂತ್ರಿ, ನನ್ನ ಎಲ್ಲ ಹಂಚಿಕೆಗಳಂತೆ ಇದಕ್ಕೂ ಅಡ್ಡಬಂದು ಬಿಟ್ಟ. ಇದರಿಂದ ನಮಗೆ ತಾನಾಗಿಯೆ ಸುವರ್ಣ-ಸಂಧಿ ಕೂಡಿಬಂದಂತಾಯಿತು. ಕಾಫರ್ ಮಹಾರಾಜನು ನರಸಿಂಹನನ್ನು ಮಂತ್ರಿಪದದಿಂದ ತೆಗೆದುಹಾಕಿದ್ದಾನೆ. ಅವನಲ್ಲದೆ ಇನ್ನುಳಿದ ಯಾವ ಅಧಿಕಾರಿಗಳೂ ಹೆಚ್ಚು ನೀರುಳ್ಳವರಲ್ಲ. ಸದ್ಯ ನರಸಿಂಹನು ರಾಜಧಾನಿಯಲ್ಲಿಯೂ ಇಲ್ಲ. ಈಗ ಸಾಧಾರಣಸೈನ್ಯದೊಂದಿಗೆ ಬಂದು ಮುತ್ತಿದರೂ, ವಿಜಯನಗರದ ಕೋಟೆ ಸುಲಭವಾಗಿ ಸನ್ನಿಧಿಯ ಅಧೀನಕ್ಕೆ ಬರುವುದು. ಇಂತಹ ಅನುಕೂಲಸಂದರ್ಭ ದೊರೆಯುವುದು ಕಷ್ಟ. ಗಾಳಿ ಬಿಟ್ಟಾಗಲೆ ತೂರಿಕೊಳ್ಳುವುದು ಜಾಣತನ. ಎಂತಲೆ ಕುದುರೆಯಾಳುಗಳೊಂದಿಗೆ ಈ ಅವಸರದ ಕಾಗದವನ್ನು ಕಳುಹಿಸಿಕೊಟ್ಟಿದ್ದೇನೆ.

ಈ ವಿಸ್ತಾರವಾದ ಕಾಫರ್‌ಸಾಮ್ರಾಜ್ಯವು ನಷ್ಟವಾಗಿ, ನಮ್ಮ ಇಸ್ಲಾಂ ವಿಜಯಧ್ವಜವು, ವಿಜಯನಗರದ ಕೋಟೆಯಮೇಲೆ ನೇರವಾಗಿ ನಿಂತು ಎಂದು ಫಡಫಡನೆ ಹಾರಾಡೀತು, . . ಎಂದು ನಾನದನ್ನು ಕಣ್ಣು ತುಂಬ ನೋಡಿ ಆನಂದ ಪಟ್ಟೇನು?....ಎಂದು ನಿರಂತರದ ಚಿಂತೆ ನನಗೆ. ಅದಕ್ಕಾಗಿ ಎಂತಹ ತ್ಯಾಗವನ್ನು ಮಾಡಲಿಕ್ಕೂ ಹಿಂದೆ ಮುಂದೆ ನೋಡಲಾರೆನೆಂಬ ವಿಷಯ ಪಾದಕ್ಕೆ ಗೊತ್ತಿದೆ. ಈಗ ಅಲ್ಲಿ ಅನುಕೂಲ ಪರಿಸ್ಥಿತಿ_

ಯೇನಾದರೂ ಇದ್ದಲ್ಲಿ, ನನಗೆ ಕೂಡಲೆ ಬರೆದು ತಿಳುಹುವ ಕೃಪೆ ಯಾಗಬೇಕು. ಎಂದರೆ ನಾನಿಲ್ಲಿ ಮಾಡಬೇಕಾದ ಏರ್ಪಾಡುಗಳನ್ನೆಲ್ಲ ಮಾಡಿ, ಇಲ್ಲಿಗೆ ಸೈನ್ಯವು ಬಂದು ತಲ್ಪಬೇಕಾದ ದಿನವನ್ನು ನಿಶ್ಚಿತಪಡಿಸಿ, ಹುಜೂರಿಗೆ ಬರೆದು ಬಿನ್ನವಿಸುವೆನು. ಪಾದಸೇವಕನ ಮೇಲೆ ಕೃಪೆ ಯಿರಬೇಕು.

ಖಾವಿಂದರ ಗುಲಾಮ್

**ನಾಷೀರ್ ಮಹಮ್ಮದ್ "**

ದಿನಾಜಖಾನನು ಪತ್ರವನ್ನೋದಿ ಮುಗಿಸಿ, ಬಾದಶಹನ ಕಡೆಗೆ ಆತುರದ ದೃಷ್ಟಿಯಿಂದ ನೋಡಲುತೊಡಗಿದನು. ಸುಲ್ತಾನನು ಕೊಂಚ ಕಾಲ ಗಡ್ಡವನ್ನು ನೀವಿಕೊಳ್ಳುತ್ತ, ತಲೆ ಅಲ್ಲಾಡಿಸುತ್ತ, ವಿಚಾರಕ್ಕೊಳ ಗಾಗಿ ಮಾತನಾಡದೆ ಕುಳಿತಿದ್ದು, ಬಳಿಕ ತಟ್ಟನೆ ಹೇಳಿದನು:

"ದಿನಾಜಖಾನ್, ಇನ್ನು ಮೇಲೆ ದಾರಿಕಾಯುವುದು ಬೇಡ! ಇದ್ದಷ್ಟು ಸೈನ್ಯವನ್ನು ತೆಗೆದುಕೊಂಡು ಹೊರಟೇ ಬಿಡೋಣ! ಒಂದು ಸಲ ನಮ್ಮ ಅದೃಷ್ಟದ ಪರೀಕ್ಷೆಯಾಗಿಬಿಡಲಿ! ಎಂದು ಹೊರಟು, ಎಂದು ಅಲ್ಲಿಗೆ ಬಂದು ತಲ್ಪಬೇಕೆಂಬುದನ್ನು ಬರೆದು ತಿಳುಹುವಂತೆ ಪತ್ರಬರೆದು, ಬಂದಿದ್ದ ಸವಾರರ ಕೈಯಲ್ಲಿ ಕೊಟ್ಟು ಕಳುಹಿಸಿಬಿಡಿ! ಖುದಾನು ತನ್ನ ಧರ್ಮಪ್ರಸಾರಕರಿಗೆ ಸಹಾಯವನ್ನು ಮಾಡಿಯೆ ಮಾಡುತ್ತಾನೆ."

"ಹುಜೂರಿನ ಅಪ್ಪಣೆ" ಎಂದು ದಿನಾಜಖಾನನು ಸೇವಕನನ್ನು ಕೂಗಿ, ಬರೆಯುವ ಉಪಕರಣಗಳನ್ನು ತರಲು ಹೇಳಿದನು.

---

## ೧೧ನೆಯ ಪರಿಚ್ಛೇದ

ಒಬ್ಬರ ಕೈಯಲ್ಲಿ ಕಹಿಬೇವನ್ನಿಡುತ್ತ, ಇನ್ನೊಬ್ಬರ ಬಾಯಿಗೆ ಸಿಹಿ-ಬೆಲ್ಲವನ್ನು ಕೊಡುತ್ತ, ತನಗಾವುದೂ ಗೊತ್ತಿಲ್ಲವೆಂಬಂತೆ ಗಂಭೀರವಾಗಿ ಹಜ್ಜೆಗಳನ್ನಿಡುತ್ತ, ಎಂದಿನಿಂದಲೊ ಕಾಲರಾಯನು ತಿರುಗುತ್ತಿರು ವನು. ಬೇವಿನ ಕಹಿಯನ್ನು ಅನುಭವಿಸುವವರು ಕಾಲನನ್ನು ಶಪಿಸಿ

ಬೈಯುವರು; ಬೆಲ್ಲದ ಸಿಹಿಯನ್ನು ತಿಂದವರು ಆತನನ್ನು ಹೊಗಳಿ ಹಾಡುವರು. ಆದರೇನು, ಕಾಲನು ಅನಾಸಕ್ತನಾದ ನಿಷ್ಕಾಮಕರ್ಮ ಯೋಗಿಯು; 'ತುಲ್ಯನಿಂದಾಸ್ತುತಿಪ್ರಿಯ'ನು; 'ಸಮದುಃಖ-ಸುಖಃ ಕ್ಷಮಿ'ಯು. ಬೈದವರ ಬಗೆಗೆ ಕ್ರೋಧವಿಲ್ಲ; ಹೊಗಳಿದವರ ವಿಷಯದಲ್ಲಿ ಸಂಪ್ರೀತಿಯಿಲ್ಲ. ಒಂದು ಚಮತ್ಕಾರದ ವಿಷಯ: ಕಾಲನ ಲೀಲಾ-ಸಂಸಾರದಲ್ಲಿ ಇಂದು ಬೈಯುತ್ತಿದ್ದವರು ನಾಳೆಗೆ ಆತನ ಕೃತಜ್ಞತೆಯನ್ನು ಕೊನೆದುಕೊಂಡಾಡಬಹುದು; ಇಂದು ಹೊಗಳಿಹಾಡುವವರು ಮುಂದೆ ಆತನಿಗೆ ಕರ್ಕಶ—ಕಠೋರನೆಂಬ ಪದವಿಯನ್ನು ಕೊಡಬಹುದು. ಇದಾವುದನ್ನೂ ಗಣಿಸದೆ, ಯಂತ್ರದ ಗಾಲಿ ಸಾಗಿದಂತೆ ನಿರ್ವಿಕಾರ-ನಿರ್ವಿಚಾರದವನಾಗಿ ಕಾಲನು ಸಾಗಿರುವನು.

ಹೇಮಾಂಬಿಕೆಯ ಮದುವೆಯ ಸಮಾರಂಭ ಮುಗಿದು ಇಂದಿಗೆ ಏಳುದಿನಗಳು ಕಳೆದುಹೋದುವು. ಬರಲಿರುವ ಒಂದೊಂದು ಹೊಸ ದಿನವೂ ತನ್ನ ಬಸಿರಲ್ಲಿ ನಾಳೆಯ ಎಷ್ಟೊಂದು ಇತಿಹಾಸವನ್ನು ಅಡಗಿಸಿ-ಕೊಂಡು ಬರುವುದೋ ಆ ಒಂದೊಂದು ದಿನದ ಇತಿಹಾಸವು ಅದೆಷ್ಟು ಜನ ಕವಿಗಳಿಗೆ—ಕತೆಗಾರರಿಗೆ—ಕಾದಂಬರಿಕಾರರಿಗೆ ಎಷ್ಟೊಂದು ವಸ್ತು-ಉಪವಸ್ತುಗಳನ್ನು ಒದವಿಸಬಲ್ಲುದೊ! ಆದರೆ ಕವಿಯೆ ಆಗಲಿ, ಕತೆ-ಕಾದಂಬರಿಕಾರರೆ ಆಗಲಿ, ಆ ವಸ್ತು-ಉಪವಸ್ತುಗಳಲ್ಲಿ ತಮಗೆ ಬೇಕಾ-ಗಿದ್ದುವಷ್ಟನ್ನು ಮಾತ್ರ ಆಯ್ದುಕೊಳ್ಳುವರು. ಹೀಗೆ ಮಾಡದಿದ್ದರೆ ಒಂದು ಕತೆಗೆ ನೂರೆಂಟು ಕತೆ ಬಳೆದು, ರಸ-ಭಾವಗಳಿಗೆ ಸ್ಥಾಯಿತ್ವವು ಉಳಿಯದೆ ಹೋಗುವುದು; ಕತೆ-ಕಾದಂಬರಿಗಳು ಹರಟೆಯ ಕಂತೆಗಳಾಗಿ ಪರಿಣಮಿಸಬಹುದು.

ರಾತ್ರಿ ಒಂದುವರೆ ಪ್ರಹರದ ಗಂಟೆ ಬಾರಿಸುತ್ತಿದ್ದಾಗ, ಅರಮನೆಯ ರಾಣಿವಾಸದ ಶಯನಗೃಹವೊಂದರಲ್ಲಿ, ನೆಲದಲ್ಲಿ ಹಾಸಿದ್ದ ರತ್ನಗಂಬಳಿ ಯೊಂದರ ಮೇಲೆ ಹೇಮಾಂಬಿಕೆಯು ಕುಳಿತುಕೊಂಡಿದ್ದಳು. ಪಕ್ಕ-ದಲ್ಲಿಯೆ ಇದ್ದ ಮಣಿಮಂಚವು ರಾಜೋಚಿತ ಶಯ್ಯೆಯಿಂದ ಸಜ್ಜುಗೊಂಡು ನಿಂತಿದ್ದಿತು. ತಾಂಬೂಲಕರಂಡಕವೊಂದರ ಹೊರತು ಇನ್ನಾವ ಭೋಗಸಾಮಗ್ರಿಗಳೂ ಅಲ್ಲಿ ಇದ್ದಂತೆ ಕಾಣುತ್ತಿರಲಿಲ್ಲ. ಹೇಮಾಂಬಿಕೆಯು

ಮೈಮೇಲೆಯೂ ವಿಲಾಸಕಾಲದ ವೇಷ-ಭೂಷಣಗಳಾವುವೂ ಇರಲಿಲ್ಲ. ಮಧ್ಯಾಹ್ನ ಯಾವ ಉಡುಗೆ-ತೊಡಿಗೆಗಳಿದ್ದುವೋ ಅವೇ ಈಗಲೂ ಇದ್ದುವು. ದಾಸಿಯೊಬ್ಬಳು ಒಳಕ್ಕೆ ಬಂದು, 'ಅಮ್ಮಾಜೀ, ಮಹಾರಾಜರು ಬಂದರೆಂದು ಕಾಣುವುದು' ಎಂದು ಮೆಲ್ಲಗೆ ಹೇಳಿ ಹೊರಟುನಡೆದಳು.

ಐದಾರು ನಿಮಿಷಗಳು ಕಳೆಯುವುದರಲ್ಲಿಯೆ ವಿರೂಪಾಕ್ಷರಾಯನು, ಹೇಮಾಂಬಿಕೆಯು ಕುಳಿತಿದ್ದಲ್ಲಿ ಒಳಕ್ಕೆ ಪ್ರವೇಶಿಸಿದ. ಕುಳಿತಿದ್ದಲ್ಲಿಯೆ ಹೇಮಾಂಬಿಕೆಯು ಎದ್ದುನಿಂತಳು; ರಾಯನು ವಿಲಾಸಭಾವದ ಸಲುಗೆಯ ದನಿಯಲ್ಲಿ ಕೇಳಿದನು:

"ನಿನ್ನ ನಿಯಮದ ಸಪ್ತಾಹ, ಇಂದಿಗೆ ಸಮಾಪ್ತಿಯಾಯಿತಲ್ಲವೇ ಹೇಮಾ?"

"ಸಮಾಪ್ತಿ ಆಯಿತು....ಇಲ್ಲ....ಎರಡೂ! ನನ್ನ ನಿಯಮ ಇಂದಿಗೆ ಮುಗಿದಿದ್ದರೂ ಇನ್ನೂ ಕೆಲವು ಕಾಲದ ವರೆಗೆ ಮುಂದುವರಿಸ ಬೇಕಾಗಿದೆ ಅದನ್ನು!"

"ವಿಜಯನಗರದ ಸಮ್ರಾಟನ ರಾಣಿಯಾದ ಮೇಲೆ ಇನ್ನೂ ಈ ಹಾಳು ನಿಯಮ-ನೋಂಪಿಗಳನ್ನು ಇಟ್ಟುಕೊಳ್ಳುವುದೇ?"

"ರಾಣಿಯಾದ ಮೇಲೆಯೆ ಇವೆಲ್ಲವನ್ನು ಇಟ್ಟುಕೊಂಡಿರ ಬೇಕಾಗಿದೆ; ಅದಕ್ಕೆ ಮೊದಲು ನನಗೆ ಯಾವ ನಿಯಮ-ನೋಂಪಿಗಳೂ ಇರಲಿಲ್ಲ."

"ಅದೇನು? ಈ ನಿಯಮ-ನೋಂಪಿಗಳಿಂದ ನಿನಗೇನಾಗಬೇಕಾಗಿದೆ ಇನ್ನು?"

"ನನ್ನದೇನೂ ಆಗಬೇಕಾದುದಿಲ್ಲ; ಸಾಮ್ರಾಜ್ಯಕ್ಕೆ ಕ್ಷೇಮ-ವಾಗಬೇಕೆಂದು ಇದೆಲ್ಲಾ!"

"ಸಾಮ್ರಾಜ್ಯದ ಕ್ಷೇಮಕ್ಕೆ ಈಗೇನು ಕೊರತೆ ಬಂದಿದೆ?"

ಕೊಂಚ ಬಿರುನೋಟದ ಬಿರುದನಿಯೊಂದಿಗೆ ಹೇಮಾಂಬಿಕೆ ಮೊಗವೆತ್ತಿ ಮಾತನಾಡಿದಳು:

"ಏನು ಕೊರತೆ ಬಂದಿದೆಯೆ? ಮಹಾರಾಜರಿಗೆ ಅದರದಿನ್ನೂ

ತಿಳಿವಳಿಕೆಯಾಗಿಲ್ಲವೇನೊ ! ಆ ಕೊರತೆ ತಮಗೆ ಚೆನ್ನಾಗಿ ಕಂಡುಬರುವ ವರೆಗೆ ನನ್ನ ವ್ರತ-ನಿಯಮಗಳು ನಡೆಯಬೇಕು ! "

" ಏನು ? ಈ ವೀರವಿರೂಪಾಕ್ಷನ ಆಡಳಿತದಲ್ಲಿ ಸಾಮ್ರಾಜ್ಯದ ಕ್ಷೇಮಕ್ಕೆ ಕೊರತೆಯೆ ? "

" ವಿಧಿಯದೊಂದು ವಿಚಿತ್ರದ ಆಟ ! ಲೋಕದಲ್ಲಿ ತಮ್ಮ ಬೆನ್ನು ತಮಗೆ ಕಾಣದಂತೆ ಮಾಡಿದ್ದಾನೆ. ಅದರ ವಾಸ್ತವರೂಪು ತಿಳಿಯಲು ಕನ್ನಡಿಯ ಸಹಾಯಬೇಕು ; ಇಲ್ಲದಿದ್ದರೆ ಇನ್ನೊಬ್ಬರ ಕಣ್ಣಿನ ನೆರವು ಬೇಕು. . . . ಮಹಾರಾಜ ! "

" ಹೇಳು, ನೀನೆ ಹೇಳು ಹೇಮಾ ! ಸಾಮ್ರಾಜ್ಯದ ಕ್ಷೇಮಕ್ಕೆ ಯಾವುದು ಕೊರತೆಯೆಂದು ನಿನಗೆ ಕಂಡಿತು ? "

ಹೇಮಾಂಬಿಕೆಯು ಧೈರ್ಯದಿಂದ ಉತ್ತರಕೊಟ್ಟಳು :

" ಮೊದಲನೆಯ ಕೊರತೆ ತಾವು ವಿಜಯನಗರದ ಸಿಂಹಾಸನದ ಮೇಲೆ ಕುಳಿತುದು. ಮಿಕ್ಕ ಕೊರತೆಗಳೆಲ್ಲವೂ ಇದೊಂದನ್ನೆ ಅವಲಂಬಿಸಿ ಕೊಂಡು ನಿಂತಿವೆ ! "

" ಏನು ಹೇಳುತ್ತಿದ್ದೀಯೆ ? ಇನ್ನೊಂದು ಸಲ ಹೇಳು ನೋಡು ತ್ತೇನೆ. "

" ಒಂದೆ ಸಲವೇಕೆ ಮಹಾರಾಜ ! ಕ್ಷಣ-ಕ್ಷಣಕ್ಕೆ, ನಿಮಿಷ-ನಿಮಿಷಕ್ಕೆ ಇದನ್ನು ಹೇಳಿ, ತಮಗೆ ಎಚ್ಚರಿಕೆ ಕೊಡಲಿಕ್ಕೆಂದೇ ನಾನು ಈ ಅಂತಃಪುರದೊಳಕ್ಕೆ ಕಾಲಿಟ್ಟಿದ್ದೇನೆ. ನಿಜವಾಗಿಯೂ ಸಾಮ್ರಾಜ್ಯದ ದೊಡ್ಡ—ದೊಡ್ಡ ಕೊರತೆಯೆಂದರೆ ತಾವು ಸಿಂಹಾಸನದ ಮೇಲೆ ಕುಳಿತು ಕೊಂಡದ್ದು ! "

"ಹೇಮಾ ! ನಿನ್ನ ತಂದೆಯನ್ನು ದಂಡನಾಯಕನ ಪದವಿಗೆ ತಂದಿದ್ದೇನೆ. ಯಾವನಾದರೂ ಸಾಮಾನ್ಯನೊಬ್ಬನ ಮನೆಯನ್ನು ಸೇರಬಹುದಾಗಿದ್ದ ನಿನ್ನನ್ನು ಸಮ್ರಾಜ್ಞಿಯನ್ನಾಗಿ ಮಾಡಿದ್ದೇನೆ. ಗೊತ್ತಾಯಿತೆ?"

"ಇದೆಲ್ಲವೂ ಆ ಕೊರತೆಗೆ ಸಾಕ್ಷಿಯಾಗಿರುವುದು ! "

"ನೋಡು, ನೋಡು; ಮೊದಲೇ ಎಚ್ಚರಿಕೆ ಕೊಡುತ್ತೇನೆ.

ಮಾತನಾಡಬೇಕಾದುದನ್ನು ಹಿಂದೆ-ಮುಂದೆ ನೋಡಿ....ವಿಚಾರಿಸಿ ಮಾತನಾಡು!"

"ಮಹಾರಾಜರ ಮುನ್ನೆಚ್ಚರಿಕೆಗಾಗಿ ನಾನು ತುಂಬ ಉಪಕೃತಳು. ಆದರೆ....ನಾನು ಮಾತನಾಡುತಿರುವುದನ್ನೆಲ್ಲ ವಿಚಾರಪೂರ್ವಕವಾಗಿಯೆ ಆಡುತ್ತಿದ್ದೇನೆ."

ವಿರೂಪಾಕ್ಷರಾಯನು ಅರೆನಿಮಿಷ ಮಂಕುವಟ್ಟು ನಿಂತು, ಬಳಿಕ ಸಿಡಿಲಿನ ನುಡಿ ನುಡಿದನು :

"ಹೇಮಾ! ಒಮ್ಮೆಲೆ ಮಹಾರಾಣಿಯ ಪದವಿ ಬಂದ ಹೆಮ್ಮೆಯಿಂದ ನಿನಗೆ ಹುಚ್ಚು-ಗಿಚ್ಚು ಹಿಡಿದಿಲ್ಲವಷ್ಟೇ?"

"ಮಹಾರಾಜರಾದ ಮೇಲೆ ತಮಗೆ ಬಡಿದುಕೊಂಡಿದ್ದ ಹಿರಿಯ ಹುಚ್ಚನ್ನು ಕಣ್ಣಾರೆ ನೋಡಿದೆನು; ಅದನ್ನು ಬಿಡಿಸಬೇಕೆಂಬ ಇಚ್ಛೆಯಿಂದಲೆ ಮಹಾರಾಣಿಯಾಗಲು ಒಪ್ಪಿ, ತಮ್ಮ ಕೈ ಹಿಡಿಯುವ ಧೈರ್ಯ ಮಾಡಿದೆನು. ನನಗೇನೂ ಹುಚ್ಚು-ಗಿಚ್ಚು ಹಿಡಿದಂತೆ ಕಾಣೆ!"

"ನಿನ್ನ ರೀತಿಯನ್ನು ನೋಡಿದರೆ, ನನ್ನ ರಾಣಿಯಾಗುವುದು ನಿನಗೆ ಬೇಡವಾಗಿದ್ದಿತೆಂದು ಕಾಣುವುದು!"

"ಬೇಡವಾಗಿದ್ದಿತಾದರೂ ಬೇಕಾಗಿಯೆ ಮಾಡಿಕೊಂಡಿದ್ದೇನೆ!"

ಜಿಜ್ಞಾಸೆಯ ಭಾವದ ಹಣ್ಣುದನಿಯಲ್ಲಿ ರಾಯನು ಕೇಳಿದ :

"ಅದೇತಕ್ಕೆ ಬೇಕಾಗಿ ಮಾಡಿಕೊಂಡೆ?"

"ನನ್ನಲ್ಲಿ ತಮ್ಮದು ನಿಜವಾದ ಪ್ರೀತಿಯಿದ್ದರೆ-ವಿಶ್ವಾಸವಿದ್ದರೆ, ನನ್ನ ಮಾತನ್ನು ಕೇಳಿ ತಾವು ಸಿಂಹಾಸನದಿಂದಿಳಿದು, ಇನ್ನಾರಿಗಾದರೂ ಯೋಗ್ಯರಾದವರಿಗೆ ಅದನ್ನು ಒಪ್ಪಿಸಿಕೊಡಬೇಕೆಂದು!"

"ನಾನು ಅಯೋಗ್ಯನೇ..?"

"ಹಾಗೆಂದು ಬಾಯಿಂದ ಹೇಳಿದಾಗಲೆ ಸರಿಯೆ? ರಾಜ್ಯದಲ್ಲಿಯ ಅನಧಿಕಾರಿಯಾದ ಅಧಿಕಾರಿಗಳ ವರ್ಗವೆ ತಮ್ಮ ಯೋಗ್ಯತೆಯನ್ನು ತಿಳುಹಿಸುತ್ತಿಲ್ಲವೆ? ನಾಡಿನ ಪ್ರಜೆಗಳ ಗೋಳಿನ ಬಾಳು ತಮ್ಮ ಯೋಗ್ಯತೆಯನ್ನು ತೋರಿಸಿಕೊಡುತ್ತಿಲ್ಲವೆ? ಕಳೆದು ಹೋಗಿದ್ದ ಸಾಮ್ರಾಜ್ಯದ ಪ್ರದೇಶಗಳು ತಮ್ಮ ಯೋಗ್ಯತೆಯ ಪ್ರದರ್ಶನವನ್ನು ಮಾಡುತ್ತಿಲ್ಲವೆ?

ಮೊನ್ನೆಯ ತುಂಬಿದ ಸಭೆಯಲ್ಲಿ ರಾಜಶೇಖರನೂ ನರಸಿಂಹಮಂತ್ರಿಯೂ ತಮ್ಮ ಯೋಗ್ಯತೆಯನ್ನು ಬೆರಳುಮಾಡಿ ತೋರಿಸಲಿಲ್ಲವೇ ? ''

" ಹಾಂ! ಹಾಂ! ಹೇಮಾ, ಬಾಯಿ ಬಿಗಿಹಿಡಿ! ಹೆಣ್ಣೆಂದು ಇದು-ವರೆಗೆ ಸುಮ್ಮಗಿದ್ದುಕೊಂಡು ಬಂದರೆ, ನಿನ್ನ ನಾಲಗೆ ಹಾಗೆಯೆ ಮುಂದು ವರಿಯಲಿಕ್ಕೆ ಪ್ರಾರಂಭಿಸಿ ಬಿಟ್ಟಿದೆ. ನೋಡು, ಪರಿಣಾಮ ತಿಳಿದುಕೊಳ್ಳು!''

" ಈ ಕಿಚ್ಚಿನಲ್ಲಿ ಕಾಲಿಕ್ಕುವಾಗಲೆ ನನ್ನ ಬದುಕಿನ ಪರಿಣಾಮವನ್ನು ನಾನೇ ನನ್ನ ಕೈಯಿಂದಲೇ ಬರೆದಿಟ್ಟುಬಿಟ್ಟಿದ್ದೇನೆ. ''

" ಹೇಮಾ, ಹೆಣ್ಣಿನ ಬದುಕು ಹೂವಿನಂತಹದು; ಆದರಲ್ಲಿಯೂ ನೀನು ನನ್ನಂತಹ ವೈಭವಶಾಲಿಯಾದ ವಿಲಾಸಿಯ ಕೈಯನ್ನು ಹಿಡಿ-ದಿದ್ದೀಯೆ! ಅವಿವೇಕದಿಂದ ಹೂವನ್ನು ಹುಡಿಗೂಡಿಸಿ ಬಿಡಬೇಡ! ''

" ಮಹಾರಾಜ, ಹೂವುಗಳ ಬಾಳಿನ ಗುಟ್ಟನ್ನು ನಾನೂ ಚೆನ್ನಾಗಿ ಬಲ್ಲೆ. ಅದೃಷ್ಟಶಾಲಿಗಳಾದ ಕೆಲವು ದೇವದೇವನ ಮುಡಿಯ ಮೇಲೆ ಕುಳಿತು ನಗುತ್ತಿದ್ದರೆ, ಇನ್ನು ಕೆಲವು ಸುಡುಗಾಡಿಗೆ ನಡೆದ ಪ್ರೇತಗಳ ಕೊರಳಿಗೆ ಸಿಂಗಾರವಾಗಿ, ಮಸಣದ ಬೆಂಕಿಯ ಬಾಯಿಗೆ ಬಿದ್ದು, ಬೆಂದು ಬೂದಿಯಾಗಬೇಕಾಗುತ್ತದೆ. ಅವವುಗಳ ಅದೃಷ್ಟದ ಕೈಯಲ್ಲಿಯ ಮಾತದು! ''

" ನಿನ್ನ ಅದೃಷ್ಟಕ್ಕೆ ಏನಾಗಿದೆಯೀಗ ? ''

" ಏನೂ ಆಗಿಲ್ಲ ; ತಾವು ಒಳ್ಳೆಯವರಾದರೆ ನನ್ನ ಅದೃಷ್ಟಕ್ಕೆ ಸಮಾನವಾದುದು ಇನ್ನಾವುದೂ ಇಲ್ಲ! ''

" ನಾನು ಒಳ್ಳೆಯವನಾಗುವುದೆಂದರೆ ಏನು ಮಾಡಬೇಕು ? ''

" ಮಲ್ಲಿಕಾರ್ಜುನ ದೊರೆಗಳ ಗುಣವನ್ನು ನಾಡಿನ ಜನರು ಇದು-ವರೆಗೂ ಹಾಡಿ ಹೊಗಳುತ್ತಿರುವರಲ್ಲ! ಅವರ ಮಗ ರಾಜಶೇಖರನು ಸಿಂಹಾಸನದ ಮೇಲೆ ಕುಳಿತಿರದಿದ್ದರೂ ಪ್ರತಿಯೊಬ್ಬರ ಬಾಯಲ್ಲಿ ಇರುತ್ತಾನಲ್ಲ! ನರಸಿಂಹದಂಡನಾಯಕರನ್ನು ತಾವು ಅಧಿಕಾರದಿಂದ ತೆಗೆ ದಿದ್ದರೂ ಸಾಮ್ರಾಜ್ಯಾಭಿಮಾನಿಗಳಾದವರೆಲ್ಲರೂ ಅವರನ್ನು ಎಷ್ಟೊಂದು ಗೌರವದಿಂದ ಕಾಣುತ್ತಾರಲ್ಲ! ಅದೇಕೆ, ಹೇಳಬಹುದೇ ತಾವು ? ''

ತಲೆತಿರುಗಿದವನಾಗಿ ವಿರೂಪಾಕ್ಷರಾಯನು ರೇಗಿ ನುಡಿದನು:

" ಜನರಿಗೆ ಬುದ್ಧಿಯಿಲ್ಲ; ನೀನಂತೂ ಹೇಳಿಕೇಳಿ ಹೆಣ್ಣು ಹೆಂಗುಸು! ಆ ರಾಜದ್ರೋಹಿ ನರಸಿಂಹನೂ ಅವನನ್ನು ಬೆನ್ನುಕಟ್ಟಿನಿಂತ ರಾಜಶೇಖರನೂ ಒಳ್ಳೆಯವರೆಂದು ಯಾರು ಹೇಳುತ್ತಾರೆ? ಅವರ ಹೆಸರನ್ನು ಹೇಳು; ಈಗಲೆ ಅವರನ್ನು ಚೆಂಡಾಡಿ ಬಿಡುತ್ತೇನೆ."

" ಅಂತಹ ಪ್ರಳಯಾಂತಕಶಕ್ತಿ ತಮ್ಮಲ್ಲಿದೆಯೆಂಬುದನ್ನು ನಾನು ಬಲ್ಲೆ; ಆದರೆ ಅದು ಜನರನ್ನು ಚೆಂಡಾಡಲಿಕ್ಕೆ ಉಪಯೋಗವಾಗದೆ, ವೈರಿಗಳ ಬಾಯಿಂದ ಗೆದ್ದುಕೊಂಡ ರಾಜ್ಯವನ್ನು—ಕಕ್ಕಿಸುವುದಕ್ಕೆ ಆಗಲಿ! ರಾಜಶೇಖರ-ನರಸಿಂಹನಾಯಕರು ಒಳ್ಳೆಯವರೆಂದು ಲೋಕವೆಲ್ಲವೂ ಹೇಳುತ್ತದೆ, ಅದರೊಂದಿಗೆ ನಾನೂ ದನಿಗೂಡಿಸುತ್ತೇನೆ. ಇಷ್ಟೇ ಅಲ್ಲ, ವಿಜಯನಗರದ ಸಿಂಹಾಸನವನ್ನು ಏರುವುದಕ್ಕೆ ರಾಜಶೇಖರನೇ ಯೋಗ್ಯನೆಂದೂ ಆತನಿಗೆ ತಾವು ಸಾಮ್ರಾಜ್ಯವನ್ನು ಒಪ್ಪಿಸಿಕೊಟ್ಟು ಸುಖದಿಂದ ಬದುಕಬೇಕೆಂದೂ ಈಗಲೆ ಹೇಳಿಬಿಡುತ್ತೇನೆ!"

ವಿರೂಪಾಕ್ಷರಾಯನ ಕೋಪವು ಎಲ್ಲೆಮೀರಿತು. ಹೆಡೆತುಳಿದ ಹಾವಿನಂತೆ ಫೂತ್‌ಕರಿಸಿದನು:

" ಓಹೋ! ನೀನೂ ಆ ದೊಂಬೆಗಾರರ ಗುಂಪಿಗೆ ಸೇರಿದವಳೇನು? ಮಹಾರಾಣೀ,! ಭೋಗಿಸುವೆಯಂತಿನ್ನು ಮಹಾರಾಣಿಯ ಐಶ್ವರ್ಯವನ್ನು!"

" ಅದರ ಆಶೆ ನನಗಿದ್ದರಲ್ಲವೇ ತಮ್ಮ ಬೆದರಿಕೆಗೆ ನಾನು ಸೊಪ್ಪು-ಹಾಕಬೇಕು?"

ವಿರೂಪಾಕ್ಷರಾಯನು ರೋಷದ ಧ್ವನಿಯಲ್ಲಿ ಕೂಗಿದನು:

" ರುದ್ರಮ್ಮಾ, ರುದ್ರಮ್ಮಾ!"

ರುದ್ರಮ್ಮನು ರಾಣಿವಾಸದ ಕಾವಲುಗಾರರಲ್ಲಿ ಹಿರಿಯಳು. ಮಹಾರಾಜರು ಅಂತಃಪುರಕ್ಕೆ ಬಂದಿರುವಾಗ, ಅವರ ಕೂಗು ಕೇಳುವಷ್ಟು ಸಮೀಪದಲ್ಲಿಯೆ ರುದ್ರಮ್ಮನು ಇರಬೇಕೆಂಬುದು ನಿಯಮ. ಮುಗಿದ ಕೈಯೊಂದಿಗೆ ಆಕೆ ಓಡಿಬಂದು ಕೇಳಿದಳು:

" ಅಪ್ಪಣೆಯೇನು ಮಹಾಪ್ರಭು!"

ಗುಡುಗಿನ ಅಬ್ಬರದ ದನಿಯಲ್ಲಿ ರಾಯನು ಅಪ್ಪಣೆಯಿತ್ತನು:

"ಈ ಹೊಸ ಮಹಾರಾಣಿಯವರನ್ನು ಆಚೆಯ ಕಡೆಯ ಕಿರುಮನೆಯಲ್ಲಿ ಕರೆದುಕೊಂಡು ಹೋಗು! ಇಂದು ಮೊದಲುಮಾಡಿ ಅಲ್ಲಿಯೆ ಇವರಿಗೆ ವಸತಿಯಾಗಬೇಕು! ಊಟ ಉಡಿಗೆ ಎಲ್ಲವೂ ಅಲ್ಲಿಯೆ ನಡೆಯುತ್ತಿರಬೇಕು! ಹೊರಕ್ಕೆಲ್ಲಿಯೂ ಬಿಡಲಾಗದು; ಇದಕ್ಕೆ ತಪ್ಪಿದುದು ತಿಳಿದರೆ ನೀನೂ ಘೋರಶಿಕ್ಷೆಯನ್ನು ಅನುಭವಿಸಬೇಕಾದೀತು ನೋಡು!"

ಇಷ್ಟು ಹೇಳಿದವನೆ ವಿರೂಪಾಕ್ಷರಾಯನು ಬಿರುಗಾಳಿಯಂತೆ ನಡೆದುಬಿಟ್ಟನು. ರುದ್ರಮ್ಮನು ಆಶ್ಚರ್ಯ-ಭೀತಿಗಳಿಂದ ರಾಯನು ಹೋಗುವುದನ್ನು ನೋಡುತ್ತಿದ್ದಳು. ಮುಸುಗುಟ್ಟುತ್ತಿರುವ ಉಸಿರುಗಳಿಂದ– ಕಮ್ಮೊಗದವಳಾಗಿ– ಹೇಮಾಂಬಿಕೆಯು, ನಿಂತಲ್ಲಿಯೆ ಕದಲದೆ ನಿಂತುಕೊಂಡಿದ್ದಳು. ಜುಗುಪ್ಸಾಭಾವವು ಆಕೆಯ ಅಂಗಾಂಗಗಳಲ್ಲಿಯೂ ತುಂಬಿ ತುಳುಕುತ್ತಿದ್ದಿತು.

---

## ೧೨ನೆಯ ಪರಿಚ್ಛೇದ

ಮಾಲ್ಯವಂತ ಪರ್ವತದ ಮೂಡಲ ಓವರಿಯಲ್ಲಿ ನಿಸರ್ಗನಿರ್ಮಿತವಾದುದೊಂದು ಗುಹೆಯಿದೆ. ಗುಹೆಯ ಎದುರಿನ ಬಯಲಲ್ಲಿ ತುಂಗ-ಭದ್ರೆಯ ತುಂಬುಗಾಲುವೆಗಳು ಹರಿದು, ತೋಟಗಾರರಿಗೆ ಅನುಕೂಲತೆಯನ್ನುಂಟುಮಾಡಿಕೊಟ್ಟಿವೆ. ಬಯಲೆಲ್ಲವೂ ಬಾಳೆ, ತೆಂಗು, ಕಬ್ಬು, ಎಲೆಯ ಬಳ್ಳಿ ಮೊದಲಾದ ಹಿರಿದೋಟಗಳಿಂದಲೂ ಗುಲಾಬಿ, ಮಲ್ಲಿಗೆ, ಸೇವಂತಿಗೆ, ದವನ, ಮರುಗ ಮೊದಲಾದ ಕಮ್ಮಲರು– ಕಂಪಿನೆಲೆಯ ಗಿಡಬಳ್ಳಿಗಳ ಕಿರುದೋಟಗಳಿಂದಲೂ ತುಂಬಿರುವುದು. ತೋಟಗಾರರು ತಮ್ಮ ತಮ್ಮ ತೋಟಗಳಲ್ಲಿಯೆ ಮನೆಮಾಡಿಕೊಂಡೋ ಗುಡಿಸಿಲು ಕಟ್ಟಿಕೊಂಡೋ ವಸತಿಮಾಡಿಕೊಂಡಿರುವರು. ಬಯಲಿಗಿಂತ ಹೆಚ್ಚು ಎತ್ತರದ ಮೇಲಿರುವ ಗುಹೆಯ ಬಳಿಯಲ್ಲಿ ನಿಂತು ನೋಡಿದರೆ, ತೋಟಗಳ ಸಸ್ಯಶ್ರೀಸೌಂದರ್ಯವು ನಯನಮನೋಹರವಾಗಿರುವುದು. ಅಲ್ಲಲ್ಲಿ ಬೆಳೆಗಳಿಗೆ ನೀರುಣ್ಣಿಸುತ್ತ ಹಾಡುತ್ತಿರುವ ತೋಟಗಾರರ ಸ್ವಾಭಾವಿಕ-

ಸಂಗೀತವು ಕರ್ಣರಸಾಯನವಾಗಿರುವುದು. ಏಕಾಂತವೆ ಬೇಕೆನಿಸಿದರೆ ಗುಹೆಯೊಳಕ್ಕೆ ಹೋಗಿ ಕುಳಿತರಾಯಿತು, ಇದರ ಹೊರತು ಮತ್ತೆ ಜಗತ್ತಿನ ಭಾಗವೇನಾದರೂ ಇದೆಯೆ ?. . ಎಂದೆನಿಸುವುದು.

ತನಗೆ ಬೇಕೆನಿಸಿದಾಗ ರಾಜಶೇಖರನು ಈ ಗುಹೆಯಿದ್ದ ಸ್ಥಳಕ್ಕೆ ಬಂದು ಕುಳಿತುಕೊಳ್ಳುವನು. ಈ ಹೊತ್ತು ಬೆಳಗಿನಲ್ಲಿ ತಾನೊಬ್ಬನೆ ಬಾರದೆ ಜೊತೆಗೆ ದಿಲಾವರ್‌ಖಾನನನ್ನು ಕರೆದುಕೊಂಡು ಬಂದಿದ್ದನು. ಇಬ್ಬರೂ ಒಂದು ಅರೆಗಳಿಗೆಯ ವರೆಗೆ ಗುಹೆಯ ಮುಂಗಡೆಯ ದಿನ್ನೆಯ ಮೇಲೆ ನಿಂತು, ಬಯಲ ಬನಸಿರಿಯ ಬೆಡಗನ್ನು ನೋಡಿದರು; ಬಳಿಕ ಗುಹೆಯೊಳಕ್ಕೆ ಬಂದು, ನೆಲಗಟ್ಟೆನಿಸಿದ ಹಾಸರೆಯ ಮೇಲೆ ಎದುರೆದುರಾಗಿ ಕುಳಿತುಕೊಂಡರು. ರಾಜಶೇಖರನು ಕೇಳಿದ :

" ನಾಸೀರ್‌ಖಾನನಿಗೆ ತಮಗೆ ಮೊದಲಿನಿಂದಲೂ ಪರಿಚಯವೇನು ? "

" ಅಹುದು ! ನನ್ನನ್ನು ಸಾಕಿಕೊಂಡಿದ್ದ ಕುತುಬ್‌ಹಸನ್ ಖಾನರೂ ಅವರೂ ತುಂಬ ಸ್ನೇಹಿತರು. ಎಂತಲೆ ಮೊದಲಿನಿಂದಲೂ ಅವರ ಪರಿಚಯ ನನಗೆ ! "

" ಅದೇನು ? ತಮ್ಮನ್ನು ಸಾಕಿಕೊಂಡಿದ್ದವರೆಂದು ಹೇಳಿದಿರಲ್ಲಾ! ತಂದೆ-ತಾಯಿಗಳಿರಲಿಲ್ಲವೇ ತಮಗೆ ? "

" ತಂದೆ-ತಾಯಿಗಳೇ ! ನನ್ನ ದುರದೃಷ್ಟವು ಅವರ ಮುಖವನ್ನು ಕಾಣುವ ಭಾಗ್ಯವನ್ನು ಒದವಿಸಲಿಲ್ಲ. ನಾನು ತೀರ ಚಿಕ್ಕವನಿರುವಾಗಲೆ ನನ್ನ ತಂದೆ ಯಾವುದೋ ಹಿಂದೂ-ಮುಸಲ್ಮಾನ್ ಯುದ್ಧದಲ್ಲಿ, ಕಲಬುರ್ಗೆಯವರ ಪರವಾಗಿ ಕಾದಿ ಮಡಿದುಹೋದರಂತೆ; ತಾಯಿ, ತಂದೆಯ ಶವದೊಂದಿಗೆ ಸತಿಹೋದಳಂತೆ ! "

" ಏನು ? ಸತಿಹೋದರೆ ? ಹಾಗಾದರೆ ನೀವು ಕನ್ನಡಿಗರೇನು ? "

" ನಾನಲ್ಲ; ನನ್ನ ತಂದೆತಾಯಿಗಳೇನೋ ಕನ್ನಡಿಗರಾಗಿದ್ದರಂತೆ. ಕಲಬುರ್ಗೆಯಲ್ಲಿ ಮೊದಲು ಸಿಪಹ್‌ಸಾಲರ್ ಆಗಿದ್ದ ಕುತುಬ ಹಸನ್ ಖಾನರಿಗೆ ನಮ್ಮ ತಂದೆಯ ವಿಷಯದಲ್ಲಿ ತುಂಬ ಪ್ರೀತಿಯಂತೆ. ಅವರು ತಾಯಿ-ತಂದೆಗಳಿಲ್ಲದ ಒಂದೆ ಒಂದು ವರ್ಷದ ಎಳೆಗೂಸಾದ ನನ್ನನ್ನು,

ತಮ್ಮ ಮನೆಯಲ್ಲಿಯೆ ಸಾಕಿ ದೊಡ್ಡವನನ್ನಾಗಿ ಮಾಡಿದರು. ನನಗಾಗಿದ್ದ ಧರ್ಮಸಂಸ್ಕಾರಗಳೆಲ್ಲವೂ ಮಹಮ್ಮದೀಯ ಧರ್ಮಪರಂಪರೆಯವು. ಹೀಗಿರುವಾಗ ನಾನು ಕನ್ನಡಿಗನು ಹೇಗೆ ಆಗುತ್ತೇನೆ?" ಮಾತಿನ ಕೊನೆಯೊಂದಿಗೆ ದಿಲಾವರ್‌ಖಾನನ ಮುಖದಿಂದ ನಿಡಿದಾದ ನುಯಿಲೊಂದು ಹೊರಕ್ಕೆ ಹೊರಟಿತು.

"ನೀವು ಕಲಬುರ್ಗೆಯನ್ನು ಬಿಟ್ಟು ಇಲ್ಲಿಗೆ ಬಂದುದು ಏತಕ್ಕಾಗಿ? ಅಲ್ಲಿಯ ಸುಲ್ತಾನರಲ್ಲಿ ನಿಮಗೆ ಆಶ್ರಯ ದೊರೆತಿರಲಿಲ್ಲವೇನು?"

"ದೊರೆತಿದ್ದಿತು ಅಣ್ಣಾಜಿ; ಬೇಗನೆ ನಾನೊಂದು ನಾಡಿನ ಸುಭೇದಾರನಾಗಬಹುದಾಗಿದ್ದಿತು. ಆದರೆ ನನಗೇತಕ್ಕೊ, ಸುಲ್ತಾನನ ರಾಜ್ಯದಲ್ಲಿರುವುದಕ್ಕೆ ಮನಸ್ಸು ರೋಸಿಕೊಂಡು ಹೋಯಿತು!"

"ಹಾಗಾಗುವುದಕ್ಕೆ ಏನು ಕಾರಣ?"

"ಕಾರಣವೇ? ಅದನ್ನು ಕೇಳಿದರೆ ನೀವು ಏನೆಂದುಕೊಳ್ಳುತ್ತೀರೊ! ನನಗೆ ಮೊದಲಿನಿಂದಲೂ ಜಾತಿ-ಮತಗಳ ಕಲಹವೆಂದರೆ ತಲೆಬೇಸರು. ನನಗೆ ತಿಳಿಯಲು ತೊಡಗಿದಾಗಿನಿಂದಲೂ, ಆಡಳಿತದಲ್ಲಿಯ ಜಾತಿಭೇದದಿಂದಾಗುವ ಅನ್ಯಾಯ-ಹಿಂಸೆಗಳು ನನ್ನ ಎದೆಯನ್ನು ಅಳುಕಿಸುತ್ತಿದ್ದುವು. ಹಿಂದುಗಳು ಮಹಮ್ಮದೀಯರು ಎಂಬ ಮುಖ್ಯಭೇದ ಒಂದು ಕಡೆಗೆ ಇರಲಿ; ಈ ದೇಶದ ಜನರು ಮಹಮ್ಮದೀಯರಾಗಿದ್ದರೂ ಅವರಿಗೆ, ವಿದೇಶೀಯರಾದ ಮಹಮ್ಮದೀಯರಿಗಿರುವ ಸಾಮಾಜಿಕ, ಧಾರ್ಮಿಕ ಹಕ್ಕು-ಬಾಧ್ಯತೆಗಳಲ್ಲಿಯ ನೂರರಲ್ಲೊಂದು ಪಾಲು ಕೂಡ ಇಲ್ಲ. ಈ ದೇಶದ ಮಹಮ್ಮದೀಯರು ಮೂಲಮಹಮ್ಮದೀಯರ ದೃಷ್ಟಿಯಲ್ಲಿ ತೀರ ಕೀಳುತರಗತಿಯವರು. ಧಾರ್ಮಿಕಕಾರ್ಯಗಳಲ್ಲಿ ಎಲ್ಲರಿಗೂ ಸಮಾನವಾದ ಸ್ಥಾನ-ಮಾನಗಳು ದೊರೆಯವು. ಈ ಪಙ್ತಿ-ಪ್ರಪಂಚ ನನ್ನ ಮನಸ್ಸಿಗೆ ಹುರುಕುಹಚ್ಚಿತು. ಹಿಂದೂ ಜನರ ವಿಷಯದಲ್ಲಿ ನಡೆಯುತ್ತಿರುವ ಅನ್ಯಾಯಗಳನ್ನು ನೋಡಿಯಂತೂ ಅಸಹನೀಯ ಸಂತಾಪವೆನಿಸಿತು. ಒಂದು ದೇಶದ ದೊರೆಯೆಂದಮೇಲೆ, ಆ ದೇಶದಲ್ಲಿರುವ ಎಲ್ಲ ಮತ-ಪಂಥದವರನ್ನೂ ಎಲ್ಲ ಜಾತಿ-ಜನಾಂಗದವರನ್ನೂ ನಿಷ್ಪಕ್ಷಪಾತಬುದ್ಧಿಯಿಂದ—ಸಹಾನುಭೂತಿಯ ದೃಷ್ಟಿಯಿಂದ—ಕಾಣದಿದ್ದರೆ ಅದು

ತೀರ ಅನ್ಯಾಯವೆಂದು ಕ್ಷಣಕ್ಷಣಕ್ಕೆ ನನಗೆ ಎನಿಸಲುತೊಡಗಿತು. ನನ್ನೊಬ್ಬನ ಈ ಮಿಡುಕಾಟದಿಂದ ಏನು ಪ್ರಯೋಜನವಾಗಬೇಕು ? ಸುಮ್ಮನೆ ಕರುಳನ್ನು ಬೇಯಿಸಿಕೊಳ್ಳುತ್ತ ಅಲ್ಲಿ ಇರುವುದರಲ್ಲಿ ಅರ್ಥವಾದರೂ ಏನಿದೆಯೆಂದು ಯೋಚಿಸಿದೆ. ಅಷ್ಟರಲ್ಲಿಯೆ ನನ್ನ ಸಾಕು-ತಂದೆ ತೀರಿಹೋದುದರಿಂದ, ಹೇಳುಕೇಳುವುದಕ್ಕೆ ಹಿಂದೆ ಮುಂದೆಯೂ ಯಾರೂ ಇರಲಿಲ್ಲ. ಅದೇನೋ, ಮೊದಲಿನಿಂದಲೂ ಕನ್ನಡಜನರೆಂದರೆ ನನಗೆ ಒಂದುಬಗೆಯ ವಿಶ್ವಾಸ; ಮರುಕ. ಅವರ ಧರ್ಮದ ವಿಷಯವನ್ನು ತಿಳಿದುಕೊಳ್ಳಬೇಕೆಂದು ತುಂಬ ಆಸಕ್ತಿ. ಇನ್ನೊಂದು ವಿಷಯ: ನನ್ನ ಭಾಷೆ ಕನ್ನಡದಿಂದ ತೀರ ಭಿನ್ನವಾದುದಾದರೂ, ಎಲ್ಲಿಯಾದರೂ ಕನ್ನಡಭಾಷೆ ಕಿವಿಗೆ ಬಿದ್ದರೆ, ನನ್ನ ದಿಲ್‌ರುಬಾ ನುಡಿದಂತೆ ಕಿವಿಗೆ ಸವಿಯಾಗಿರುವುದು; ಹಿಗ್ಗಿದ ಹೃದಯವು ಮತ್ತೆ ಮತ್ತೆ ಆ ಮಾತುಗಳನ್ನು ಕೇಳಲು ತವಕಪಡುವುದು. ಕನ್ನಡಭಾಷೆಯ ಹಾಡುಗಳನ್ನು ಕೇಳಿದಾಗಲಂತೂ ನನ್ನ ಸರಸರವೂ ಆನಂದದಿಂದ ನರ್ತನಮಾಡಲು ತೊಡಗುವುದು. 'ವಿಜಯನಗರವು ಹಿಂದುಗಳ ರಾಜ್ಯ, ಕನ್ನಡಿಗರ ರಾಜ್ಯ' ಎಂದು ಕೇಳಿದ್ದೆನು. 'ಅಲ್ಲಿಯ ದೊರೆಗಳು ಎಲ್ಲ ಮತ-ಪಂಥಗಳನ್ನೂ ಉದಾರಭಾವದಿಂದ ಕಾಣುವ ತತ್ತ್ವನಿಷ್ಠರು' ಎಂಬುದನ್ನೂ ಕೇಳಿ ಅರಿತಿದ್ದೆನು. ಎಂತಲೆ ಇಲ್ಲಿ ಇದ್ದುಕೊಂಡು, ಹೇಗಾದರೂ ಜೀವನವನ್ನು ಕಳೆಯಬೇಕೆಂದು, ಕಲಬುರ್ಗಿಯನ್ನು ಬಿಟ್ಟು ಇಲ್ಲಿಗೆ ಹೊರಟು ಬಂದೆನು."

ರಾಜಶೇಖರನು ಕೆಲವು ನಿಮಿಷಗಳನ್ನು ಬೆರಗಿನ ಭಾವದಲ್ಲಿ ಕಳೆದು, ಬಳಿಕ ಮಾತನಾಡಿದನು:

"ದಿಲಾವರ್‌ಖಾನ್! ನಿಮ್ಮದು ವಿಚಿತ್ರಚರಿತ್ರ! ವಿಲಕ್ಷಣ ಹೃದಯ! ಇಲ್ಲಿಗೆ ಬಂದವರು ನೀವು ಮೊದಲು ನರಸಿಂಹನಾಯಕರನ್ನೇ ಕಂಡಿರಲ್ಲವೇ ?"

"ಅಹುದು, ಅದಕ್ಕೆ ಕಾರಣವೂ ಇದ್ದಿತು. ಸುಲ್ತಾನರ ದರ್ಬಾರಿನಲ್ಲಿ ಅವರ ಹೆಸರಿನ ಕೊಂಡಾಟ ಬಹಳ! ಕನ್ನಡಸಾಮ್ರಾಜ್ಯದ ಅಭಿಮಾನವು ನರಸಿಂಹನಾಯಕರಲ್ಲಿದ್ದಷ್ಟು ಇನ್ನಾರಲ್ಲಿಯೂ ಇಲ್ಲವೆಂಬುದು,

ಇಲ್ಲಿಂದ ಬರುವ ರಾಜಕೀಯ ವೃತ್ತಾಂತಗಳಿಂದ ನನಗೆ ಮೊದಲೇ ಗೊತ್ತಾಗಿದ್ದಿತು. ''

'' ಸರಿ, ಕಂಡವೇಲೆ ಮುಂದೇನು ನಡೆಯಿತು ? ''

'' ಅವರಿಗೆ ಒಮ್ಮೆಲೆ ನನ್ನಲ್ಲಿ ನಂಬುಗೆ ಹುಟ್ಟಲಿಲ್ಲ ; ಕೆಲವುದಿನ ನನ್ನನ್ನು ಇನ್ನೆಲ್ಲಿಯೂ ಹೋಗದಂತೆ ಏರ್ಪಾಡುಮಾಡಿ, ತಮ್ಮ ಮನೆಯಲ್ಲಿಯೆ ಇರಿಸಿಕೊಂಡರು. ನಾಯಕರು ಮನೆಯಲ್ಲಿ ಇದ್ದಾಗ ಇಬ್ಬರೂ ಕೂಡಿ ಏನೇನನಾದರೂ ಮಾತನಾಡುವೆವು. ಮೊದ-ಮೊದಲು ಅವರು ವಿಜಯನಗರದ ರಾಜಕಾರ್ಯದ ವಿಚಾರದಲ್ಲಿ ನನ್ನೆದುರು ಒಂದು ಮಾತನ್ನೂ ಎತ್ತುತ್ತಿರಲಿಲ್ಲ. ಕಲಬುರ್ಗೆಯ ಆಡಳಿತದ ವಿಚಾರವನ್ನೆ ನನ್ನಿಂದ ಕೇಳಿ ತಿಳಿದುಕೊಳ್ಳುವರು. ಬರುಬರುತ್ತ ರಾಜ್ಯದ ಆಡಳಿತದ ವಿಷಯದಲ್ಲಿದ್ದ ತಮ್ಮ ವಿಚಾರಗಳನ್ನು ನನ್ನೆದುರು ಹೇಳಲಾರಂಭಿಸಿದರು. ಅವರ ಬುದ್ಧಿವೈಭವವನ್ನು ಕಂಡು ನಾನು ತಲೆದೂಗುತ್ತಲಿದ್ದೆ. ಅವರ ಔದಾರ್ಯವನ್ನು ಕಂಡು ಕಂಡು, ನನ್ನ ಹೃದಯವು ತಾನಾಗಿಯೆ ಅವರ ಅಧೀನವಾಯಿತು. ನಾಶೀರ್‌ಮಹಮ್ಮದನು ಕಲಬುರ್ಗೆಯ ಗುಪ್ತವಕೀಲನೆಂಬುದು ನನ್ನಿಂದ ಅವರಿಗೆ ತಿಳಿದ ದಿನದಿಂದ, ನಾಯಕರು ನನ್ನೊಡನೆ ವಿಜಯನಗರದ ಈಗಿನ ರಾಜಕಾರ್ಯದ ಅವ್ಯವಸ್ಥೆಯನ್ನು ಒಂದೊಂದಾಗಿ ಹೇಳಲು ತೊಡಗಿದರು. ಇದನ್ನು ಸರಿಪಡಿಸುವುದರ ಬಗೆಗೆ ನಮ್ಮಿಬ್ಬರಲ್ಲಿ ಚರ್ಚೆಗೆ ಮೊದಲಾಯಿತು. ದೊರೆಗಳ ಬಳಿಯಲ್ಲಿ ನಾಶೀರ್‌ಮಹಮ್ಮದನ ಪ್ರಸ್ಥ ಬಳೆದುದರಿಂದ, ಅವನ ಪ್ರತಿಯೊಂದು ರಹಸ್ಯದ ಆಟಗಳೂ ತಮಗೆ ತಿಳಿಯಬೇಕಾಗಿವೆಯೆಂದು ನಾಯಕರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಆ ಕೆಲಸ ನನಗೆ ಸಾಧ್ಯವಾಗಿ ಕಂಡುದರಿಂದ, ನರಸಿಂಹನಾಯಕರ ಸದುದ್ದೇಶದಲ್ಲಿ ನನಗೆ ಪೂರ್ಣವಾಗಿ ನಂಬುಗೆಯುಂಟಾದುದರಿಂದ, ನಾನು ಆ ಕೆಲಸವನ್ನು ನನ್ನ ಮೈಮೇಲೆ ತೆಗೆದುಕೊಂಡೆ. ''

'' ನಿಮಗೆ ಸಾಧ್ಯವೆಂದು ಕಂಡುಬಂದುದು ಹೇಗೆ ? ''

'' ಕಲಬುರ್ಗೆಯಲ್ಲಿ ಇದ್ದಂದಿನಿಂದಲೂ ನನಗೆ ನಾಶೀರ್‌ಖಾನರ ಪರಿಚಯವೆಂದು ಹೇಳಿದ್ದೇನಲ್ಲವೇ ? ಅವರ ಮನೆಯವರೆಲ್ಲರಿಗೂ

ಆತ್ಮೀಯತೆಯ ಸಲುಗೆ ನನ್ನಲ್ಲಿ ! ಅಲ್ಲಿದ್ದಾಗಲೆ ಖಾನರ ನಡುವಣ ಮಗಳು ರೋಷನಾರಳಿಗೆ ನಾನು ದಿಲ್‌ರುಬಾ ಬಾರಿಸಲಿಕ್ಕೆ ಕಲಿಸುತ್ತಿದ್ದೆ ಕೂಡ. ನರಸಿಂಹನಾಯಕರ ಅಪ್ಪಣೆಯನ್ನು ಪಡೆದು, ನಾನು ಅಂದೆಯೆ ವಿಜಯ-ನಗರಕ್ಕೆ ಬಂದವರಂತೆ ನಾಷೀರ್‌ಖಾನರ ಮನೆಗೆ ಹೋದೆ. ರಾಜ-ಕಾರ್ಯಕ್ಕೆ ತೊಡಗಿದಾಗ ಸುಳ್ಳು-ವಂಚನೆಗಳು ಅನಿವಾರ್ಯವಾಗಿರುವು ವಲ್ಲವೇ! 'ಕೆಲವು ದಿನ ಇಲ್ಲಿ ಇದ್ದು, ಈ ಪ್ರದೇಶವನ್ನು ನೋಡಿಹೋಗ ಬೇಕೆಂದು ಮನಸ್ಸಾದುದರಿಂದ, ಸದ್ಯದ ಮಟ್ಟಿಗೆ ಸ್ವಲ್ಪದಿನ ಬಿಡುವು ಪಡೆದು, ಇಲ್ಲಿಗೆ ಬಂದಿದ್ದೇನೆ' ಎಂದು ಹೇಳಿದೆ. ಖಾನರು ತಮ್ಮ ಮನೆ ಯಲ್ಲಿಯೆ ಇರಬಹುದೆಂದು ಆನಂದದಿಂದ ಒಪ್ಪಿಗೆ ಕೊಟ್ಟರು. ಅವರ ಆನಂದಕ್ಕೆ ಒಂದು ಮುಖ್ಯಕಾರಣವೆಂದರೆ, ರೋಷನಾರಳಿಗೆ—ನಾನಿಲ್ಲಿ ಇರುವ ವರೆಗಾದರೂ—ದಿಲ್‌ರುಬಾದ ಪಾಠ ಕೊಡಿಸಲು ಅನುಕೂಲ ವಾಯಿತಲ್ಲಾ. . . . ಎಂದು. ನಾನು ಮನೆಗೆ ಹೋದ ಒಂದೆರಡು ದಿನ ಗಳಲ್ಲಿಯೆ ಈ ಮಾತನ್ನು ನನ್ನೆದುರು ತೆಗೆದರು. ನನಗೆ ಬೇಕಾದುದೆಲ್ಲವೂ ಕೈಗೂಡಿದಂತಾಯಿತು; ಕೂಡಲೆ ಒಪ್ಪಿಕೊಂಡುಬಿಟ್ಟೆ."

"ನಿಮಗೆ ಬೇಕಾದುದೆಲ್ಲವೂ ಎಂದರೇನು? ನರಸಿಂಹನಾಯಕರ ಕಾರ್ಯದಲ್ಲಿ ನೆರವು ಒಂದೇ ಅಲ್ಲವೇ?"

ದಿಲಾವರ್‌ಖಾನನ ಮುಖವು ನಾಚಿಕೆಯಿಂದ ಕೆಂಬಣ್ಣವನ್ನು ಹೊಂದಿತು.

ರಾಜಶೇಖರನು ಒಂದರೆ ನಿಮಿಷ ಎಲ್ಲಿಯೊ ನೋಡಿದಂತೆ ಮಾಡಿದನು; ನಿಡಿದಾದ ಉಸಿರೊಂದನ್ನು ಹಾಕಿ, ಮೆಲುನಗೆಯೊಂದಿಗೆ ಹೇಳಿದನು :

"ಸರಿ! ದಿಲಾವರಖಾನ್! ನಿಮಗೆ ಮತ್ತೇನು ಬೇಕಾಗಿದ್ದಿ ತೆಂಬುದನ್ನೂ ತಿಳಿದುಕೊಂಡೆನು. ಕಲಬುರ್ಗೆಯಲ್ಲಿರುವುದು ಬೇಡವಾದು ದರ ಅಂತಸ್ಥರಹಸ್ಯವೂ ನನ್ನ ಒಳಗಣ್ಣಿಗೆ ಗೋಚರವಾಯಿತು !"

ದಿಲಾವರ್‌ಖಾನನು ತನ್ನ ಅಪ್ರತಿಭಭಾವವನ್ನು ಬಿಗಿದುಹಿಡಿದು, ಮುಂದೆ ಹೇಳಲು ತೊಡಗಿದನು :

"ಅಂದಿನಿಂದಲೂ ನಾನು ರೋಷನಾರಳ ಸಂಗೀತಶಿಕ್ಷಕನೆಂಬ

ಹೆಸರಿನಿಂದ ಜನರಲ್ಲಿ ಓಡಾಡಲು ತೊಡಗಿದೆನು. ನಾಸೀರಾ ಮುಹಮ್ಮದ ಖಾನರಿಗೆ ತಮ್ಮ ಧರ್ಮದಲ್ಲಿ ಅಂಧವಿಶ್ವಾಸ! ಭಾರತದೇಶವೆಲ್ಲವೂ ತಮ್ಮ ಧರ್ಮದವರ ಆಡಳಿತದಲ್ಲಿ ಬರಬೇಕೆಂದು ಅವರ ಹಗಲಿರುಳಿನ ಯೋಚನೆ. ಅದಕ್ಕಾಗಿ ಎಂತೆಂತಹ ಮೇಲು-ಕೀಳು ಕೆಲಸಗಳನ್ನೂ–ಅನ್ಯಾಯವೆನಿಸಿದರು ಕೂಡ–ಮಾಡಲಿಕ್ಕೆ ಅವರು ಹಿಂದೆ ಮುಂದೆ ನೋಡುವುದಿಲ್ಲ. ಕಾರ್ಯಸಾಧಕನಾಗಿದ್ದ ನನಗೆ, ಅವರ ಅಂತರಂಗದ ಸುದ್ದಿಗಳೆಲ್ಲ ತಿಳಿಯಬೇಕಾದರೆ, ನಾನು ನಾಸೀರ್‌ಖಾನರ ಹೃದಯದ ನಟನೆಯನ್ನೆ ಮಾಡಿಕೊಂಡಿರಬೇಕಾಗಿದೆ. ಎಂತಲೆ ನಾನೊಬ್ಬ ಅವರ ಎರಡನೆಯ ತರಗತಿಯ ಆಪ್ತನೆನಿಸಿಕೊಂಡಿದ್ದೇನೆ. ಖಾನರು ನನಗೆ, ಮುದಗಲ್ಲು ಪ್ರಾಂತ್ಯದ ಆಧಿಪತ್ಯವನ್ನು ಮಹಾರಾಜರಿಂದ ಕೊಡಿಸಿ, ಕಲಬುರ್ಗೆಯವರಿಗೆ ನನ್ನಿಂದ ಅನುಕೂಲತೆ ದೊರೆಯುವಂತೆ ಮಾಡಿ-ಕೊಡಬೇಕೆಂಬ ಪ್ರಯತ್ನ ನಡೆಯಿಸಿದ್ದಾರೆ. ಕೆಲಕೆಲವು ರಹಸ್ಯವಿಚಾರಗಳಲ್ಲಿ ನನ್ನ ಸಲಹೆಗಳನ್ನೂ ಕೇಳುತ್ತಿರುತ್ತಾರೆ. ಇನ್ನು ಕೆಲವು ತೀರ ಒಳಗಿನ ಮಾತುಗಳು ರೋಷನಾರಳ ಮುಖಾಂತರವಾಗಿ ನನಗೆ ಗೊತ್ತಾ-ಗುತ್ತವೆ. ಕಲಬುರ್ಗೆಗೆ ಹೋಗಿದ್ದ ಗುಪ್ತಪತ್ರದ ವಾರ್ತೆಯು ನನಗೆ ಅವಳಿಂದಲೆ ತಿಳಿಯಿತು."

"ತುಂಬ ಮಹತ್ತ್ವದ ವಿಷಯವದು, ದಿಲಾವರ್‌ಖಾನ್! ನರಸಿಂಹ-ನಾಯಕರೂ ನಗರದಲ್ಲಿಲ್ಲ. ಅದಕ್ಕಾಗಿ ನಾವು ತುಂಬ ಎಚ್ಚರದಿಂದ ಇರಬೇಕಾಗಿದೆ."

ಹೊತ್ತು ಒಂದು ಪ್ರಹರಕ್ಕೆ ಸಮೀಪಿಸಿದುದರಿಂದ ಇಬ್ಬರೂ ಗುಹೆಯಿಂದ ಹೊರಕ್ಕೆ ಬಂದು, ದಿಣ್ಣೆಯನ್ನು ಇಳಿದು ಕೆಳಕ್ಕೆ ಬಂದರು. ದಿಲಾವರ್‌ಖಾನನು ರಾಜಶೇಖರನನ್ನು ಅಲ್ಲಿಯೆ ಬಿಟ್ಟು, ಬೇರೆಯೊಂದು ದಾರಿಯಿಂದ ತಾನೊಬ್ಬನೆ ನಾಸೀರ್‌ಖಾನನ ಮನೆಯಿರುವ ಮುಖ್ಯ ಪೇಟೆಯ ಕಡೆಗೆ ಸಾಗಿದನು. ರಾಜಶೇಖರನು ಬೆಟ್ಟದೆದುರಿನ ತೋಟಗಳ ದಾರಿಯಿಂದಲೆ ತನ್ನ ಮಂದಿರದತ್ತ ನಡೆದಿದ್ದನು.

ಆರೇಳು ತೋಟಗಳನ್ನು ದಾಟಿ ನಡೆದಿರಬಹುದು. ಅಷ್ಟರಲ್ಲಿಯೆ ಬಲಗಡೆಯ ಹೂದೋಟವೊಂದರಿಂದ ಅಳುವು, ಕೂಗಾಟ, ಕಿರಿಚಾಟಗಳ

ಸೊಲ್ಲು ರಾಜಶೇಖರನ ಕಿವಿಗೆ ಬಂದು ತಲ್ಪಿತು. ನಿಂತುಕೊಂಡು ಮನ-ಗೊಟ್ಟು ಕೇಳಿದನು. ಹೆಂಗುಸರು ಮಕ್ಕಳು ಅಳುವ ಧ್ವನಿಯು ಕೇಳ ಬಂದಿತು. ಅದೇನಿದೆ ನೋಡಿಬರಬೇಕೆಂದು ರಾಜಶೇಖರನು ಸೊಲ್ಲು ಬರುತ್ತಿರುವ ಕಡೆಗೆ ಅಡಿಯಿಟ್ಟು ನಡೆದನು. ಐವತ್ತು-ಅರುವತ್ತು ಗಜಗಳಷ್ಟು ಅಡ್ಡದಾರಿಯಲ್ಲಿ ಹೋಗಿ, ನಡೆದಿದ್ದ ಅನಾಹುತವನ್ನು ಕಣ್ಣಿಟ್ಟು ನೋಡಿದನು.

ಹೂದೋಟದ ಮಧ್ಯದಲ್ಲಿ ಗುಡಿಸಿಲಿನಂತಹದೊಂದು ಮನೆಯಿದೆ; ಹತ್ತಿಪ್ಪತ್ತು ಜನ ರಾಜದೂತರು ಬಂದು ಆ ಮನೆಗೆ ಮುತ್ತಿಗೆ ಹಾಕಿದ್ದಾರೆ. ಮನೆಯು ಆ ತೋಟದ ಒಡೆಯನಾದ ಹೂವಾಡಿಗನೊಬ್ಬನದು. ರಾಜದೂತರಲ್ಲಿ ಒಬ್ಬಿಬ್ಬರು ಗಡಿಗೆ—ಮಡಕೆ, ಮೊರ—ಮಂಕರಿ, ಅರಿವೆ—ಅಂಚಡಿ ಮೊದಲಾದ ಮನೆಯೊಳಗಿನ ಬದುಕನ್ನು ಹೊರಕ್ಕೆ ತಂದು ಇಕ್ಕರಿಸಲು ತೊಡಗಿದ್ದಾರೆ. ಏಟುತಗುಲಿ ಗಡಿಗೆ-ಮಡಕೆಗಳೆಲ್ಲ ಒಡೆದು ಓಡಾಗಿ ಹೋಗಿವೆ. ಬೇರೆ ಒಬ್ಬಿಬ್ಬರು ಮನೆಯ ಮಾಳಿಗೆಗೆ ಹಾಕಿದ್ದ ಗಳುಗಳನ್ನು ಹಿರಿದು ಹಿರಿದು, ಮುರಿದು ಮುರಿದು ಚೆಲ್ಲುತ್ತಲಿದ್ದಾರೆ. ಇನ್ನು ಕೆಲವರು— ಮಡಿಗಳಲ್ಲಿ ನೀರುಂಡು ನಳನಳಿಸುತ್ತ ನಿಂತಿದ್ದ—ಗಿಡುಬಳ್ಳಿಗಳನ್ನು ಕಿತ್ತು ಕಿತ್ತು, ಕೈಯಿಂದ ಕಾಲಿಂದ ಹೊಸಗಿ ಹಾಕುತ್ತಲಿದ್ದಾರೆ. ಮೂರುನಾಲ್ಕು ಜನರು ಸೇರಿ, ತೋಟದ ಒಡೆಯನನ್ನು ಬೇಕುಬೇಕಾದಂತೆ ಬೈದುಬೈದು ಹೊಡೆಯುತ್ತಲಿದ್ದಾರೆ. ತೋಟ-ಗಾರನ ಮನೆಯ ಹೆಂಗುಸರೂ ಮಕ್ಕಳೂ ಕೂಗಿಕೂಗಿ ಅಳುತ್ತಲಿದ್ದಾರೆ.

ರಾಜಶೇಖರನು ಹಕ್ಕಿಯಂತೆ ಹಾರಿಹೋಗಿ, ಬೈದು ಬಡಿಯುತ್ತ-ಲಿದ್ದ ರಾಜದೂತರ ನಡುವೆ ನಿಂತು, ಅವರನ್ನು ತಡೆದು ಕೇಳಿದನು:

" ಇದೇನು ನಡೆಯಿಸಿದ್ದೀರಿ ಇಲ್ಲಿ ಲಂಕಾಕಾಂಡವನ್ನು ? ನಿಮಗೆ ಹೇಳುವವರು ಕೇಳುವವರು ಯಾರೂ ಇಲ್ಲವೇ ?"

ರಾಜಶೇಖರನ ಧ್ವನಿಯನ್ನು ಕೇಳಿದೊಡನೆಯೆ ರಾಜದೂತರೆಲ್ಲರೂ ತಮ್ಮ ತಮ್ಮ ಕೈಯಲ್ಲಿಯ ಕೆಲಸಗಳನ್ನು ಬಿಟ್ಟು, ಒಂದೆ ಸ್ಥಳದಲ್ಲಿ ಗುಂಪುಗೂಡಿದರು. ಅವರಲ್ಲಿಯವನೊಬ್ಬನು ದರ್ಪದಿಂದ ಹೇಳಿದ:

" ಹೇಳುವವರು ಕೇಳುವವರು ಯಾಕಿಲ್ಲ ಸ್ವಾಮಿ! ರಾಜಾಜ್ಞೆ

ಯಿದೆ ನಮಗೆ! ಇವನು ನೀಚ, ಅಪರಾಧಿಯಿದ್ದಾನೆ. ಮಹಾರಾಜರ ಕಟ್ಟಪ್ಪಣೆಯನ್ನು ಮೀರಿ ನಡೆದಿದ್ದಾನೆ."

"ಮಹಾರಾಜರ ಕಟ್ಟಪ್ಪಣೆ ಏನೆಂದಿದೆ? ಈತನು ಮೀರಿದುದು ಹೇಗೆ?"

"ಹೇಗೆಂದೇನು ಕೇಳುತ್ತೀರಿ ಸ್ವಾಮಿ! ಹೊಸತಾಗಿ ಬಂದಿದ್ದಾರಲ್ಲಾ ಆ ಪಾರಸೀ ದೇಶದ ಸೂಳೆಯರು! ಅವರಿಗಾಗಿ ಮಹಾರಾಜರು ಮಹಲೊಂದನ್ನು ಕಟ್ಟಿಸಿಕೊಡಬೇಕೆಂದು ಇದ್ದಾರಂತೆ. ಆ ಸೂಳೆಯರು ಈ ತೋಟವಿದ್ದ ಸ್ಥಳವನ್ನೆ ಆಯ್ದು, ತಮಗೆ ಇದೇ ಅನುಕೂಲವಾಗಿದೆಯೆಂದು ಹೇಳಿದ್ದಾರಂತೆ. ಈಗ ಎಂಟು ದಿನಗಳಿಂದಲೂ ಇಲ್ಲಿಗೆ ಬಂದು ಬಂದು 'ಇಲ್ಲಿಂದ ಬೇರೆಕಡೆಗೆ ಹೋಗಬೇಕು!' ಎಂಬ ರಾಜಾಜ್ಞೆಯನ್ನು ಈ ನಾಯಿಗೆ ಹೇಳಿ ಹೇಳಿ ಹೋಗುತ್ತಿದ್ದೇವೆ! ಆದರೂ ಈ ಕತ್ತೆಯ ಕರು ರಾಜಾಜ್ಞೆಯ ಎಚ್ಚರವಿಲ್ಲದೆ ಇಲ್ಲಿಯೆ ಬಿದ್ದುಕೊಂಡು ಸಾಯುತ್ತಿದ್ದಾನೆ!"

ತೋಟದ ಒಡೆಯನು ಅಳುತ್ತಳುತ್ತ ತನ್ನ ಕತೆ ಹೇಳಲು ತೊಡಗಿದನು:

"ತಾವು ಯಾರೋ ಏನೋ ನಾನು ಕಾಣೆ ಬುದ್ಧೀ! ಬೆಳಗಿನಲ್ಲಿ ಪಂಪಾಪತಿ ಎದ್ದು ಬಂದಹಾಗೆ ಬಂದಿದ್ದೀರಿ! ತಮ್ಮ ಮುಂದೆ ಇದ್ದ ಮಾತೆಲ್ಲಾ ಹೇಳುತ್ತೇನೆ ಕೇಳಿ ತಂದೇ! ನನಗೆ ಈ ತೋಟ ಈ ಮನೆ ಬಿಟ್ಟರೆ, ಇನ್ನೆಲ್ಲಿಯೂ ಒಂದು ಅಂಗೈಯಷ್ಟು ಎಡೆಯಿಲ್ಲ. ತೋಟದಲ್ಲಿ ಬೆಳೆದ ಹೂವು ಚಿಗುರು ಮಾರಾಟಮಾಡಿ ತಂದಾಗಲೆ ನನ್ನ ಎಲ್ಲ ಮಕ್ಕಳು-ಮರಿಗಳ ಹೊಟ್ಟೆಗೆ ಹಿಟ್ಟು ಸಾಗಬೇಕು! ಹೀಗೆ ಇರುವಾಗ ನಾನು ಈ ಮನೆ ಈ ತೋಟ ಬಿಟ್ಟು ಇನ್ನೆಲ್ಲಿಗೆ ಹೊರಟುಹೋಗಬೇಕು ಬುದ್ಧೀ! ತಾವೇ ಹೇಳಿ, ತಮ್ಮ ಪಾದಕ್ಕೆ ಬೀಳುತ್ತೇನೆ."

ತೋಟಿಗನು ಅಳುತ್ತಳುತ್ತ ನೆಲಕ್ಕೆ ಹಣೆಹಚ್ಚಿ ಬಿದ್ದುಬಿಟ್ಟನು. ರಾಜಶೇಖರನ ಕಣ್ಣುಗಳಲ್ಲಿ ಪಳಪಳನೆ ನೀರು ಸುರಿಯಿತು, ನರಗಳಲ್ಲಿಯ ನೆತ್ತರು ರಭಸದಿಂದ ಹರಿದಾಡಿತು.

"ಅಳುತ್ತಾನೆ! ಅತ್ತು ಡಂಭಾಚಾರ ನುರಿಸುತ್ತಾನೆ ನೋಡು-

ಕಳ್ಳಸೂಳೆಯ ಮಗ!" ಎಂದು ನುಡಿದು ರಾಜದೂತನೊಬ್ಬನು, ಕೆಳಕ್ಕೆ ಬಿದ್ದಿದ್ದ ತೋಟಗಾರನನ್ನು ಒದೆಯಲೆಂದು ಕಾಲನ್ನು ಮೇಲಕ್ಕೆ ಎತ್ತುತ್ತಿದ್ದ. ರಾಜಶೇಖರನು ಅದನ್ನು ನೋಡಿದವನೆ ಆತನ ಎದೆಯನ್ನು ಹಿಡಿದ, ರಭಸದಿಂದ ನೂಕಿದ. ರಾಜದೂತನು ಧೊಪ್ಪೆಂದು ಹಿಂದಕ್ಕೆ ಬಿದ್ದುಬಿಟ್ಟ. ಒಡನೆಯೆ ರಾಜಶೇಖರನು ಗುಡುಗಿನಂತೆ ಗಜರಿ ಹೇಳಿದ:

"ಅದೆಲ್ಲಿದೆ ರಾಜಾಜ್ಞೆ? ತನ್ನಿರಿಲ್ಲಿ! ಇಲ್ಲಿಯೆ ಹರಿದು ಕಾಲಕೆಳಕ್ಕೆ ಹಾಕಿ ಮೆಟ್ಟಿಬಿಡುತ್ತೇನೆ! ರಾಜಶೇಖರನು ಹೀಗೆ ಮಾಡಿದನೆಂದು ಹೋಗಿ ನಿಮ್ಮ ಮಹಾರಾಜರೆದುರಿಗೆ ಹೇಳಿರಿ! ಅವರು ನನಗೆ ಯಾವ ಶಿಕ್ಷೆಯನ್ನು ವಿಧಿಸುವರೋ ಅದನ್ನು ಅನುಭವಿಸಲಿಕ್ಕೆ ನಾನು ಸಿದ್ಧನಾಗಿದ್ದೇನೆ. ಇನ್ನು ನನ್ನ ಮಾತನ್ನು ವಿಚಾರಿ, ಈ ಬಡವನಿಗೆ ಯಾರಾದರೂ ಏನಾದರೂ ತೊಂದರೆಯನ್ನುಂಟುಮಾಡಿದಿರೊ, ನಿಮ್ಮ ಪ್ರಾಣ ನಿಮ್ಮ ನಿಮ್ಮ ದೇಹದಲ್ಲಿ ಉಳಿಯಲಿಕ್ಕಿಲ್ಲ!"

ರಾಜಶೇಖರನೆಂಬ ಹೆಸರನ್ನು ಕೇಳಿದೊಡನೆಯೆ ಎಲ್ಲ ಅರಸಾಳುಗಳ ಮೆಯ್ಯು ನೆತ್ತರು ಆರಿ ತಣ್ಣಗಾಗಿ ಹೋಯಿತು. ಮುಖದ ಬಣ್ಣ ಬೆಳ್ಪಿಗೆ ಇಳಿಯಿತು. ಅವರಲ್ಲಿ ಮುಂದಾಳಾಗಿದ್ದವನು ಎಲ್ಲರಿಗೂ ಕೂಗಿ ಹೇಳಿದ:

"ಈಗ ನಾವಿಲ್ಲಿ ಹೆಚ್ಚಿಗೇನನ್ನೂ ಮಾಡುವುದು ಬೇಡ! ನಡೆದ ಸಂಗತಿಯನ್ನೆಲ್ಲ ದಂಡನಾಯಕರೆದುರು ಅರಿಕೆಮಾಡಿಕೊಳ್ಳೋಣ! ಬಳಿಕ ಅವರೇನು ಆಜ್ಞೆಕೊಡುತ್ತಾರೋ ಅದರಂತೆ ನಾವು ವರ್ತಿಸೋಣ! ಈಗ ಎಲ್ಲರೂ ಹೊರಟುಬಿಡಿರಿ!"

ಮುಖ್ಯಸ್ಥನ ಅಪ್ಪಣೆಯಂತೆ ಎಲ್ಲರೂ ಗುಂಪುಗೂಡಿ ಹೊರಟು ನಡೆದರು. ರಾಜಶೇಖರನು ಮನುಷ್ಯನ ನೀಚತನಕ್ಕಾಗಿ ಒಳಗೊಳಗೆ ತಳಮಳಿಸುತ್ತ ನಿಂತಲ್ಲಿ ನಿಂತುಬಿಟ್ಟಿದ್ದನು. ತೋಟಗಾರನು ಕೃತಜ್ಞತೆಯಿಂದ ಕೈಮುಗಿದು, ದೈನ್ಯಧ್ವನಿಯಲ್ಲಿ ಹೇಳಿದ:

"ಒಳ್ಳೆಯ ವೇಳೆಯಲ್ಲಿ ಬಂದು, ನನ್ನನ್ನು ಉಳುಹಿಸಿದಿರಿ ತಂದೇ!"

ಉಕ್ಕಿ ಬರುತ್ತಿರುವ ಕರುಣೆಯ ಆವೇಗವನ್ನು ಒಳಕ್ಕೆಯೆ ದಬ್ಬಿಕೊಳ್ಳುತ್ತ ರಾಜಶೇಖರನು ನುಡಿದ:

"ನಿನ್ನನ್ನು ನಾನೇನು ಉಳುಹುತ್ತೇನಪ್ಪಾ! ನಿನ್ನನ್ನು, ನನ್ನನ್ನು, ಇಡಿಯ ಕನ್ನಡನಾಡನ್ನು ತಂದೆ ಹಂಪೆಯ ವಿರೂಪಾಕ್ಷ ಉಳುಹಬೇಕಾಗಿದೆ." ಎಂದು ಹೇಳಿ, ಅಲ್ಲಿ ಬಹಳ ಹೊತ್ತಿನ ವರೆಗೆ ನಿಂತುಕೊಂಡಿರಲಾರದೆ, ಮನೆಯ ದಾರಿಯನ್ನು ಹಿಡಿದು ನಡೆದನು.

---

## ೧೩ನೆಯ ಪರಿಚ್ಛೇದ

ಎಲ್ಲ ಸಂಬಂಧಗಳಲ್ಲಿಯೂ ತಾಯಿನುಡಿಯ ಸಂಬಂಧವು ಹೆಚ್ಚಿನದು. ನಮ್ಮ ನುಡಿಯನ್ನಾಡದವನು ನಮಗೆ ಪರಕೀಯ; ನಾವು ಆತನಿಗೆ ದೂರದವರು. ಬೇರೆ ಬೇರೆ ಧರ್ಮದವರಾಗಿದ್ದರೂ ಒಂದೆ ತಾಯಿನುಡಿಯುಳ್ಳವರು ಹತ್ತಿರದವರಾಗಿ ಬೆರೆಯುವರು; ಒಂದೆ ಧರ್ಮದ ಒಂದೆ ಪಂಥದ ಅನುಯಾಯಿಗಳಿದ್ದರೂ ಬೇರೆ ಬೇರೆ ಭಾಷೆಯನ್ನು ಮಾತ-ನಾಡುವವರಾದರೆ, ಪರಸ್ಪರರು ಗುರುತು ಮಾಡಿಕೊಳ್ಳುವ ತವಕವನ್ನು ಕೂಡ ತೋರದಿರುವರು. ಈ ಭಾಷಾಭಿನ್ನತೆಯು ಬಹುಭಾಷಾಭಾಷಿಯಾದ ನಮ್ಮ ಭಾರತದೇಶದ ಇತಿಹಾಸದಲ್ಲಿ, ಸಾಕಷ್ಟು ಹಾನಿಕರವಾದ ಕಾರ್ಯಭಾರವನ್ನು ಮಾಡಿದೆ. ವಿಜಯನಗರದ ವೈದಿಕಧರ್ಮದ ಸಾಮ್ರಾಜ್ಯದ ಕಾಲದಲ್ಲಿಯೂ, ಕನ್ನಡದಿಂದ ಭಿನ್ನಭಾಷೆಯವರಾದ ಉತ್ತರದೇಶದ ಹಿಂದುಗಳು—ಸನಾತನಧರ್ಮದವರಾದರೂ—ಮಹಮ್ಮದೀಯ ರಾಜ್ಯಗಳಲ್ಲಿದ್ದು, ಅತಿಶಯವಾದ ವಿಶ್ವಾಸದಿಂದ ಆ ರಾಜ್ಯಗಳ ಉನ್ನತಿಗಾಗಿ ದುಡಿಯುತ್ತಿದ್ದ ಉದಾಹರಣೆಗಳು ಸಾಕಷ್ಟಿವೆ.

ಬಂಕಾಪುರದ ಕೋಟೆ ವಿಜಯನಗರದ ರಾಯರ ವಶದಲ್ಲಿಯದೊಂದು ಭದ್ರವಾದ ಕೋಟೆ; ಪ್ರಮುಖವಾದ ಕೋಟೆ. ಪಶ್ಚಿಮಸಮುದ್ರ ತೀರದಲ್ಲಿಳಿದು, ಘಟ್ಟವನ್ನೇರಿ ಬಂದು, ವಿಜಯನಗರದವರೊಂದಿಗೆ ವ್ಯಾಪಾರ ಮಾಡುತ್ತಿದ್ದ ದೇಶ-ವಿದೇಶದ ವರ್ತಕರು, ಬಂಕಾಪುರವನ್ನು ತಮ್ಮ ಮುಖ್ಯ ಬೀಡಾರವನ್ನಾಗಿ ಮಾಡಿಕೊಂಡಿರುತ್ತಿದ್ದರು. ಎಂತಲೆ ವ್ಯಾಪಾರದ ದೃಷ್ಟಿಯಿಂದಲೂ ಅದು ಗಣ್ಯತೆಯನ್ನು ಪಡೆದಿದ್ದಿತು.

ಬಂಕಾಪುರದ ನಾಡಿನ ಪಾಳೆಯಗಾರನಾದ ರಾಣೋಜಿರಾಯನು

ಮಹಾರಾಷ್ಟ್ರ ಕ್ಷತ್ರಿಯನು. ಈತನ ತಂದೆಯ ತಂದೆ ಇಮ್ಮಡಿ ಹರಿಹರ-ರಾಯನ ಸೈನ್ಯದಲ್ಲಿ ಒಂದು ಅಧಿಕಾರದ ಮೇಲಿದ್ದು, ತುಂಬ ಶೂರನಾಗಿದ್ದನು. ಆತನ ಪರಾಕ್ರಮಕ್ಕೆ ಮೆಚ್ಚಿ ಹರಿಹರರಾಯನು, ಬಂಕಾಪುರದಂತಹ ಮಹತ್ತ್ವದ ಕೋಟೆಯ ಆಧಿಪತ್ಯವನ್ನು ಅವನ ಕಡೆಗೆ ಒಪ್ಪಿಸಿ ಕೊಟ್ಟಿದ್ದನು. ರಾಣೋಜಿರಾಯನ ತಂದೆಯಾದರೂ ವಿಜಯನಗರದ ಸಾಮ್ರಾಜ್ಯದ ನಂಬಿಗೆಯವನಾಗಿದ್ದುಕೊಂಡು, ತನ್ನ ತಂದೆಯ ಅಧಿಕಾರವನ್ನು ಹೊಣೆಗಾರಿಕೆಯಿಂದ ಸಾಗಿಸಿಕೊಂಡು ಬಂದನು. ವಿರೂಪಾಕ್ಷರಾಯನ ಆಳಿಕೆಯ ತೀರ ಮೊದಲ ಭಾಗದಲ್ಲಿಯೆ ಬಾಕಾಪುರದ ಆಧಿಪತ್ಯವು ರಾಣೋಜಿರಾಯನ ಕೈಗೆ ಬಂದಿತು. ಒಂದೆರಡು ವರುಷಗಳು ಹೋಗುವುದರಲ್ಲಿಯೆ ಸಾಮ್ರಾಜ್ಯದ ಬಿಗುಹು ತಪ್ಪಿತು. ಕಲಬುರ್ಗೆಯ ಸುಲ್ತಾನನ ಗೆಲುವಿನ ಕೈ ಮೇಲಾಗಲು ತೊಡಗಿತು. ಬಂಕಾಪುರ ನಾಡಿನ ನೆರೆಯನಾಡಾದ ಬೆಳಗಾಂವಿಯು ಕಲಬುರ್ಗೆಯವರ ವಶಕ್ಕೆ ಹೋಯಿತು. ಆಗಲೆ ರಾಣೋಜಿರಾಯನ ಮನಸ್ಸು ಸಾಮ್ರಾಜ್ಯಾಭಿಮಾನದ ವಿಷಯದಲ್ಲಿ ಹೊಯ್ದಾಡಲು ತೊಡಗಿತು.

ರಾಣೋಜಿಯ ಮನಸ್ಸಿನ ಹೊಯ್ದಾಟಕ್ಕೆ ಇನ್ನೂ ಒಂದು ಕಾರಣವಿದ್ದಿತು. ಕಲಬುರ್ಗೆಯ ರಾಜ್ಯದಲ್ಲಿ ರಾಣೋಜಿಯ ಆಪ್ತ-ಸಂಬಂಧಿಕರು ಅನೇಕರು, ಅಲ್ಲಲ್ಲಿ ಸಣ್ಣಪುಟ್ಟ ಅಧಿಕಾರದ ಸ್ಥಾನಗಳಲ್ಲಿ ಇದ್ದರು. ಅವರು ರಾಣೋಜಿಯೊಂದಿಗೆ, ಆಗಾಗ ಸುಲ್ತಾನನ ರಾಜ್ಯದ-ಆಡಳಿತದ ಸಾಮರ್ಥ್ಯದ ವಿಷಯದಲ್ಲಿ ಹೊಗಳಿ ಹೊಗಳಿ ಮಾತನಾಡುತ್ತಿದ್ದರು. 'ಸುಲ್ತಾನನಿಗೆ ನೀನು ನೆರವಾದರೆ ಇದಕ್ಕಿಂತ ಹೆಚ್ಚಿನ ಪದವಿಯನ್ನು ನೀನು ಪಡೆಯಬಹುದು' ಎಂದು ಆಮಿಷಗಳನ್ನೂ ಒಡ್ಡುತ್ತಿದ್ದರು. "ನೀನೀಗ ಬರಿಯೆ ಒಬ್ಬ ಪಾಳೆಯಗಾರ! ಸುಲ್ತಾನನ ರಾಜ್ಯದಲ್ಲಿ ಸ್ವತಂತ್ರ ಮಾಂಡಲಿಕನಾಗಿ ಇರಬಹುದು" ಎಂದು ಸವಿಯಾದ ಭವಿಷ್ಯವನ್ನು ಸೂಚಿಸುತ್ತಿದ್ದರು. 'ತನಗೆ ಇದಕ್ಕಿಂತ ಹೆಚ್ಚಿನ ಅಧಿಕಾರ-ಪದಗಳು ಸಿಕ್ಕುತ್ತಿದ್ದರೆ, ಈ ಕನ್ನಡರಾಜ್ಯವೇನು, . . ಸುಲ್ತಾನನ ರಾಜ್ಯವೇನು . . !' ಎಂಬ ಯೋಜನೆಯು ರಾಣೋಜಿಯ ಬುದ್ಧಿಯನ್ನು ಅಲ್ಲಾಡಿಸಿತು; ಎಂತಲೆ ಕಲಬುರ್ಗೆಯ ಸುಲ್ತಾನನು ಉತ್ತರದ ದಂಡಯಾತ್ರೆ–

ಯಲ್ಲಿ ಬೆಳಗಾಂವಿಯನ್ನು ಹಿಡಿದುಕೊಂಡಾಗ, ರಾಣೋಜಿರಾಯನು ಆತನನ್ನು ಅಭಿನಂದಿಸಿ ಪತ್ರವನ್ನು ಬರೆದಿದ್ದನು. ತಾನು ಹೇಗಾದರೂ ಮಾಡಿ, ಈಗಿದ್ದ ಸ್ಥಿತಿಯಿಂದ ಮೇಲಕ್ಕೇರಿ ಹೋಗಬೇಕೆಂಬ ಹವಣಿಕೆಯಲ್ಲಿ ರಾಣೋಜಿರಾಯನಿದ್ದನು. ಇಂತಹ ವೇಳೆಯಲ್ಲಿಯೆ ವಿರೂಪಾಕ್ಷರಾಯನ ಮುಯ್ಯನ್ನು ತೀರಿಸಿಕೊಳ್ಳಲು ಬದ್ಧಪ್ರತಿಜ್ಞನಾಗಿ ಹೊರಟ ಪೆದ್ದರಾಯನು ಅಲ್ಲಲ್ಲಿ ಅಲೆದಾಡುತ್ತ ಬಂಕಾಪುರದತ್ತ ಬರಲು, ಇಬ್ಬರೂ ಒಬ್ಬರನ್ನೊಬ್ಬರು ಕಂಡು ಮಾತನಾಡಿ, ರಾಣೋಜಿರಾಯನು ಪೆದ್ದರಾಯನಿಗೆ ಎಲ್ಲ ಬಗೆಯಿಂದ ನೆರವು ಕೊಡುವುದಾಗಿ ಮಾತು ಕೊಟ್ಟಿದ್ದನು. ನರಸಿಂಹನಾಯಕನಿಗೆ ಈ ಸಂಗತಿ ತಿಳಿದ ದಿನವೆ ವಿಜಯನಗರದಿಂದ ಹೊರಟು, ಬಂಕಾಪುರದ ಕಡೆಗೆ ಬಂದ ವಿಷಯವನ್ನು ಈ ಮೊದಲೆ ಹೇಳಲಾಗಿದೆ.

ನರಸಿಂಹನಾಯಕನು ಇಂದು ರಾಣೋಜಿರಾಯನ ಅತಿಥಿ. ಪೆದ್ದರಾಯನಂತೂ ಬಂಕಾಪುರದಲ್ಲಿಯೆ ತನ್ನ ಬೀಡಾರವನ್ನು ಹೊಡೆದು ಕೊಂಡು ಇದ್ದನು. ಆತನು ವಸತಿಮಾಡಿಕೊಂಡಿದ್ದ ಪಾಳೆಯಗಾರನ ಅತಿಥಿಶಾಲೆಯಲ್ಲಿ, ನರಸಿಂಹನಾಯಕನೂ ಪೆದ್ದರಾಯನೂ ಮಾತ-ನಾಡುತ್ತ ಕುಳಿತಿದ್ದರು.

"ಪೆದ್ದಣ್ಣಾ! ರಾಣೋಜಿರಾಯರಿಗೆ ನಾನು ಒಗೆಬಗೆಯಾಗಿ ಹೇಳಿ ಮನವೊಲಿಸಿದ್ದೇನೆ. ನಾಡಿನ ಪರಿಸ್ಥಿತಿಯನ್ನು ವಿವರಿಸಿದೆ. ನಮ್ಮ ನಮ್ಮೊಳಗಿನ ಅಂತಃಕಲಹಗಳಿಂದ ಇಂದು ವಿಜಯನಗರದ ಸಾಮ್ರಾಜ್ಯಕ್ಕೇನಾದರೂ ಏಟು ತಗುಲಿದರೆ, ನಮ್ಮ ವೈದಿಕಧರ್ಮದವರಿಗೆ ನಿಲ್ಲಲು ನೆಲೆಯಿಲ್ಲವೆಂಬ ಸಂಗತಿಯನ್ನೂ ಪರಿಷ್ಕಾರವಾಗಿ ಹೇಳಿದೆ. ಧರ್ಮದ ವಿಚಾರವು ಚೆನ್ನಾಗಿ ಮನವರಿಕೆಯಾದೊಡನೆಯೆ ರಾಣೋಜಿಯ ಕಣ್ಣುಗಳು ತೆರೆದುವು. ನನ್ನ ಮಾತಿಗೊಪ್ಪಿ, ಸಾಮ್ರಾಜ್ಯಸಂರಕ್ಷಣೆಯ ಕಾರ್ಯದಲ್ಲಿ ನನಗೆ ಬೇಕಾದ ನೆರವನ್ನು ಕೊಡಲು ಮಾತುಕೊಟ್ಟರು. ನಿಮ್ಮ ಮನಸ್ಸನ್ನೂ ತಿದ್ದುವಂತೆ ನನಗೆ ಮತ್ತೆ ಮತ್ತೆ ಅವರು ಹೇಳಿದರು:"

ಪೆದ್ದರಾಯನು ಕೆಳದುಟಿಯನ್ನು ಕಚ್ಚಿ, ಹುಬ್ಬುಗಂಟಿಕ್ಕಿ;

ತಲೆಯನ್ನಲ್ಲಾಡಿಸುತ್ತ ಕೆಲವುವೇಳೆಯನ್ನು ಕಳೆದು, ಬಳಿಕ ಒಮ್ಮೆಲೆ ರುಷ್ಟಭಾವದಿಂದ ಹೇಳಿದನು:

"ಸರಿ, ಹೆಡೆಯನ್ನು ತುಳಿಸಿಕೊಂಡ ಹಾವಿಗೆ ತನ್ನ ನೋವು ಗೊತ್ತು. ತುಳಿಸಿಕೊಳ್ಳದಿದ್ದುದು ತನ್ನ ದಾರಿಯಿಂದ ತಾನು ನಡೆಯುವುದು!"

"ಹಾವು....ಹಾವೇ ಪೆದ್ದಣ್ಣಾ! ನೀವು ಬುದ್ಧಿ–ವಿವೇಕಗಳುಳ್ಳ ಮನುಷ್ಯರು! ಹಿಂದು ಮುಂದಿನ ವಿಚಾರ ಮಾಡುವಂತಹ ಶಕ್ತಿ ನಿಮ್ಮಲ್ಲಿ ಇದೆ. ಬರಿ ತುಳಿದವರನ್ನು ಕಚ್ಚಿ ಕೊಂದುಬಿಟ್ಟರೆ ನಡೆಯದು; ಸಾಮ್ರಾಜ್ಯದ ದೊಡ್ಡ ಹೊಣೆಗಾರಿಕೆ ನಮ್ಮೆಲ್ಲರ ಮೇಲೆ ಇದೆ. ಈ ಸಂದರ್ಭದಲ್ಲಿ ನಿಮ್ಮಂತಹ ವಿಚಾರಿಗಳಾದರೂ ವಿವೇಕದ ದಾರಿಯಲ್ಲಿ ನಡೆಯಬೇಕಾಗಿದೆ. ಅತ್ತ ಸ್ವಾರ್ಥಿಗಳು ರಾಜನಿಷ್ಠೆಯ ವೇಷಹಾಕಿ, ತಮ್ಮ ಸ್ವಾರ್ಥ ಸಾಧಿಸಿಕೊಂಡು, ಸಾಮ್ರಾಜ್ಯದ ಕೇಡುಬಗೆಯುವುದರಲ್ಲಿದ್ದಾರೆ. ಇತ್ತ ಮಹಾರಾಜರಿಂದ ಅವಮಾನಿತರಾದವರೆಲ್ಲರೂ ಸೇಡು ತೀರಿಸಿಕೊಳ್ಳುವ ಇನ್ನೊಂದು ಬಗೆಯ ಸ್ವಾರ್ಥಸಾಧನೆಗೆ ತೊಡಗಿದರೆ, ನಮ್ಮ ಕನ್ನಡ ರಾಜ್ಯಕ್ಕೆ ಉಳಿಗಾಲವೆಲ್ಲಿ! ನಿಮಗೆ ಗೊತ್ತಿಲ್ಲ ಪೆದ್ದಣ್ಣಾ, ನಾಸೀರ್ ಮಹಮ್ಮದನನ್ನು ನೀವು ಬಲ್ಲಿರಷ್ಟೇ! ಅವನು ಕಲಬುರ್ಗೆಯ ಗುಪ್ತ ವಕೀಲ! ಮಹಾರಾಜರನ್ನು ತನ್ನ ಕೈಯೊಳಗಿನ ಬೊಂಬೆಯನ್ನಾಗಿಸಿ ಕೊಂಡು, ಈಗಿನ ರಾಜನಿಷ್ಠರೆನಿಸಿಕೊಳ್ಳುವ ಸ್ವಾರ್ಥಿಗಳಿಗೆ ಇಲ್ಲದ ಅಧಿಕಾರಗಳ ಆಮಿಷವನ್ನು ಹಚ್ಚಿ, ತನ್ನ ಬೇಳೆ ಬೇಯಿಸಿಕೊಳ್ಳುವ ದಾರಿಯಲ್ಲಿದ್ದಾನೆ. ಅವನು ನಡೆಯಿಸಿರುವ ಪಾತಾಳಯಂತ್ರಗಳು ಒಂದಲ್ಲ, ಎರಡಲ್ಲ. ಮಹಾರಾಜರೆದುರು ನಾಸೀರ್ ಮಹಮ್ಮದನಿಗೆ ವಿರೋಧ ವಾಗಿ ಯಾರಾದರೂ ಏನನಾದರೂ ಹೇಳಿದರೆ, ಅವರ ಮೈಯ್ಯ ತೊಗಲು ಕೂಡ ಉಳಿಯಲಾರದು."

"ನಾನು ಕೇಳುತ್ತೇನೆ ನಾಯಕರೆ, ಇಂತಹ ಅಯೋಗ್ಯನಾದ ಅರಸನನ್ನು ಇಟ್ಟುಕೊಂಡಾದರೂ ಮಾಡುವುದೇನು?"

"ನಿನ್ನ ಮಾತು ಸರಿ ಪೆದ್ದಣ್ಣಾ! ಬರಿಯೆ ನಮ್ಮ ನಮ್ಮೊಳಗಿನ ಮಾತೇ ಇದ್ದಿದ್ದರೆ, ಪ್ರಸಂಗವು ಎಲ್ಲಿಗೆ ಬರುತ್ತಿದ್ದಿತೋ ಇಷ್ಟರಲ್ಲಿ! ಆದರೆ

ಮೂರನೆಯದೊಂದು ಭಯಂಕರವಾದ ಗ್ರಹವು ಸಾಮ್ರಾಜ್ಯದ ಕಡೆಗೆ ತನ್ನ ದೃಷ್ಟಿಯನ್ನು ವಕ್ರಿಸಿಕೊಂಡು ಕುಳಿತಿದೆ. ಎಂತಲೆ ಈ ಸಂದರ್ಭದಲ್ಲಿ ಕನ್ನಡಿಗರೆಲ್ಲರೂ ನಾವು, ನಮ್ಮವರಿಂದ ಒದಗುತ್ತಿರುವ ಕಷ್ಟ-ನಷ್ಟ ಗಳನ್ನು ಕೆಲವುಕಾಲ ಸಹಿಸಿಕೊಂಡಿರಬೇಕಾಗಿದೆ. ಹನ್ನೆರಡು ತಿಂಗಳೂ ಒಂದೆ ವಿಧದ ಸುಖವು ನಮಗೆ ದೊರೆಯುವುದೆ? ಬೇಸಗೆಯ ಬಿರುಬಿಸಿಲ ಬೇಗೆಯನ್ನು ಸಹಿಸಬೇಕು, ಬಳಿಕ ವರ್ಷಾಕಾಲದ ತಣ್ಪು ನಮಗೆ ದೊರೆಯುವುದು! ಮಳೆಗಾಲದ ಕೆಸರು-ಕೊಚ್ಚೆಗಳಲ್ಲಿ ಕಷ್ಟಪಡಬೇಕು, ಆ ಮೇಲೆ ಬೆಳುಗಾಲದ ಬೆಳೆಯ ಹೊಲಗಳನ್ನು ನೋಡಿ ಹಿರಿ ಹಿರಿ ಹಿಗ್ಗುವ ಕಾಲ ಸಿಕ್ಕುವುದು! ಚಳಿಗಾಲದ ಕೊರೆಯುವ ಚಳಿಯಲ್ಲಿ ಗಡಗಡ ನಡುಗಬೇಕು, ಆ ತರುವಾಯ ಸುಗ್ಗಿಯ ಕಾಲದ ಮಾಮರದ ಬನಸಿರಿ ನೋಡಲಿಕ್ಕೆ ದೊರೆಯುವುದು!"

"ಅದು ಸೈರಣೆಯಿದ್ದವರ ಕೆಲಸ ನಾಯಕರೆ!"

"ಸೈರಣೆಯಿಲ್ಲದೆ ಯಾವ ಕೆಲಸವೂ ಆಗದು ಪೆದ್ದಣ್ಣಾ! ಈಗ ನೀವು ನಿಮ್ಮ ಬಲವು ಹೆಚ್ಚುವ ವರೆಗಾದರೂ ತಾಳಿಕೊಂಡಿದ್ದೀರೊ ಇಲ್ಲವೊ! ಸಾಮ್ರಾಜ್ಯದ ಹಿತದ ದೃಷ್ಟಿಯಿಂದ ಇನ್ನೂ ಸ್ವಲ್ಪ ನಿಮ್ಮ ಆ ತಾಳ್ಮೆಯನ್ನು ಹೆಚ್ಚಿಸಿರಿ! ಕಾಲವು ಬರುವ ವರೆಗೆ ಸುಮ್ಮಗಿದ್ದುಬಿಡಿರಿ!"

"ಕಾಲದ ಮೇಲೆ ಭಾರಹಾಕುವುದು ಪೌರುಷದ ಲಕ್ಷಣವಲ್ಲ ನಾಯಕರೆ!"

"ನನಗೂ ಆ ಮಾತು ಗೊತ್ತಿದೆ ಪೆದ್ದಣ್ಣಾ! ಇದ್ದ ಭೂಮಿಯಲ್ಲಿ ಬೀಜಬಿತ್ತಿ ಬೆಳೆಯಬೇಕಾದರೂ ಮಳೆಗಾಲ ಬರುವ ವರೆಗೆ ದಾರಿ ಕಾಯಲೆಬೇಕು. ಅವಸರದಿಂದ ಬೀಜಬಿತ್ತಿಬಿಟ್ಟರೆ, ಇದ್ದ ಬೀಜವನ್ನು ಮಣ್ಣುಗೂಡಿಸಿಕೊಂಡಂತೆ ಮಾತ್ರ ಆಗುತ್ತದೆ. ಪೆದ್ದಣ್ಣಾ, ಒಳ್ಳೆಯ ಕಾಲ ನಮ್ಮನ್ನು ಸಮೀಪಿಸುತ್ತಲಿದೆಯೆಂದು ನನಗೇನೊ ಈಗ ತುಂಬ ಎನಿಸುತ್ತಿದೆ. ಇಲ್ಲದಿದ್ದರೆ ಹೇಮಾಂಬಿಕೆಯಂತಹ ಒಬ್ಬ ಹೆಣ್ಣುಮಗಳು ಸಾಮ್ರಾಜ್ಯಕ್ಕಾಗಿ ಇಷ್ಟೊಂದು ತ್ಯಾಗವನ್ನು ಮಾಡಬಹುದಾಗಿದ್ದಿತೆ?"

"ವೆಂಕಟನಾಯಕರ ಮಗಳು ಹೇಮಾಂಬಿಕೆಯೆ? ಅವಳೇನು ಮಾಡಿದಳು?"

"ವಿರೂಪಾಕ್ಷರಾಯರನ್ನು ಬೇಕಾಗಿ ಮದುವೆಮಾಡಿಕೊಂಡಳು."

"ಅಣ್ಣಾಜಿಯವರು ಹೇಮಾಂಬಿಕೆಯ ವಿಚಾರವಾಗಿ ಆಗಾಗ ನನ್ನೆದುರು ಹೇಳುತ್ತಿದ್ದರು."

"ಅವರಿಬ್ಬರಲ್ಲಿಯೂ ಹರಿಹಿಂಗದ ಪ್ರೀತಿ ಪೆದ್ದಣ್ಣಾ! ಇಬ್ಬರೂ ಕರ್ತವ್ಯಕ್ಕಾಗಿ ತಮ್ಮ ಪ್ರೀತಿಜೀವನದ ಮೇಲೆ ನೀರೆರೆದು ನಿಂತಿದ್ದಾರೆ. ಅಣ್ಣಾಜಿಯವರದೇನು! ಮೊದಲಿನಿಂದಲೂ ಧ್ಯೇಯವಾದಿಗಳವರು! ಹೇಮಾಂಬಿಕೆಯದೆ ನನಗೆ ವಿಲಕ್ಷಣವಾಗಿ ತೋರುತ್ತಿದೆ. ಅವಳು ನನಗಿಂದು ವಿಜಯನಗರದ ತಾರಕದೇವತೆಯೆಂದು ತೋರುತ್ತಲಿದ್ದಾಳೆ."

ಪೆದ್ದರಾಯನು ನಸುವೇಳೆ ಸುಮ್ಮಗೆ ಕುಳಿತನು. ಏನೇನನೋ ಯೋಚಿಸಿ ನಿರ್ಣಯಿಸಿ, ಬಳಿಕ ಹೇಳಲು ತೊಡಗಿದನು :

"ನರಸಿಂಹನಾಯಕರೆ, ಮುಯ್ಯಿಗೆ ಮುಯ್ಯೆಂದು ಹೇಳಿ ಮೇಲ ಕ್ಕೆಬ್ಬಿಸುವ ವಿಚಾರ ಈಗಲೂ ನನ್ನನ್ನು ಅಸ್ಥಿರಗೊಳಿಸುವುದಾದರೂ, ಸಾಮ್ರಾಜ್ಯದ ವಿಷಯದಲ್ಲಿ ನಿಜವಾದ ಕಳವಳವುಳ್ಳ ನಿಮ್ಮ ಮಾತಿಗಾಗಿ ನಾನು, ಆ ವಿಚಾರದ ಪೀಡೆಯನ್ನು ತಡೆದು ಹಿಡಿಯುತ್ತೇನೆ. ನನ್ನಿಂದ ಯಾವ ನೆರವು ಬೇಕಾದರೂ ನಿಮಗೆ ಕೊಡಲು ಸದ್ಯಕ್ಕಂತೂ ಸಿದ್ಧನಾಗಿದ್ದೇನೆ."

ನರಸಿಂಹನಾಯಕನು ಆನಂದದ ಕಂಬನಿಯೊಂದಿಗೆ ಒಮ್ಮೆಲೆ ಪೆದ್ದರಾಯನನ್ನು ತಬ್ಬಿಕೊಂಡನು; ಬಿಗಿದು ಬರುತ್ತಿರುವ ಕಂಠದೊಂದಿಗೆ ಮಾತನಾಡಿದನು :

"ಪೆದ್ದಣ್ಣಾ! .. ನನ್ನ ಮಾತಿಗೆ ಮನ್ನಣೆ ಕೊಟ್ಟೆ ನೀನು! ನಿಜವಾಗಿಯೂ ನಮಗೆ ಒಳ್ಳೆಯಕಾಲ ಬರಲಿದೆ! ಪಂಪಾಪತಿಯು ನಿನ್ನ ಸದ್ಬುದ್ಧಿಯನ್ನು ಕೊನೆಯವರೆಗೆ ಕಾಯಲಿ!"

ಇಬ್ಬರೂ ಮೊದಲಿನಂತೆ ಕುಳಿತರು. "ಅಣ್ಣಾಜಿಯ ಪತ್ರವನ್ನೂ ಓದಿದೆ ನಾಯಕರೆ.." ಎಂದು ಪೆದ್ದರಾಯನು ಹೇಳುತ್ತಿರುವಾಗಲೆ ಲಾಕೋಜಿರಾಯನು ಅಲ್ಲಿಗೆ ಬಂದನು. ಇಬ್ಬರೂ ಆದರಿಸಿ, ಉಚಿತ

ಸ್ಥಳದಲ್ಲಿ ಅವನನ್ನು ಕುಳ್ಳಿರಿಸಿಕೊಂಡರು. ರಾಣೋಜಿರಾಯನು ಮೆಲುನಗೆ ನಗುತ್ತ ಮಾತನಾಡಿದನು :

" ತಮಗೊಂದು ಮಹತ್ತ್ವದ ವಿಚಾರ ತಿಳುಹಿಸಲಿಕ್ಕೆಂದು ಬಂದಿದ್ದೇನೆ ನಾಯಕರೆ ! "

" ಅದೇನು ? " ತವಕದಿಂದ ನರಸಿಂಹನಾಯಕನು ಕೇಳಿದ.

" ಇಂದೆಯೆ ಕಲಬುರ್ಗೆಯಿಂದ ಕಾಗದವೊಂದು ಬಂದಿದೆ. "

" ಯಾರ ಕಡೆಯಿಂದ ? "

" ನಮ್ಮ ಸೋದರಮಾವಂದಿರೊಬ್ಬರು ಸುಲ್ತಾನನ ಆಶ್ರಯ ದಲ್ಲಿದ್ದಾರೆ ; ಅವರಿಂದ ಬಂದಿದೆ. "

" ಏನಾದರೂ ವಿಶೇಷವಿದೆಯೆ ? "

" ವಿಶೇಷವಿದೆಯೆಂತಲೆ ಈಗ ಒಮ್ಮೆಲೆ ಇಲ್ಲಿಗೆ ಬಂದಿದ್ದೇನೆ. ಇದು ನೋಡಿ ಕಾಗದ ! " ಎಂದು ರಾಣೋಜಿರಾಯನು ನಾಯಕನ ಕೈಗೆ ಓಲೆಯನ್ನು ಕೊಟ್ಟನು.

ನಾಯಕನು ಓಲೆಯನ್ನು ಗಟ್ಟಿಯಾಗಿಯೆ ಓದಲು ತೊಡಗಿದನು :—

" ಪ್ರಿಯ ರಾಣೋಜಿ !

ಈಗ ನೀನು ಘನತೆಗೇರುವ ಅನುಕೂಲಕಾಲವೊದಗಿಬಂದಿದೆ. ವಿಜಯನಗರದ ರಾಜ್ಯದಲ್ಲಿ ವಿಪರೀತ ಅವ್ಯವಸ್ಥೆಯಂತೆ. ಅಲ್ಲಿಯ ಮಹಾ-ರಾಜರು ಮುಖ್ಯಮಂತ್ರಿಯಾದ ಸಾಳುವ ನರಸಿಂಹನನ್ನು ಊರು ಬಿಟ್ಟು ಓಡಿಸಿಬಿಟ್ಟಿದ್ದಾರಂತೆ. ಈಗ ವಿಜಯನಗರವನ್ನು ಮುತ್ತಲು ಒಳ್ಳೆಯ ಕಾಲವೆಂದು ಅಲ್ಲಿಂದ ಸುಲ್ತಾನರಿಗೆ ಗುಪ್ತಕಾಗದ ಬಂದಿದೆ. ಬೇಗನೆ ಇದ್ದಷ್ಟು ಸೈನ್ಯದೊಂದಿಗೆ ಸುಲ್ತಾನರು ವಿಜಯನಗರಕ್ಕೆ ಹೊರಡ ಲಿದ್ದಾರೆ. ಸದ್ಯ ಕ್ಷಾಮದ ಮೂಲಕವಾಗಿಯೂ ಬೇರೆ ಕಾರಣ ದಿಂದಲೂ ಸುಲ್ತಾನರಿಗೆ ಸೈನ್ಯಬಲ ಕಡಿಮೆಯಿದೆ. ನಿನ್ನ ವಿಷಯ ದಲ್ಲಿ ನಾನು ಅನೇಕ ಮಾತುಗಳನ್ನು ಸುಲ್ತಾನರಿಗೆ ತಿಳುಹಿದ್ದೇನೆ. ನೀನು ಬರೆದ ಅಭಿನಂದನ ಪತ್ರದಿಂದ ಮೊದಲೇ ನಿನ್ನ ವಿಷಯದಲ್ಲಿ ಅವರು ಒಳ್ಳೆಯ ಅಭಿಪ್ರಾಯವುಳ್ಳವರಾಗಿದ್ದಾರೆ. ಈಗ ನೀನು ಸುಲ್ತಾನರಿಗೆ ನೆರವಾದರೆ ನಿನಗೆ ತುಂಬ ಒಳ್ಳೆಯದಾದೀತು ! ಇನ್ನೂ ಹೊರಡುವ

ಬಚ್ಚಿಟ್ಟುಕೊಂಡಿರಬೇಕಾಗಿದ್ದ ಮಾತುಗಳನ್ನೆಲ್ಲ ಹೊರಕ್ಕೆ ಹಾಕಿಸಿದುವು. ನನ್ನ ಬದುಕು ಈಗ ಏತಕ್ಕೆ ಉಪಯೋಗವಾದಂತಾಯಿತು ! ಕುಲಗೆಟ್ಟು ಸುಖಸುರಿದಂತಾಗಲಿಲ್ಲ; ಸುಖಗೆಟ್ಟು ಕುಲ ಕಾಯ್ದುಕೊಂಡಂತಾಗಲಿಲ್ಲ! ನಾನೀಗ ಸಾಮ್ರಾಜ್ಯದ ಹಿತವನ್ನು ಏನು ಸಾಧಿಸಿದಂತಾಯಿತು ? 'ಹೋದಬಳಿಕ ಏನಾಗುವುದು ಆಗಲಿ ! ನನಗೇನು ಅದರ ಅಡೆತಡೆ?' ಎಂದು ನಾನು ಮೊದಲೆ ಆತ್ಮಹತ್ಯಮಾಡಿಕೊಂಡು ಬಿಟ್ಟಿದ್ದರೆ, ಈ ಕುದಿಯುತ್ತ ಬಿದ್ದುಕೊಂಡಿರುವ ಬಾಳಾದರೂ ತಪ್ಪುತ್ತಿದ್ದಿತೇನೊ ! "

* * * *

"ಆತ್ಮಹತ್ಯವೇ ! ನಾನು ಯಾವುದನ್ನು ಕಣ್ಣಾರೆ ಕಾಣಬೇಕೆಂದು ಹಗಲಿರುಳು ಬಯಸುತ್ತಿರುವೆನೊ ಅದನ್ನು ಕಾಣದೆ ನಾನು ಸಾಯ ಬೇಕೇ ? ನನ್ನ ಬಾಳಿನ ಪ್ರತಿಯೊಂದು ಉಸಿರನ್ನೂ ಸಾಮ್ರಾಜ್ಯದ ಅಭೀಷ್ಟ ಚಿಂತನೆಗಾಗಿ ವೆಚ್ಚವನ್ನು ಮಾಡುವೆನು! ಕೈಯಿಂದ ಆಗುವಷ್ಟು ನೀಗುವಷ್ಟು ಕಾರ್ಯವನ್ನಾದರೂ ಬದುಕಿದ್ದುಕೊಂಡು ಮಾಡುವೆನು ! ಕೊನೆಯ ಪಕ್ಷಕ್ಕೆ ನನ್ನ ಆಚರಣೆಯ ಮಾತು ವಿಜಯನಗರದ ಜನರ ಬಾಯಲ್ಲಿ ಸುಳಿದಾಡಿ, ನನ್ನಂತಹ ಕೆಲವು ಜನ ಕುಲವಧುಗಳ ಮನಸ್ಸಾದರೂ ಕಲಕೀತು ! ಅವರು ತಮ್ಮ ತಮ್ಮ ಪ್ರಣಯಿಗಳೆದುರು ನನ್ನ ನೆನಪು ತೆಗೆಯುವುದರಿಂದ,ಅವರಲ್ಲಿ ಕರ್ತವ್ಯಜಾಗೃತಿಯು ತಲೆದೋರೀತು! ದೇವಕಿಯ ಸೆರೆಮನೆಯ ದುಃಸಹ ದುಃಖದ ತಪಸ್ಸೇ ಗೋಕುಲದ ಗೊಲ್ಲರಲ್ಲಿ ಕ್ರಾಂತಿಯ ಬೀಜವನ್ನು ನೆಟ್ಟಿತು. ಕಂಸನ ನಿರಂಕುಶವಾದ ಆಡಳಿತಕ್ಕೆ ಅಂಕುಶದ ಅಘಾತವು ಬಿದ್ದಿತು. ಪಂಪಾಂಬಿಕೆಯು, ನನ್ನನ್ನೂ ಆ ತಾಳ್ಮೆಯ ತಪಸ್ವಿನಿಯ ಯೋಗ್ಯತೆಗೆ ಏರಿಸಲಿ ! "

* * * *

"ಎಳೆಯತನವೊಂದು ಸವಿಯಾದ ಕನಸು ! ಬರುವ ಕಾಲದ ತೊಂದರೆಯ ಕಲ್ಪನೆ, ನನ್ನ ಹೃದಯವನ್ನು ಆಗ ಒಂದುಸಲವಾದರೂ ಕಳವಳಗೊಳಿಸಿದ್ದಿತೆ ? ರಾಜಶೇಖರನ ಜೊತೆಯು ಭವಿಷ್ಯದಲ್ಲಿಯ ಕಹಿ-ತನವನ್ನೇ ಕಾಣದಂತೆ ಮಾಡಿದ್ದಿತು. ಅಂದಿನ ನಮ್ಮ ಭವಿಷ್ಯವೆಲ್ಲವೂ

ಇಂದು ನಮ್ಮ ವರ್ತಮಾನಜೀವನವಾಗಿ ಪರಿಣಮಿಸಿದ್ದರೆ..! ಈ ಕರ್ಣಾಟಕವು ನನಗೆ ದೇವಲೋಕವಾಗುತ್ತಿದ್ದಿತು ! ಈ ವಿಜಯನಗರವು ನನಗೆ ಇಂದ್ರನ ಅಮರಾವತಿಯಾಗುತ್ತಿದ್ದಿತು ! ಆದರೆ ಆದೆಲ್ಲವೂ 'ರೆ' ರಾಯನ ಮಿಂಚಿನ ಕತ್ತಿಯ ಅಧೀನದ ಮಾತು !"

* * * *

"ರಾಜಶೇಖರನೂ ನಾನೂ ಸೇರಿ ಎಷ್ಟೊಂದು ಆಟಗಳನ್ನಾಡಿದೆವು ! ಎಷ್ಟೊಂದು ವಿನೋದವಮಾಡಿದೆವು ! ರಾಜಶೇಖರನ ಪ್ರೀತಿ ನಿಷ್ಕಲಂಕವಾದುದು ! ಐಹಿಕಸುಖದ ವಿಷಯವೋಹದ ತಾಮಸ ರತಿಯನ್ನು ಆತನ ಭಾವದಲ್ಲಿ ನಾನು ಒಂದು ಸಲವೂ ಕಾಣಲಿಲ್ಲ ! ಮನದಲ್ಲಿ ಇದ್ದುದನ್ನು ಆತನ ಮಾತು ಹೊರಕ್ಕೆ ಮೂಡಿಸಿಬಿಡುವುದು. ಒತ್ತಾಯದ ನಗೆಯ ವೇಷವನ್ನು ನಾನೆಂದೂ ಕಂಡುದಿಲ್ಲ. ನನ್ನ ಅಶಕ್ತಹೃದಯವೆ ಆತನ ಕೃತಿಗಳನ್ನು ಒಂದೊಂದುಸಲ ವಿಲಕ್ಷಣದೃಷ್ಟಿಯಿಂದ ನೋಡುತ್ತಿದ್ದಿತು. ಅವುಗಳನ್ನು ಶೃಂಗಾರಚೇಷ್ಟೆಯೆಂದು ಭಾವಿಸಿ, ಮನಸ್ಸನ್ನು ಕುಣಿದಾಡಿಸುತ್ತಿದ್ದಿತು. ನಮ್ಮ ತಾಯಿ, ಬಾಯಮ್ಮನಿಂದ ನನ್ನ ಮನಸ್ಸನ್ನು ತಿಳಿದುಕೊಂಡು ರಾಜಶೇಖರನೆದುರು ಮಾತನಾಡಿದ ಹೊರತು, ಒಂದು ದಿನವೂ ಆತನು ನನ್ನ ವಿಷಯಕವಾದ ತನ್ನ ಪ್ರೀತಿಯಲ್ಲಿ ಪ್ರಣಯಕ್ಕೆ ಎಡೆಗೊಟ್ಟಿರಲಿಲ್ಲ !"

* * * *

"ಇನ್ನೇತಕ್ಕೆ ಅದರದೆಲ್ಲ ನೆನಪು ! ಆ ಜನ್ಮದಿಂದ ಸತ್ತು ನಾನೀಗ ಇನ್ನೊಂದು ಜನ್ಮವನ್ನು ತಳೆದಿದ್ದೇನೆ ಆ ಜನ್ಮ ಬೆಳಕಿನದು ! ಈ ಜನ್ಮ ಕಾರಿರುಳಿನದು ! ಹಾಗಾದರೆ ಇನ್ನು ಮುಂದಿನ ನನ್ನ ಜನ್ಮ ಮತ್ತೆ ಬೆಳಕಿನದಾಗಿ ಬರುವುದೇ ? ಅಹುದು ! ನಿಶ್ಚಯವಾಗಿಯೂ ಬಂದೆ ಬರುವುದು ! ಆದರೆ..! ಆ ಬೆಳಕಿನಲ್ಲಿ ನಾನು ಏಕಾಕಿನಿಯಾಗಿ ಜೀವಿಸಿಕೊಂಡಿರಬೇಕಲ್ಲವೆ..?"

ಹೇಮಾಂಬಿಕೆಯ ಎದೆಯು ಕದಲಿದಂತಾಯಿತು. ಅಂಗೈ-ಅಂಗಾಲ್ಗಳಲ್ಲಿ ಜುಮ್ಮೆಂದು ಶೂಲಿ ಬಂದಂತಾಯಿತು. ಮುಖ ಮುದುರಿಸಿ

ಸಿಡಿದಾಗಿ ಉಸಿರೊಂದನ್ನು ಹಾಕಿದಳು. ಅಷ್ಟರಲ್ಲಿಯೆ ಬಾಗಿಲಲ್ಲಿ ಕುಳಿತಿದ್ದ ಸಿವಮ್ಮನ ಅಪ್ಪಣೆಯನ್ನು ಪಡೆದುಕೊಂಡು ಬಾಯಮ್ಮ ಒಳಕ್ಕೆ ಬಂದಳು. ಹೇಮಾಂಬಿಕೆಯು ತವಕಗೊಂಡವಳಾಗಿ ತಟ್ಟನೆ ಎದ್ದು ಕುಳಿತಳು. ಇಬ್ಬರೂ ಎದುರೆದುರಾಗಿ ಒಬ್ಬರನ್ನೊಬ್ಬರು ನೋಡುತ್ತ ಕೆಲವು ಹೊತ್ತು ಕುಳಿತುಕೊಂಡರು. ಯಾರೂ ಮಾತನಾಡಲಿಲ್ಲ. ಇಬ್ಬರ ಕಣ್ಣಿಂದಲೂ ನೀರಹನಿ ಕೆಳಕ್ಕಿಳಿದು ಬಂದು ಕೆನ್ನೆಯನ್ನು ತೋಯಿಸಿದುವು. ಕೊನೆಗೆ ಬಾಯಮ್ಮನೆ ಬಾಯಿಬಿಟ್ಟಳು :

"ಅಮ್ಮಾಜಿಯವರು ಈವೊತ್ತು ನಿಮ್ಮನ್ನು ನೋಡಲಿಕ್ಕೆ ಹೊರಟಿದ್ದರು. ಅಪ್ಪಾಜಿಯವರು ಇಂದು ಬೇಡವೆಂದು ತಡೆದು ಬಿಟ್ಟರು."

"ಆಕೆ ಇಲ್ಲಿಗೆ ಏತಕ್ಕೆ ಬರಬೇಕು ಸುಮ್ಮಸುಮ್ಮನೇ! ಬರದಿರುವುದೇ ಒಳಿತು!"

ಬಾಯಮ್ಮ ಪಿಸುಮಾತಿನಲ್ಲಿ ಹೇಳಿದಳು :

"ನಿನ್ನೆಯವೆರಡನ್ನೂ ತಲ್ಪಿಸಿದೆನು."

ಹೇಮಾಂಬಿಕೆಯು ಮಾತನಾಡದೆ, ಆತುರದಿಂದ ಕಣ್ಣರಳಿಸಿ,ಆಶೆಯ ನೋಟದಿಂದ ಬಾಯಮ್ಮನನ್ನು ನೋಡಲುತೊಡಗಿದಳು. ಬಾಯಮ್ಮನು ಅತ್ತಿತ್ತ ನೋಡಿ, ಸಿವಮ್ಮನು ಅತ್ತಕಡೆಗೆ ಮುಖಮಾಡಿದ್ದ ಸಮಯವನ್ನು ಸಾಧಿಸಿ, ಮಡಿಲೊಳಗಿಂದ ಓಲೆಯೊಂದನ್ನು ತೆಗೆದು ಹೇಮಾಂಬಿಕೆಯ ಕೈಯಲ್ಲಿ ಕೊಟ್ಟಳು. ಹೇಮಾಂಬಿಕೆಯೂ ಜಾಗ್ರತೆಯಿಂದ ಅದನ್ನು ಮಡಿಲಿಗೆ ಸೇರಿಸಿಕೊಂಡಳು. ಒಂದೆರಡು ನಿಮಿಷ ಇಬ್ಬರೂ ಮಾತನೇನೂ ಆಡಲಿಲ್ಲ. ಬಳಿಕ ಹೇಮಾಂಬಿಕೆ ಹೇಳಿದಳು :

"ಬಾಯಮ್ಮಾ! ನೀನು ಯಾವಾಗಲೂ ಅಮ್ಮಾಜಿಯವರ ಬಳಿಯಲ್ಲಿರು; ಅವರೊಂದು ವಿಧದ ಭಾವಿಕಜೀವಿ! ನೀನು ನಾನಾಗಿಯೆ ಅವರನ್ನು ಸಂತವಿಡುತ್ತಿರು!"

"ಅಮ್ಮಾಜಿಯವರು ಇಂದು ಪಂಪಾಪತಿಯ ದರ್ಶನಕ್ಕೆ ಹೋಗುವೆನೆಂದು ಹೇಳಿದ್ದಾರೆ; ನನಗೆ ಬೇಗನೆ ಬರಲು ತಿಳುಹಿದ್ದಾರೆ."

"ಹಾಗಾದರೆ ನೀನು ಹೊರಟುಬಿಡು!"

ಬಾಯಮ್ಮನು ಹೋದ ಆರೇಳು ನಿಮಿಷಗಳಲ್ಲಿಯೆ ರುದ್ರಮ್ಮನು

ಬಂದು "ಮಹಾರಾಜರು ಇಲ್ಲಿಗೆ ಬರುವವರಿದ್ದಾರೆ" ಎಂದು ಹೇಮಾಂಬಿಕೆಗೆ ಸೂಚಿಸಿದಳು. ಕಿರುಮನೆಯಲ್ಲಿಯೆ ಮಹಾರಾಜರಿಗಾಗಿ ಆಸನದ ಸಿದ್ಧತೆಯಾಯಿತು. ಹೇಮಾಂಬಿಕೆಯು ತಾನೀಗ ಎಂತಹ ಸಂದರ್ಭದೊಂದಿಗೆ ಹೋರಾಡಬೇಕಾಗಿ ಬರುತ್ತದೆಯೊ. . ಎಂಬ ಹೆದರಿಕೆಯಿಂದ ಸ್ವಲ್ಪಕಾಲದ ವರೆಗೆ ಅಸ್ಥಿರಚಿತ್ತಳಾಗಿದ್ದಳು. ಬಂದುದಕ್ಕೆ ಎದೆ-ಗೊಡಬೇಕೆಂದು ಮತ್ತೆ ಗಟ್ಟಿಮನಸ್ಸಿನವಳಾಗಿ ಕುಳಿತುಕೊಂಡಳು.

ಮಹಾರಾಜರು ಬಂದರು; ಹೇಮಾಂಬಿಕೆ ಕುಳಿತ ಸ್ಥಳದಿಂದ ಎದ್ದು ಒಂದು ಮೂಲೆಗೆ ಜರುಗಿ ನಿಂತುಕೊಂಡಳು. ಮಹಾರಾಜರು ಆಸನದ ಮೇಲೆ ಕುಳಿತುಕೊಂಡು, ಗಾಂಭೀರ್ಯದ ಮೆಲುನಗೆಯೊಂದಿಗೆ ಮಾತನಾಡಿದರು :

"ಹೇಮಾ, ನಿನ್ನ ಹುಚ್ಚುವಿಚಾರಗಳೇನಾದರೂ ಈಗ ಮಾರ್ಪಟ್ಟಿವೆಯೇನು ?"

"ನನ್ನವು ಹುಚ್ಚುವಿಚಾರಗಳೇ ?"

"ಅಲ್ಲದೆ ಇನ್ನೇನು ?"

"ಕಾಮಿಲೆಯಾದವನ ಕಣ್ಣಿಗೆ ನೋಡಿದುದೆಲ್ಲವೂ ಹಸಿರಾಗಿ ಕಾಣುವುದಂತೆ !"

"ಎಂದರೆ ಏನು ?"

"ಇನ್ನೇನೂ ಇಲ್ಲ ! ಪ್ರಪಂಚದ ವೈಚಿತ್ರ್ಯ ! ಒಬ್ಬರ ತಪ್ಪುತಿಳಿ-ವಳಿಕೆ ವಾಸ್ತವವನ್ನೂ ತಪ್ಪಾಗಿ ಕಾಣುವುದು ! ಸತ್ಯವೊಪ್ಪಿದ ವಿಚಾರಗಳನ್ನೂ ಹುಚ್ಚುವಿಚಾರಗಳೆಂದು ಭಾವಿಸುವುದು !"

"ನನ್ನದು ತಪ್ಪುತಿಳುವಳಿಕೆಯೇ ?"

"ಅದನ್ನು ನಾನೊಬ್ಬಳೆ ಹೇಳಬೇಕಾಗಿಲ್ಲ !"

"ಇನ್ನೂ ನಿನ್ನ ಹೆಮ್ಮೆ ಕಡಿಮೆಯಾಗಿಲ್ಲವೆಂದು ತೋರುವುದು !"

"ನನಗೆ ಹೆಮ್ಮೆಯೆಂತಹದೊ ಗೊತ್ತಿಲ್ಲ ! ಕರ್ತವ್ಯನಿಷ್ಠೆಯೊಂದು ಗೊತ್ತಿದೆ !"

"ಅದೇನು, ಅಂತಹದು ನಿನ್ನ ಕರ್ತವ್ಯ ?"

" ಇನ್ನೂ ಒಂದು ಸಲ ಹೇಳಬೇಕೇ ? ಸಾಮ್ರಾಜ್ಯದ ಕ್ಷೇಮ-ಚಿಂತನೆ ! "

" ಮತ್ತೆ ನಿನ್ನ ಪಲ್ಲವಿಗೇ ನೀನು ಬಂದು ಬಿಟ್ಟೆ ! "

" ನನ್ನ ಬಾಳಿನ ಹಾಡಿಗೆ ಸದ್ಯಕ್ಕಂತೂ ಇದೊಂದೇ ಪಲ್ಲವಿ ! "

" ಹೇಮಾ, ಹುಚ್ಚಿಯಂತೆ ಮಾಡಬೇಡ ! ಎಲ್ಲರಂತೆ ನಿನ್ನೊಡನೆ ನಾನು ನಡೆದುಕೊಳ್ಳುವುದಿಲ್ಲ ! ಇದು ನನ್ನ ಅಂತಃಕರಣದ ಮಾತು ! ನನ್ನ ಮಾತನ್ನು ನಡೆಯಿಸು, ನೋಡು ! "

" ಮಹಾರಾಜ, ನೀವು ಒಂದೆ ಒಂದು ನನ್ನ ಮಾತನ್ನು ನಡೆಯಿಸಿದರೆ, ನಾನು ನಿಮ್ಮ ಎಲ್ಲ ಮಾತುಗಳನ್ನೂ ನಡೆಯಿಸುತ್ತೇನೆ."

" ಅದೇನು ಮಾತು ? "

" ಆಡಳಿತದ ಹದ ತಪ್ಪಿ ಹೋಗಿದೆ; ಈಗಲಾದರೂ ಆದ ತಪ್ಪನ್ನು ಸರಿಪಡಿಸಿಕೊಳ್ಳಿ ! ಎಲ್ಲಿದ್ದಲ್ಲಿಂದ ನರಸಿಂಹನಾಯಕರನ್ನು ಕರೆಯಿಸಿ, ಮರಳಿ ಅವರ ಅಧಿಕಾರ ಅವರಿಗೆ ಒಪ್ಪಿಸಿಕೊಡಿ ! "

ವಿರೂಪಾಕ್ಷರಾಯನ ಮೆದುಳಿಗೆ ಪಂಜುಕೊಟ್ಟಂತಾಯಿತು :

" ಓಹೋ ! ಮೆಲ್ಲಗೆ ಮಾತನಾಡಿ ನನ್ನನ್ನು ಮಬ್ಬಿಗೆ ಹಾಕಬೇಕೆಂದು ಇದ್ದೀಯೇನು ? ನರಸಿಂಹನಾಯಕನು ನನ್ನ ಆಜ್ಞಾಭಂಗ ಮಾಡಿದ ವಿದ್ರೋಹಿ ! ನೀಚನಾದ ದೊಂಬೆಗಾರ ! "

" ತಮ್ಮ ತಲೆಯಲ್ಲಿ ಯಾರೋ ತಪ್ಪುವಿಚಾರಗಳನ್ನು ತುಂಬಿ ಬಿಟ್ಟಿದ್ದಾರೆ ! "

" ಹೇಮಾ, ಮೆತ್ತಗೆ ಮಾತನಾಡಿದರೆ ಹಾದಿಗೆ ಬರುವ ಹೆಣ್ಣಲ್ಲ ನೀನು ! "

" ಯಾರು ಕೋಪಿಸಿಕೊಂಡಾದರೂ ನನ್ನನ್ನು ಏನು ಮಾಡಬೇಕಾಗಿದೆ ? "

" ಏನು ಮಾಡಬೇಕಾಗಿದೆಯೇ ? ನಿನ್ನನ್ನು ಬೀದಿಯ ಸೂಳೆಯೆಂದು ತಿಳಿದು ವ್ಯವಹರಿಸುತ್ತೇನೆ ; ಏನೆಂದು ತಿಳಿದಿದ್ದೀಯೆ . "

ಹೇಮಾಂಬಿಕೆಯ ಕೆಮ್ಮೊಗವು ಕರಾಳಕಾಳಿಯದಾಗಿ, ಉರಿಯನ್ನು ಉಗುಳಲು ತೊಡಗಿತು. ಅವಳು ತನ್ನೆದೆಗೆ ಅಡ್ಡವಾಗಿ ಹಿಡಿದಿದ್ದ,

ಕ್ರೋಧದಿಂದ ಕಂಪಿಸುತ್ತಿದ್ದ ಕೈಯು, ಎದ್ದು ಸಮೀಪಕ್ಕೆ ಬರಬೇಕೆಂದಿದ್ದ ಮಹಾರಾಜನನ್ನು ಅಡಿ ಕಿತ್ತಿಡದಂತೆ ನಿಂತಲ್ಲಿಯೆ ನಿಲ್ಲಿಸಿಬಿಟ್ಟಿತು. ಆಕೆಯ ಬಾಯಿಂದ ಹೊರಟ ಒಂದೊಂದು ಅಕ್ಷರವೂ ಬೆಂಕಿಯ ಮಳೆಯನ್ನು ಕಾರಿತು :

" ನನ್ನ ದೇಹಕ್ಕೆ ಕೈಸೋಂಕಿಸುವ ಶಕ್ತಿ ಯಾರ ಎದೆಯ ಕೆಚ್ಚಿನಲ್ಲಿದೆಯೊ ನೋಡಬೇಕಾಗಿದೆ ನನಗೆ! ಮಹಾರಾಜ, ಇದುವರೆಗೆ ನಿಮಗೆ ಒದಗಿರುವ ಸಹವಾಸವು ಬೀದಿಯ ಬಸವಿಯರದು ಮಾತ್ರವೇನೋ! ಕ್ಷತ್ರಿಯಕುಮಾರಿಯರ ಹೃದಯದಾಳದ ಅನುಭೂತಿ ನಿಮಗೆ ಆಗಬೇಕಾಗಿದೆ ಇನ್ನೂ ! "

" ಹೇಮಾ, ಈ ವಿರೂಪಾಕ್ಷರಾಯನ ಯಾವುದೊ ಒಂದು ಹೃದಯದ ಸೆಳೆತವು, ಈಗಲೂ ನಿನ್ನನ್ನು ಒತ್ತಾಯಪಡಿಸದಂತೆ ನನ್ನನ್ನು ಹಿಂದೂಡುತ್ತಲಿದೆ. ಆದರೇನು ! ನನ್ನ ಮಾತು ಕೇಳುವ ವರೆಗೆ ನೀನು ಹೀಗೆಯೆ ವಿಲಿವಿಲಿ ಒದ್ದಾಡುತ್ತ ಬಿದ್ದುಕೊಂಡಿರಬೇಕಾಗುವುದು ನೋಡು !"

" ಈ ಒದ್ದಾಟದಲ್ಲಿಯೆ ಸ್ವರ್ಗಸುಖವನ್ನು ಕಾಣುವ ಶಕ್ತಿಯನ್ನು ಪಂಪಾಪತಿ ನನಗೆ ಕೊಟ್ಟಿದ್ದಾನೆ ! "

" ನೀನು ಆರ್ಯಕನ್ನಿಕೆಯಲ್ಲವೇ ಹೇಮಾ ? "

" ಅಲ್ಲವೆಂದು ಯಾರಾದರೂ ಹೇಳುವರೇನು ? "

" ಗಂಡನು ದೈವತವೆಂದು ತಿಳಿಯುವುದು ಆರ್ಯಸ್ತ್ರೀಯರ ಶೀಲವಲ್ಲವೆ ! "

"ಬರಿಯೆ ತಿಳಿಯುವುದು ಶೀಲವಲ್ಲ! ಗಂಡನಲ್ಲಿ ಇಲ್ಲದ ದೈವತ್ವವನ್ನು ತಂದು ಹಾಕುವುದಕ್ಕಾಗಿ, ಹಗಲಿರುಳೂ ಹಣುಗುವುದು ಆರ್ಯಸ್ತ್ರೀಯರ ಶೀಲವೆಂದು ನನ್ನ ಎಣಿಕೆ ! ಹೆಣ್ಣಿನ ತಂದೆ ತನ್ನ ಕರ್ತವ್ಯವನ್ನು ಮರೆತರೆ, ಹೆಣ್ಣು ಆ ಕೊರತೆಯನ್ನು ತುಂಬಿಕೊಳ್ಳಬೇಕು ! "

ವಿರೂಪಾಕ್ಷರಾಯನು ಹಿಂದಕ್ಕೆ ಸರಿದು, ಕೊಂಚಕಾಲ ಆಸನದ ಮೇಲೆ ಸುಮ್ಮಗೆ ಕುಳಿತುಕೊಂಡ; ಬಳಿಕ ಮೇಲಕ್ಕೆದ್ದು ಹೊರ-ಹೊರಡುತ್ತ ಹೇಮಾಂಬಿಕೆಗೆ ಹೇಳಿದ :

" ಹೇಮಾ, ಇನ್ನೂ ಕೆಲವು ಸಮಯವನ್ನು ನಿನಗೆ ಕೊಡುತ್ತೇನೆ. ಇಲ್ಲದ ವಿಚಾರಗಳನ್ನು ತಲೆಯೊಳಗಿಂದ ತೆಗೆದು ಹಾಕಿ, ನನ್ನ ಮಾತುಗಳನ್ನು ಅನುಸರಿಸು ; ಈ ವೀರ ವಿರೂಪಾಕ್ಷರಾಯನಿಗೆ ಅಸಾಧ್ಯವಾದುದು ಯಾವುದೂ ಇಲ್ಲ; ವ್ಯರ್ಥವಾಗಿ ಜೀವನವನ್ನು ಕಹಿಯ ಮಡುವಿನಲ್ಲಿ ನೂಕಬೇಡ ! "

ನಿಧಾನವಾಗಿ ಅಡಿಯಿಡುತ್ತ ವಿರೂಪಾಕ್ಷರಾಯನು ಕಿರುಮನೆಯಿಂದ ಹೊರಟು ನಡೆದನು. ಹೇಮಾಂಬಿಕೆಯ ಕಣ್ಣುಗಳು ತಿರಸ್ಕಾರವು ತುಂಬಿದ ಕದಿರುಗಳನ್ನು ಉಗುಳುತ್ತಿದ್ದುವು.

---

## ೧೫ನೆಯ ಪರಿಚ್ಛೇದ

ಅಂದೆಯೆ ಆರುಗಳಿಗೆ ರಾತ್ರಿಯಾಗಿರಬಹುದು. ಗೌರಾಂಬಿಕೆಯ ಅಂತರ್ಗೃಹದಲ್ಲಿ ರಾಜಶೇಖರ-ಗೌರಾಂಬಿಕೆ ಮಾತನಾಡುತ್ತ ಕುಳಿತಿದ್ದರು:

" ಚಿಕ್ಕಮ್ಮಾಜಿ, ಮೊನ್ನೆಯೆ ನನಗೆ ಹೇಮಾಂಬಿಕೆಯಿಂದ ಸಂದೇಶವೊಂದು ಬಂದಿದೆ. ನಾನು ಆಗಾಗ ನಿಮ್ಮನ್ನು ಕಾಣುತ್ತಿರಬೇಕಂತೆ ! "

" ಅಹುದಪ್ಪಾ ರಾಜ ! ಹೇಮಾಂಬಿಕೆ ನನ್ನ ಹೃದಯವನ್ನು ಚೆನ್ನಾಗಿ ಬಲ್ಲಳು. ಎಂತಲೆ ಅವಳು ಆಗಾಗ ನನ್ನನ್ನು ನಗೆಯಾಡುತ್ತಿದ್ದಳು: ' ರಾಜಶೇಖರನೊಬ್ಬನಿದ್ದರಾಯಿತು ! ಅಮ್ಮಾಜಿ ನನ್ನನ್ನು ಕೂಡ ಮರೆತು ಬಿಡುತ್ತಾಳೆ ' ಎಂದು. ಹೇಮಾಂಬಿಕೆಯ ಮಾತು ಸುಳ್ಳಲ್ಲ, ರಾಜ ! ಅದೇನೊ ! ನಿನ್ನ ಮುಖ ನೋಡುತ್ತಿದ್ದರೆ ನನ್ನ ಎಲ್ಲ ಸಂಕಟಗಳನ್ನೂ ನಾನು ಮರೆಯುತ್ತೇನೆ. "

" ನಾನು ಧನ್ಯನು ಚಿಕ್ಕಮ್ಮಾ ! ತಾಯಿಯ ಕರುಳನ್ನು ಕಳೆದುಕೊಂಡಿದ್ದೇನೆಂದು ವ್ಯಸನಪಡುವಂತಿಲ್ಲ ! "

" ತಾಯಿಯಿದ್ದು ನನ್ನ ಹೇಮಾಂಬಿಕೆಯ ವಿಷಯದಲ್ಲಿ ಕರುಳನ್ನು ಕಲ್ಲುಮಾಡಿಕೊಂಡು ಕುಳಿತಿದ್ದೇನಲ್ಲವೇ ? ರಾಜ, ತನ್ನ ಸಂಕಟಕ್ಕೆ ತಾನೆ ಹೊಣೆ ನೋಡು ! ತಂದೆಯಿದ್ದು ಏನು ? ತಾಯಿಯಿದ್ದು ಏನು ?

ನನ್ನ ಹೇಮಾಂಬಿಕೆಯ ಎಂತಹ ಬದುಕನ್ನು ನೋಡುತ್ತ ನಾನು ಜೀವಿಸಿ ಇರಬೇಕು ರಾಜ!"

ಗೌರಾಂಬಿಕೆಯ ಕಂಬನಿ ಧಾರಾಕಾರವಾಗಿ ಸುರಿದುವು. ರಾಜ-ಶೇಖರನು, ಏನು ಮಾತನಾಡಬೇಕೆಂಬುದು ತಿಳಿಯದೆ ಸುಮ್ಮಗೆ ಕುಳಿತಿದ್ದನು. ಗೌರಾಂಬಿಕೆಯೆ ಮತ್ತೆ ಮಾತಿಗೆ ಮೊದಲು ಮಾಡಿದಳು:

"ರಾಜಶೇಖರ, ಹೇಮಾಂಬಿಕೆ ನನಗೂ ಒಂದು ಓಲೆ ಬರೆದು ಕಳುಹಿದ್ದಾಳೆ. ತನಗಾಗಿ ವ್ಯಸನಪಡದೆ, ಕರ್ತವ್ಯಪರಿಪಾಲನೆ ಮಾಡುವ ಮಗಳನ್ನು ಪಡೆದಿರುವೆನೆಂದು ನಾನು ತೃಪ್ತಿಪಟ್ಟುಕೊಂಡಿರಬೇಕೆಂತೆ. ಹೇಮಾಂಬಿಕೆಗೆ ತಾಯಿಯ ಹೃದಯದ ಅನುಭವವಿಲ್ಲ ರಾಜ!"

"ಚಿಕ್ಕಮ್ಮಾಜಿ, ಯಾರ ಮಾತು ಅಸಮಂಜಸವೆಂದು ಹೇಳಲಿ!"

"ನೀನಾದರೂ ಸುಖವಾಗಿರು ರಾಜಶೇಖರಾ! ಬೇಕೆಂತಲೆ ದುಡುಕಿ ಜೀವನವನ್ನು ಗಂಡಾಂತರದಲ್ಲಿ ಕೆಡಹುವ ಪ್ರಸಂಗ ತಂದುಕೊಳ್ಳಬೇಡ! ಅವರು ನಿನ್ನ ವಿಷಯದಲ್ಲಿ ಏನೇನನೊ ಹೇಳುತ್ತಿರುತ್ತಾರಪ್ಪಾ!"

"ಚಿಕ್ಕಮ್ಮಾ, ಬೇಕಾಗಿಯೆ ಯಾರು ಜೀವನವನ್ನು ಗಂಡಾಂತರಕ್ಕೆ ಗುರಿಮಾಡುತ್ತಾರೆ ನೋಡು! ಸಾಮ್ರಾಜ್ಯದ ಅವ್ಯವಸ್ಥೆ ಹಾಗೆ ಮಾಡಲು ಹಚ್ಚುತ್ತಲಿದೆ."

"ಏನು ಸಾಮ್ರಾಜ್ಯವೊ! ಏನು ಅವ್ಯವಸ್ಥೆಯೊ! ನನಗೊಂದೂ ತಿಳಿಯದಪ್ಪಾ! ರಾಜಶೇಖರ, ಹೇಮಾಂಬಿಕೆ ಹೇಳಿಕಳುಹಿದ್ದಾಳೆ; ತಂದೆ ಮಾಡುತ್ತಿರುವ ಅಪರಾಧಕ್ಕಾಗಿ ತಾನು ಎಷ್ಟೊಂದು ಪ್ರಾಯ-ಶ್ಚಿತ್ತ ತೆಗೆದುಕೊಂಡರೂ ಕಡಿಮೆಯಂತೆ. ಅಂತಹವರ ಹೆಂಡತಿ ನಾನಾದುದರಿಂದ ನಾನೂ ಪ್ರಾಯಶ್ಚಿತ್ತವನ್ನು ಭೋಗಿಸಬೇಕೆಂತೆ. ಸಾಮ್ರಾಜ್ಯ-ನಿಷ್ಕರ ಕಾರ್ಯಕ್ಕಾಗಿ ನಾನು ದಾನ-ಧರ್ಮಾದಿಗಳನ್ನು ಮಾಡಬೇಕೆಂತೆ. ಈ ಮನೆಯ ಸಂಪತ್ತಿನ ಸಹಾಯ ಆ ಕಾರ್ಯಕ್ಕೆ ಸಿಕ್ಕಬೇಕೆಂತೆ. ನಾನು ಆ ಕೆಲಸ ಮಾಡಬೇಕೆಂತೆ...."

ಇದ್ದುದಿದ್ದ ಹಾಗೆಯೆ ವೆಂಕಟನಾಯಕನು ಒಳಕ್ಕೆ ಬಂದನು. ಬೆಪ್ಪಾಗಿ ನಿಂತುಕೊಂಡು, ಅಗಲಿಸಿದ ಕಣ್ಣುಗಳಿಂದ ರಾಜಶೇಖರನನ್ನು

ಒಂದೆರಡು ನಿಮಿಷ ನೋಡಿಯೆ ನೋಡಿದನು. ಬಳಿಕ ಗಡುಸಾದ ಧ್ವನಿಯಿಂದ ಗೌರಾಂಬಿಕೆಗೆ ಮಾತನಾಡಿದನು :

"ಮಗಳೊಬ್ಬಳು ಸೆರೆಮನೆಯಲ್ಲಿದ್ದುದು ಸಾಲದೇನು ? ಇನ್ನೂ ಏನೇನು ಮಾಡಬೇಕೆಂದು ವಿಚಾರವಿದೆ ?"

ಗೌರಾಂಬಿಕೆ ತಟ್ಟನೆ ಕೇಳಿದಳು :

"ಏನಾಯಿತೀಗ ?"

"ಏನಾಯಿತೆಂದರೆ ? ರಾಜಶೇಖರನನ್ನು ಇನ್ನೂ ಮನೆಗೆ ಬರಲು ಕೊಡುವುದೇ ?"

ಗಂಡ-ಹೆಂಡಿರಿಬ್ಬರ ಮುಖಗಳನ್ನೂ ಒಂದೊಂದು ಸಲ ನೋಡುತ್ತ ರಾಜಶೇಖರನು ನಿಂತಿದ್ದನು. ಗೌರಾಂಬಿಕೆ ಧ್ವನಿಯಲ್ಲಿ ನಸು ಬಿರುಸನ್ನು ತಂದು ಕೇಳಿದಳು :

"ರಾಜಶೇಖರನನ್ನು ಏತಕ್ಕಾಗಿ ಮನೆಗೆ ಬರಲು ಕೊಡಬಾರದು?"

"ರಾಜದ್ರೋಹಿಯೆಂದು ! ದೊಂಬೆಗಾರನೆಂದು !"

"ಸರಿ, ನಿಮಗೆ, ನಿಮ್ಮ ರಾಜರಿಗೆ ಅವನು ದೊಂಬೆಗಾರ-ರಾಜ-ದ್ರೋಹಿ ! ನನಗೆ ಆತ ನನ್ನವನಾದ ರಾಜಶೇಖರ !"

ರಾಜಶೇಖರನ ಹೃದಯವು ಉಕ್ಕಿ ಬಂದಿತು. ಕಣ್ಣಿಮೆಗಳು ಕಂಬನಿಯಿಂದ ನನೆದುವು. ವೆಂಕಟನಾಯಕನು ರೋಷದಿಂದಲೆ ಹೇಳ ಬೇಕೆಂದು ಪ್ರಯತ್ನಿಸಿದನು; ಆದರೆ ರಾಜಶೇಖರನ ಮುಖವನ್ನು ನೋಡುತ್ತಲೆ ರೋಷದ ರಭಸ ಕಡಿಮೆಯಾಗಿ, ಧ್ವನಿಯು ಬಿರುಸು ತಗ್ಗುತ್ತ ಹೋಯಿತು :

"ರಾಜಶೇಖರಾ, ಇನ್ನು ನೀನು ನಮ್ಮ ಮನೆಗೆ ಎಂದೂ ಬರಲಾಗದು; ಬರಬೇಡ, ತಿಳಿಯಿತೇನು ?"

ರಾಜಶೇಖರನು ಏನನ್ನೋ ಮಾತನಾಡಬೇಕೆಂದಿರುವಾಗಲೆ ಗೌರಾಂಬಿಕೆಯೆ ಅಕ್ಕಸದ ದನಿಯಲ್ಲಿ ಹೇಳಲು ತೊಡಗಿದಳು :

"ನಾನು ಮಹಾರಾಜರಿಗೆ ಅಪ್ರಿಯಳಾದ ಹೇಮಾಂಬಿಕೆಗೆ ತಾಯಿ ! ರಾಜದ್ರೋಹಿಯಾದ ರಾಜಶೇಖರನು ನನಗೆ ಬೇಕಾದವನು ! ನನ್ನನ್ನೂ ಮನೆಬಿಟ್ಟು ಹೊರಕ್ಕೆ ಹಾಕಿಬಿಡಿರಿ ನೀವು !"

" ಬುದ್ಧಿವಂತಳು ! ಸಾಕು, ಗೊತ್ತಿದೆ ಬಿಡು ! ನಾನು ಅದನ್ನೇನೂ ಕೇಳುವವನಲ್ಲ ! ರಾಜಶೇಖರನು ನಮ್ಮ ಮನೆಗೆ ಬರಲಾಗದು ಇಷ್ಟೆ ! "

" ನಿಮ್ಮ ರಾಜಾಜ್ಞೆ, ಕಟ್ಟಳೆ, ನಿಯಮ ಎಲ್ಲವೂ ಅಂತಃಕರಣದ ಮೇಲೆ ನಡೆಯಲಾರವು ! "

" ನಿಕ್ಕ ಮಾತು ನನಗೊಂದೂ ಬೇಕಾಗಿಲ್ಲ; ನನ್ನ ಅಪ್ಪಣೆ ನಡೆಯಿಸದಿದ್ದಲ್ಲಿ ಪರಿಣಾಮ ಚೆನ್ನಾಗಿರದು ನೋಡಿಕೊಳ್ಳು ! "

" ವೆಂಕಟನಾಯಕನು ಅಲ್ಲಿ ನಿಲ್ಲದೆ ಹಿಂದಿರುಗಿ ಹೊರಟು ನಡೆದನು- ಗೌರಾಂಬಿಕೆ ದಿಮ್ಮುಹಿಡಿದವರ ಹಾಗೆ ತಲೆಗೆ ಕೈಹಚ್ಚಿಕೊಂಡು, ಸುಮ್ಮಗೆ ಕುಳಿತುಬಿಟ್ಟಳು. ರಾಜಶೇಖರನೂ ಕೆಲವು ವೇಳೆ ಹಾಗೆಯೆ ಕುಳಿತಿದ್ದು, ಬಳಿಕ ಒಮ್ಮೆಲೆ ಮೇಲಕ್ಕೆದ್ದು ಹೇಳಿದನು :

" ಚಿಕ್ಕಮ್ಮಾಜಿ, ನಾನು ಮನೆಗೆ ಹೊರಡಲೆ ? "

ಗೌರಾಂಬಿಕೆ ಬಿಗಿದ ಕಂಠದಿಂದ ಹೇಳಿದಳು :

" ಹೊರಡು ರಾಜ, ನಾನು ಹತಬಾಗಿನಿ ! ' ಆಗಾಗ ಮನೆಗೆ ಬರುತ್ತಿರು ' ಎಂದು ಯಾವ ಮುಖದಿಂದ ನಿನಗೆ ಹೇಳಲಿ ? "

ರಾಜಶೇಖರನು ಹೊರಡಲು ಅಡಿಯನ್ನು ಮುಂದೆ ಇಡುತ್ತಿರುವಾಗ, ಉತ್ತರೀಯದ ಸೆರಗಿನಿಂದ ಮುಖಮುಚ್ಚಿ ಹಿಡಿದು, ಕಂಬನಿಗಳನ್ನು ಒತ್ತಿಕೊಂಡನು.

---

## ೧೬ನೆಯ ಪರಿಚ್ಛೇದ

ವಿರೂಪಾಕ್ಷರಾಯನಿಗೆ ಇಂದು ಊಟದಲ್ಲಿ ರುಚಿಯೆ ತೋರಲಿಲ್ಲ. ಹೃದಯದ ಕೊರೆತವೆಂದರೆ ಹೇಗೆಂಬುದನ್ನು ಅನುಭವಿಸಿ ಅರಿಯದ ಆತನ ಎದೆಯನ್ನು, ಹೇಮಾಂಬಿಕೆಯ ವಿಷಯಕವಾದ ಕಳವಳದ ಕೀಟವು ಹಗಲಿರುಳೂ ಕೊರೆಯುವುದರಲ್ಲಿದ್ದಿತು. ಅದರಲ್ಲಿಯೆ ಇಂದು ಬೆಳಗಿನಲ್ಲಿ ಬಂಕಾಪುರದ ಕಡೆಯಿಂದ ಬಂದ ವಾರ್ತೆಯೊಂದರಿಂದ ನರಸಿಂಹ ನಾಯಕನ ವಿಷಯದಲ್ಲಿ ಏನೇನೊ ಸಂಗತಿಗಳು ಗೊತ್ತಾಗಿ, ರಾಯನ ಮನಃಸ್ಥಿತಿಯು ಮುಳ್ಳುಕೊಂಪೆಯಲ್ಲಿ ಬಿದ್ದುಕೊಂಡವರಂತೆ ಆಗಿದ್ದಿತು.

ಬಂಕಾಪುರದ ಸುದ್ದಿಯನ್ನು ಹೇಳಿದವನು ನಾಹೀರ್‌ಮುಹಮ್ಮದನು-ನಾಯಕನ ವಿಷಯದಲ್ಲಿ ರಾಯನ ಮನಸ್ಸು ಎಷ್ಟೊಂದು ವಿಷಮಯವಾಗಬೇಕೋ ಅಷ್ಟೊಂದು ಭಯಸೂಚಕ–ಮಾತ್ಸರ್ಯಜನಕವಾದ ಮಾತುಗಳನ್ನು–ಇದ್ದುವನ್ನು ಇಲ್ಲದುವನ್ನು–ಉಪ್ಪುಕಾರ ಮಸಾಲೆ ಬೆರಸಿ ಅವನು ಹೇಳಿದನು. ಅದನ್ನು ಕೇಳಿದಾಗಿನಿಂದ ವಿರೂಪಾಕ್ಷರಾಯನ ಕರುಳಿಗೆ ಕೊಳ್ಳಿಯಿಕ್ಕಿದಂತೆ ಆಗಿದ್ದಿತು.

ಮಧ್ಯಾಹ್ನದ ಊಟವಾದೊಡನೆಯೆ ವಿಶ್ರಾಂತಿಭವನದ ಶಯ್ಯೆಯೊಂದರಲ್ಲಿ–ಗಳಿಗೆಗಳಿಗೆಗೆ ಮಗ್ಗಲುಗಳನ್ನು ಬದಲಿಸುತ್ತ–ವಿರೂಪಾಕ್ಷರಾಯನು ಬಿದ್ದುಕೊಂಡಿದ್ದನು. ಆತನ ರುಷ್ಟವಾದ ಮನಸ್ಸು,ಯೋಚನಾಪ್ರಪಂಚದಲ್ಲಿ ನರಸಿಂಹನಾಯಕನನ್ನು ಅದೆಷ್ಟೋ ಸಲ ಸೆರೆಯಾಳನ್ನಾಗಿಸಿತು; ಬಗೆಬಗೆಯ ಶಿಕ್ಷೆಗಳಿಗೆ ಗುರಿಮಾಡಿ ವ್ಯರ್ಥಸಮಾಧಾನದ ನಿಟ್ಟುಸಿರುಗಳನ್ನು ಹಾಕಿಸಿತು; ಯೋಚನೆಯಿಂದ ಹೊರಕ್ಕೆ ಬರುತ್ತಿರುವಾಗಲೆ ಮತ್ತೆ ನಾಯಕನ ಚಿತ್ರವನ್ನು ಕಣ್ಣೆದುರು ನಿಲ್ಲಿಸಿ, ರಾಯನನ್ನು ತಳಮಳಗೊಳಿಸಿತು.

ಒಂದು ಪ್ರಹರಕ್ಕೆ ಕಡಿಮೆಯಾಗಿಯೆ ದಿನವು ಉಳಿದಿರಬಹುದು. ವಿರೂಪಾಕ್ಷರಾಯನು ಶಯ್ಯೆಯನ್ನು ಬಿಟ್ಟು ಎದ್ದ. ಕೈಯಾಳು ಬಂದು ಮುಖತೊಳೆದುಕೊಳ್ಳುವುದಕ್ಕೆ ಸಾಮಗ್ರಿಗಳನ್ನು ಒದಗಿಸಿಕೊಟ್ಟ. ಮುಖ ತೊಳೆದುಕೊಂಡು ಆದ ಮೇಲೆ ರಾಯನು, ನಿಃಸತ್ತ್ವದೇಹದವನಾಗಿ ವಿಶ್ರಾಮಾಸನವೊಂದರ ಮೇಲೆ ಬಿದ್ದುಕೊಂಡಂತೆಯೆ ಕುಳಿತುಕೊಂಡ. ದಾಸಿಯೊಬ್ಬಳು ಬಂದು ತಾಂಬೂಲವನ್ನು ಅಣಿಮಾಡಿಕೊಡಲು ತೊಡಗಿದಳು. ತಾನೇನು ಮಾಡುತ್ತಿರುವೆನೆಂಬುದು ತಿಳಿಯದೆ ರಾಯನು ತಾಂಬೂಲವನ್ನು ಅಗಿಯುತ್ತಿದ್ದ. ಬಾಗಿಲಾಳು ಬಂದು ರಾಯನಿಗೆ ಪೊಡಮಟ್ಟು, ವಿನಯದಿಂದ ಅರಿಕೆಮಾಡಿಕೊಂಡ :

"ರುದ್ರಮ್ಮ ತಮ್ಮ ಆಜ್ಞೆಗಾಗಿ ಕಾದಿದ್ದಾಳೆ ಪ್ರಭು !"

ಬೆಚ್ಚಿ ಬಿದ್ದವನಾಗಿ ರಾಯನು ಬಾಗಿಲಾಳನ್ನು ಕೇಳಿದನು :

"ಏನು....? ನರಸಿಂಹನಾಯಕನೇ....?"

" ನರಸಿಂಹನಾಯಕರು ಅಲ್ಲ ಮಹಾರಾಜ! ಅಂತಃಪುರದ ಹಿರಿಯಾಳಿ–ರುದ್ರಮ್ಮ ಬಂದಿದ್ದಾಳೆ. ತಮ್ಮಡಿಗಳನ್ನು ಅಗತ್ಯವಾಗಿ ಕಾಣಬೇಕಾಗಿದೆಯಂತೆ!"

" ಸರಿ! ಅವಳನ್ನು ಒಳಕ್ಕೆ ಬರುವಂತೆ ಹೇಳು!"

ಸೇವಕನು ಹೊರಟುಹೋದ ಒಂದೆರಡು ನಿಮಿಷಗಳಲ್ಲಿಯೆ ರುದ್ರಮ್ಮ ಮಹಾರಾಜರು ಕುಳಿತಿದ್ದಲ್ಲಿಗೆ ಬಂದಳು. ನಮಸ್ಕಾರದ ವಿಧಿ ಮುಗಿದೊಡನೆಯೆ ರಾಯನು ಕುತೂಹಲಧ್ವನಿಯಲ್ಲಿ ಕೇಳಿದನು:

" ಏನಾದರೂ ವಿಶೇಷಕಾರ್ಯವೇ ರುದ್ರಮ್ಮಾ?"

ರುದ್ರಮ್ಮನು ಸೂಚಕವಾದ ದೃಷ್ಟಿಯಿಂದ ಒಂದುಸಲ ತಾಂಬೂಲ ದವಳನ್ನು ರಾಯನಿಗೆ ತೋರಿ, ವಿನಯದ ಮೆಲುನಗೆಯೊಂದಿಗೆ ಹೇಳಿದಳು:

" ವಿಶೇಷಕಾರ್ಯವೆಂತಲೆ ಈಗ ಹೊತ್ತಲ್ಲದ ಹೊತ್ತಿನಲ್ಲಿ ಹೊರಟುಬಂದುದು."

ವಿರೂಪಾಕ್ಷರಾಯನು ಸಂಭ್ರಮದ ಭಾವದಲ್ಲಿ ಕೇಳಿದ:

" ಹಾಗಾದರೆ ಹೇಮಾಂಬಿಕೆ ನನ್ನ ಮಾತನ್ನು ಸಮ್ಮತಿಸಿದಳೇ?"

" ಅದು ಕನಸಿನಲ್ಲಿ ಕೂಡ ಸಾಧ್ಯವಲ್ಲದ ಮಾತು ಮಹಾರಾಜ!"

ಒಮ್ಮೆಲೆ ಪೆಚ್ಚುಬಿದ್ದ ಮೊಗದವನಾಗಿ ವಿರೂಪಾಕ್ಷರಾಯನು ಕೇಳಿದನು:

" ಹಾಗಾದರೆ ಇನ್ನೇನು?"

ರುದ್ರಮ್ಮ ರಾಯನಿಗೆ ಇನ್ನೊಂದು ಸಲ, ತನ್ನ ಕಣ್ಣಿಂದ ತಾಂಬೂಲ ದವಳನ್ನು ತೋರಿಸಿದಳು. ರಾಯನ ಸಂಕೇತದಂತೆ ಆಕೆ ಅಲ್ಲಿಂದ ಹೊರಟು ನಡೆದಳು. ಬಳಿಕ ಅವಳು ಓಲೆಗರಿಯಲ್ಲಿ ಬರೆದಿದ್ದ ಬರೆಹ ವೊಂದನ್ನು ದೊರೆಯ ಮುಂದೆ ಇರಿಸುತ್ತ ಹೇಳಿದಳು:

" ಹೊಸ ಮಹಾರಾಣಿಯವರನ್ನಿಟ್ಟಿದ್ದ ಕಿರುಮನೆಯ ಕಸಗೂಡಿ ಸಲಿಕ್ಕೆ ಹೋದಾಗ, ಅವರ ಹಾಸಿಗೆಯ ಅಡಿಯಲ್ಲಿ ಈ ಓಲೆ ಸಿಕ್ಕಿತಂತೆ. ಸಿವಮ್ಮ ಇಂದು ಕೆಲಸಕ್ಕೆ ಬಾರದೆ ಇದ್ದುದರಿಂದ, ಕೆಲಸದವಳು ಇದನ್ನು

ನನ್ನ ಕೈಗೆ ಕೊಟ್ಟಳು. ಇನ್ನೇನಾದರೂ ವಿಶೇಷವಿರಬಹುದೇನೋ.. ಎಂದು ತಮ್ಮ ಕಡೆಗೆ ತೆಗೆದುಕೊಂಡು ಬಂದೆ."

ವಿರೂಪಾಕ್ಷರಾಯನು ಓಲೆಯನ್ನು ಕೈಯಲ್ಲಿ ತೆಗೆದುಕೊಂಡ. ಬರೆದ ಬರೆಹದ ಮೇಲೆ ಕಣ್ಣುಗಳನ್ನಾಡಿಸುತ್ತ ನಡೆದ.

ಬರೆಹವೆಂದರೆ ಅದೊಂದು ನಿರ್ಜೀವಿಯಾದ ಗೆರೆಗಳ ಗುಂಪು; ಆದರೆ ಅದರ ಸಾಮರ್ಥ್ಯವು ಎಷ್ಟೊಂದು ವಿಲಕ್ಷಣವಾದುದು! ಲೋಕದಲ್ಲಿ ಎಲ್ಲಕ್ಕೂ ಮೊದಲು ಬರೆಹವನ್ನು ಕಂಡುಹಿಡಿದಿರುವ ಆ ಋಷಿಯನ್ನು ನಿಂದಿಸಬೇಕೊ ವಂದಿಸಬೇಕೊ-ಎಂಬುದನ್ನು ನಾವು ಎಷ್ಟೋ ಸಲ ತಿಳಿಯದವರಾಗುವೆವು. ಬರೆಹವು ನಮ್ಮ ಬದುಕಿಗೆ ಉಪಕಾರಕವೂ ಉಂಟು; ಅಪಕಾರಕವೂ ಉಂಟು. ಪ್ರಿಯುಜನರು ಒಬ್ಬರೊಬ್ಬರನ್ನು 'ಹೃದಯೇಶ್ವರ!' 'ಪ್ರಾಣೇಶ್ವರಿ' ಎಂದು ಕರೆದು, ಪರಸ್ಪರರ ಪ್ರೇಮದ ಆಳವನ್ನೂ ಎತ್ತರವನ್ನೂ ಉದ್ವೇಗಲಗಳನ್ನೂ ಬಣ್ಣಿಸಿ ಬರೆದ ಒಲವಿನೋಲೆಗಳು, ಮಾನವನನ್ನು ಸ್ವರ್ಗಶಿಖರಕ್ಕೇರಿಸುವುವು. ಆದರೆ ತಮಗೆ ಬೇಡವಾದವರು, ತಮಗಲ್ಲದೆ ಇನ್ನಾರಿಗೋ ಬರೆದ ಬರೆಹಗಳಾದರೂ, ಶಬ್ದಶಬ್ದಗಳಲ್ಲಿಯೂ ಅವು ಇಲ್ಲದ ಅರ್ಥಗಳನ್ನು ಕಲ್ಪಿಸಲು ಹಚ್ಚಿ, ಕಳವಳ-ಕ್ರೋಧಗಳ ಕಂದರದಲ್ಲಿ ಚೆಲ್ಲಿಬಿಡುವುವು. ಅದರಲ್ಲಿಯೂ ಅಂತಹ ಬರೆಹಗಳಲ್ಲಿ, ತಮಗೆ ಸಂಬಂಧಿಸಿದ ಸಂಗತಿಗಳೇನಾದರೂ ಇದ್ದರೆ ಕೆಲಸವೆ ಮುಗಿಯಿತು. ಇನ್ನೊಂದು ವಿಶೇಷವೆಂದರೆ ತಮ್ಮಲ್ಲಿದ್ದ ಅಶಕ್ತತೆಗಳನ್ನು ಕನ್ನಡಿಸಿ ತೋರಿಸುವ ನಿಷ್ಠುರಸತ್ಯದ ವಿಷಯವಿದ್ದರಂತೂ ಆಗಿಯೆ ಹೋಯಿತು; ಮಾನವರು ತಮ್ಮ ಮನುಷ್ಯತ್ವವನ್ನೆ ಮರೆತುಬಿಡುವರು. ಇದಿಷ್ಟೆ ಅಲ್ಲದೆ ಬರೆಹವು ವ್ಯವಹಾರದಲ್ಲಿ ಇನ್ನೂ ಹಲವು ವಿಧದ ಅನುಕೂಲತೆ, ಪ್ರತಿಕೂಲತೆಗಳನ್ನು ತಂದು ಒಡ್ಡುತ್ತಿರುವುದು.

ವಿರೂಪಾಕ್ಷರಾಯನು ಆ ಓಲೆಯನ್ನು ಓದುತ್ತಿರುವಾಗ ಕೆಮ್ಮೊಗದವನಾದನು; ಉರಿಗಣ್ಣಿನವನಾದನು; ದಡದಡಿಸುವ ಎದೆಯವನಾದನು, ಕೂಳ್‌ಗುದಿಗೊಳ್ಳುವ ಕರುಳಿನವನಾದನು. ರುದ್ರುಮ್ಮನು, ಇವೆಲ್ಲ ಮುಖ-ಮನೋವಿಕಾರಗಳನ್ನೂ ಬೆಪ್ಪುಗೊಂಡವಳಾಗಿ ನಿಂತು

ನೋಡುತ್ತಿದ್ದಳು. ಓಲೆಯನ್ನು ಓದಿ ಮುಗಿಸಿ, ರಾಯನು ತನ್ನ ಕೆಂಗಣ್ಣಿನ ನೋಟವನ್ನು ರುದ್ರಮ್ಮನ ಕಡೆಗೆ ತಿರುಗಿಸಿ ಹೇಳಿದನು :

" ರುದ್ರಮ್ಮಾ ! ನೀನು ಈ ಓಲೆಯನ್ನು ತಂದುಕೊಟ್ಟು ಒಳ್ಳೆಯ ಕೆಲಸ ಮಾಡಿದ್ದೀಯೆ ! ಇದಕ್ಕೆ ಸರಿಯಾದ ಬಹುಮಾನ ನಿನಗೆ ಸಿಕ್ಕಿಯೆ ಸಿಕ್ಕುವುದು. ಇಂದಿನಿಂದ ದಿನದಿನವೂ ಆ ಕಿರುಮನೆಯನ್ನು ಸೂಕ್ಷ್ಮ-ದೃಷ್ಟಿಯಿಂದ ಶೋಧಿಸುತ್ತಿರಬೇಕು. ಹೇಮಾಂಬಿಕೆಯ ಸಂಬಂಧಿಕರು ಯಾರಾದರೂ ಬಂದರೆ, ಅವರನ್ನು ಒಮ್ಮೆಲೆ ಒಳಕ್ಕೆ ಬಿಡಲಾಗದು ! ನೀನೀಗ ಹೊರಟುಬಿಡಬಹುದು ! "

ರುದ್ರಮ್ಮ ಮತ್ತೊಂದು ಸಲ ತಲೆಬಾಗಿ ನಮಸ್ಕರಿಸಿ ನಡೆದುಬಿಟ್ಟಳು. ವಿರೂಪಾಕ್ಷರಾಯನು ತನ್ನ ನೋಟವನ್ನು ಮತ್ತೆ ಆ ಓಲೆಯ ಬರೆಹದ ಮೇಲೆ ಆಡಿಸಲು ತೊಡಗಿದನು. ರಾಜಶೇಖರನು ಹೇಮಾಂಬಿಕೆಗೆ ಬರೆದ ಓಲೆಯದು. ಬಾಯಮ್ಮನು ಸಿವಮ್ಮನ ಕಣ್ಣುಮರೆಯಿಸಿ ಕೊಟ್ಟಾಗ, ಹೇಮಾಂಬಿಕೆ ತೆಗೆದುಕೊಂಡು ಮಡಿಲಿಗೆ ಸೇರಿಸಿಕೊಂಡುದು ಇದೇ ಪತ್ರ. ಅದರಲ್ಲಿ ಬರೆದ ವಿಷಯ ಹೀಗಿದ್ದಿತು :

**" ಒಲವಿನ ಹೇಮಾ !**

ನಿನ್ನ ಓಲೆಯನ್ನು ಬಾಯಮ್ಮ ತಂದುಕೊಟ್ಟಳು. ಓದಿ ಆನಂದ-ವ್ಯಸನಗಳೆರಡನ್ನೂ ಅನುಭವಿಸಿದೆನು. ಬಂದುದಕ್ಕೆ ಎದೆಗೊಡಲು ನೀನು ಸಿದ್ಧಳಾಗಿ ನಿಂತುದನ್ನು ಕಂಡು, ಭವ್ಯಭವಿಷ್ಯತ್ತಿನ ವಿಷಯದ ಆಶೆಯು ಕುಡಿಬಿಟ್ಟಿತು; ಆದರೆ ಎಲ್ಲ ಮಾತಿನಲ್ಲಿಯೂ ವ್ಯವಧಾನವಿರಲಿ ! ದುಡುಕಿ ನಡೆಯುವುದರಲ್ಲಿ ನಮ್ಮ ಕಾರ್ಯಸಾಧನೆಯಾಗದಿಷ್ಟೇ ಅಲ್ಲ—ಕಾರ್ಯ ಹಾನಿಯಾಗುವ ಸಂಭವವು ಹೆಚ್ಚು. ಮನಸ್ಸು ಮೆಚ್ಚಿ ಒಂದು ಕಾರ್ಯಕ್ಕೆ ತೊಡಗಿದ ಮೇಲೆ, ದಾರಿಯಲ್ಲಿ ಹರಡಿ ಬಿದ್ದಿದ್ದ ಕಲ್ಲು-ಮುಳ್ಳುಗಳಿಗಾಗಿ ಅಳುಕಿ ಕುಳಿತರೆ ಆಗದು. ಉಪಾಯಾಂತರದಿಂದ—ಸಾವಧಾನತೆಯಿಂದ—ಹಾದಿಯನ್ನು ಹಸನುಮಾಡಿಕೊಂಡು ಮುಂದುವರಿಯುವುದು ಅರಿತವರ ಮಾರ್ಗ.

ಹೇಮಾ, ವಿಜಯನಗರಕ್ಕೆ ಒಳ್ಳೆಯ ದಿನಗಳು ಸಮಾಪಿಸಲು ತೊಡಗಿವೆಯೆಂದು, ನನ್ನ ಮನಸ್ಸಿಗೆ— ದಿನದಿನಕ್ಕೆ ಹೆಚ್ಚು ಹೆಚ್ಚಾಗಿ—

" ಇಷ್ಟೇ ಅಲ್ಲ ಮಹಾರಾಜ! ನೆರೆದ ಜನರಲ್ಲಿ ರಾಜಶೇಖರನು ಬೇಕಾದ ಹಾಗೆ ತಮ್ಮನ್ನು ಆಡಿಕೊಂಡನಂತೆ. 'ರಾಜಾಜ್ಞೆಯನ್ನು ಕಾಲ ಕೆಳಕ್ಕೆ ಹಾಕಿ ಮೆಟ್ಟುತ್ತೇನೆ' ಎಂದನಂತೆ. 'ನಿಮ್ಮ ದೊರೆಯ ಆಡಳಿತದ ಸಾಮರ್ಥ್ಯ ಎಷ್ಟಿದೆಯೊ ನೋಡಿಬಿಡುತ್ತೇನೆ ಒಂದುಸಲ!' ಎಂದು ಎದೆಯುಬ್ಬಿಸಿ ಮಾತನಾಡಿದನಂತೆ. ರಾಜದೂತರು ನನ್ನನ್ನು ಕೇಳಿ, ಮುಂದೆ ಮಾಡುವುದನ್ನು ಮಾಡಬೇಕೆಂದು ಸುಮ್ಮಗೆ ಮರಳಿಬಂದಿದ್ದಾರೆ. ನಾನೀಗ ಬಂದುದು, ಸನ್ನಿಧಿಯ ಅಭಿಪ್ರಾಯವನ್ನು ಕೇಳಿಕೊಂಡು ಹೋಗಲಿಕ್ಕೆ! ರಾಜಶೇಖರನು ಆ ತೋಟಗಾರನಿಗೆ ಬೆಂಬಲಿಗನಾಗಿ ನಿಂತಿದ್ದಾನೆ. ಸುಸೂತ್ರವಾಗಿ ಆ ಸ್ಥಳವು ನಮ್ಮ ವಶಕ್ಕೆ ಬರುವ ಲಕ್ಷಣವಿಲ್ಲ!"

" ವೆಂಕಟನಾಯಕರೆ, ರಾಜಶೇಖರನಿಗೆ ಹೆದರಿ ಹಿಂಜರಿಯಬೇಕಾಗಿದೆಯೆ ನಾವು? ಕಳುಹಿರಿ.., ಈಗಲೆ ಕಳುಹಿರಿ.. ಸಾವಿರಾರು ಸೈನಿಕರನ್ನು! ಆ ತೋಟಗಾರನನ್ನು, ಆತನ ಬೆಂಬಲಿಗರನ್ನು ಎಲ್ಲರನ್ನೂ ಹಿಡಿದು ಸೆರೆಮನೆಯಲ್ಲಿ ಇರಿಸಿರಿ. ಇದುವರೆಗೆ ಕ್ಷಮಿಸುತ್ತ ಬಂದಂತೆ ಇನ್ನು ಮೇಲೆ ವಿದ್ರೋಹಿಗಳನ್ನು ಕ್ಷಮಿಸಲಾಗದು! ವೆಂಕಟನಾಯಕರೆ, ರಾಜ್ಯದಲ್ಲಿ ವಿದ್ರೋಹಿಗಳ ಸಂಖ್ಯೆ ಬೆಳೆಯುತ್ತಲಿದೆ. ಮನೆಯ ಜನರನ್ನೂ ನಂಬಲಾರದಂತಹ ವಿಷಮಸಂದರ್ಭವೀಗ ಒದಗಿಬಂದಿದೆ. ಇದು ನೋಡಿ ಅದಕ್ಕೆ ಸಾಕ್ಷ್ಯ! ನಿಮ್ಮ ಸಂಪತ್ತು ವಿದ್ರೋಹಿಗಳ ಕಾರ್ಯಕ್ಕೆ ವಿನಿಯೋಗವಾಗಲಿದೆ; ಇದರ ಎಚ್ಚರ ನಿಮಗಿದೆಯೆ?"

ಮಾತಿನ ಕೊನೆಯೊಡನೆಯೆ ವಿರೂಪಾಕ್ಷರಾಯನು ವೆಂಕಟನಾಯಕನ ಕೈಗೆ, ರಾಜಶೇಖರನು ಹೇಮಾಂಬಿಕೆಗೆ ಬರೆದಿದ್ದ ಓಲೆಯನ್ನು ಕೊಟ್ಟನು. ವೆಂಕಟನಾಯಕನು ಗಾಬರಿಯಾಗಿ ನಡುಗುತ್ತಿರುವ ಕೈಗಳಿಂದ ಓಲೆಯನ್ನು ತೆಗೆದುಕೊಂಡು, ಮೆಲ್ಲಮೆಲ್ಲಗೆ ಮೊದಲಿನಿಂದ ಕೊನೆಯ ವರೆಗೆ ಓದಿದನು. ಮುಖದ ಬಣ್ಣವು ಕೆಟ್ಟುಹೋಯಿತು. ಕೈಕಾಲುಗಳಲ್ಲಿಯ ತ್ರಾಣವು ಕುಂದಿಹೋಯಿತು. ಬಾಯ ಆರ್ದ್ರತೆಯು ಆರಿಹೋಯಿತು. ಓಲೆಯನ್ನೋದುವುದಾದ ಮೇಲೆ ಒಂದೆರಡು ನಿಮಿಷ ನಿಃಸತ್ತ್ವಭಾವದವನಾಗಿ, ಜೋಲುಮೊಗದಿಂದ ಸುಮ್ಮಗೆ

ಕುಳಿತುಕೊಂಡನು. ವಿರೂಪಾಕ್ಷರಾಯನು ಕೆಣಕುವ ಧ್ವನಿಯಲ್ಲಿ ಹೇಳಿದನು :

"ಎಲ್ಲಿ ಬೇಕು ಅಲ್ಲಿ ವಿದ್ರೋಹಿಗಳು ಆಟವಾಡುತ್ತಲಿದ್ದಾರೆ. ನೀವು ಕಣ್ಣುಮುಚ್ಚಿ ಕುಳಿತುಬಿಟ್ಟಿದ್ದೀರಿ!"

ದೀರ್ಘನಿಶ್ವಾಸದೊಂದಿಗೆ ವೆಂಕಟನಾಯಕನು ಹೇಳಿದ :

"ನಿನ್ನೆಯ ರಾತ್ರಿಯಲ್ಲಿಯೆ, ನಾನು ಮನೆಯಲ್ಲಿಲ್ಲದಿರುವಾಗ ರಾಜಶೇಖರನು ನಮ್ಮ ಮನೆಗೆ ಬಂದಿದ್ದ. ಮನೆಗೆ ಹೋದೊಡನೆಯೆ ನಾನು 'ಇನ್ನೊಂದು ಸಲ ನಮ್ಮ ಮನೆಗೆ ಬಂದುದಾದರೆ ಪರಿಣಾಮ ಚೆನ್ನಾಗಿರದು' ಎಂದು ಸ್ಪಷ್ಟವಾಗಿ ಹೇಳಿಬಿಟ್ಟೆ. ಹೆಂಗುಸರು ಕೊಟ್ಟ ಸಲುಗೆ! ಅದರ ಫಲವನ್ನು ನಾನು ಉಣ್ಣಬೇಕಾಗಿ ಬಂದಿದೆ. ನನ್ನ ಚಿನ್ನ ದಂತಹ ಹೇಮಾಂಬಿಕೆಯ ಮನಸ್ಸನ್ನು ಕೂಡ ಆ ಪಾಪಿ ಕೆಡಿಸಿಬಿಟ್ಟ— ಮಹಾರಾಜ! ನಿಜವಾಗಿಯೂ ಅವಳಲ್ಲಿ ಏನೂ ತಪ್ಪು ಇಲ್ಲ! ಹೇಳಿಕೇಳಿ ಹೆಣ್ಣುಹುಡುಗಿ ಆಕೆ! ರಾಜಶೇಖರನ ಜೊತೆಗೆ ಬಿದ್ದು, ಏನೇನನೊ ತಲೆಯಲ್ಲಿ ತುಂಬಿಕೊಂಡಿದ್ದಾಳೆ. ಹುಚ್ಚಿಯಂತೆ— ಕೇವಲ ಹುಚ್ಚಿಯಂತೆ ತಮ್ಮೊಡನೆ ವರ್ತಿಸುತ್ತಿದ್ದಾಳೆ. ಅವಳಲ್ಲಿ ಅಪರಾಧವೇನೂ ಇಲ್ಲ ಮಹಾರಾಜ....!"

ಮಾತನಾಡುತ್ತಿದ್ದಂತೆಯೆ ವೆಂಕಟನಾಯಕನ ಕೊರಳ ಸಿರ ಬಿಗಿದು ಬಂದುವು. ಕಣ್ಣಕುಣಿಕೆಗಳಲ್ಲಿ ಕಂಬನಿಗಳು ಕಾಣಿಸಿಕೊಂಡುವು. ವೆಂಕಟನಾಯಕನ ಈ ಕರುಣಾಸ್ಥಿತಿಯು ವಿರೂಪಾಕ್ಷರಾಯನ ಮನಸ್ಸಿನ ಕನಲಿಕೆಯನ್ನು ನಸುವೆ ಆರಿಸಿತು. ರಾಯನ ಹೃದಯದೆದುರು ಹೇಮಾಂಬಿಕೆಯನ್ನು ತಂದು ನಿಲ್ಲಿಸಿ, ಅವಳನ್ನು ಸಹಾನುಭೂತಿಯಿಂದ ನೋಡುವಂತೆ ಮಾಡಿತು. ಎರಡೇ ಎರಡು ನಿಮಿಷ ಈ ತೆರದ ಮನಃಸ್ಥಿತಿ. ರಾಯನ ಕಣ್ಣೆದುರು ಮತ್ತೆ ರಾಜಶೇಖರನ ಓಲೆ ಬಂದು ನಿಂತು, ಮನಸ್ಸನ್ನು ಕೆಣಕಲು ತೊಡಗಿತು. ನರಸಿಂಹನಾಯಕ–ರಾಜಶೇಖರರ ಮೂರ್ತಿಗಳು ಅಣಕದ ನಗೆಯೊಂದಿಗೆ ಮುಂದೆಬಂದು ನಿಂತು, ಭಾವನೆ ಗಳನ್ನು ಕೆರಳಿಸಲು ತೊಡಗಿದುವು. ಆ ಕೆರಳಿದ ಭಾವದಲ್ಲಿಯೆ ರಾಯನು ಹೇಳಿದ :

"ವೆಂಕಟನಾಯಕರೆ, ವಿದ್ರೋಹಿಗಳನ್ನು ಹಿಡಿದು ಹಾಕಿದಾಗಲೆ ನಮ್ಮ ಮಾರ್ಗವು ನಿಷ್ಕಂಟಕ; ಅದರ ಹೊರತು ಬೇರೆ ಗತಿಯಿಲ್ಲ!"

ವೆಂಕಟನಾಯಕ ವಿರೂಪಾಕ್ಷರಾಯರಲ್ಲಿ—ಸುಮಾರು ಅರ್ಧ ಮುಕ್ಕಾಲು ಗಂಟೆಯವರೆಗೆ—ಏನೇನೋ ಪಿಸುಮಾತಿನಲ್ಲಿ ಚರ್ಚೆ ನಡೆಯಿತು. ಕೊನೆಗೆ ಯಾವುದೋ ಮಾತಿನ ನಿರ್ಣಯವಾಗಿ, ವೆಂಕಟ ನಾಯಕನು– ಹೊರಟುನಿಂತಾಗ– ಆಡಿದ ಮಾತುಗಳಿವು :

"ಹಾಗಾದರೆ ನಾನು ಅಷ್ಟು ಕೆಲಸವನ್ನು ಮಾಡಿಸಿಬಿಡುತ್ತೇನೆ."

---

## ೧೭ನೆಯ ಪರಿಚ್ಛೇದ

ಮಾರ್ಗಶಿರ ಶುಕ್ಲಪಕ್ಷದ ದಶಮಿಯ ಚಂದ್ರ ನಡುಬಾನಲ್ಲಿ ನಗುತ್ತ ನಿಂತಿದ್ದಾನೆ. ಚಟ್ಟಿಯ ಕಾಲದಲ್ಲಿ ಹುಟ್ಟಿದ್ದ ಮೋಡಗಳ ತುಂಡುಗಳು ಆಕಾಶದಲ್ಲಿ ಅಲ್ಲಿ ಇಲ್ಲಿ ನಿಃಸತ್ತ್ವಗೊಂಡು ನಿಂತಿವೆ. ಹಬ್ಬಿ ಹರಡಿ ಚಂದ್ರನನ್ನು ಮುಸುಕಿಬಿಡಬೇಕೆಂಬ ಮನಸ್ಸು ಆ ತುಂಡು-ಮೋಡಗಳಿಗೆ ಇರಬಹುದಾದರೂ, ಉದಯೋನ್ಮುಖನಾಗುತ್ತಿದ್ದ ಹೇಮಂತರಾಜನು, ನಿಂತಿದ್ದಲ್ಲಿಯೇ ಅವುಗಳ ಬಲುಹನ್ನು ಕರಗಿಸಿ, ಬಯಕೆಯನ್ನು ಬಯಲುಮಾಡಿಬಿಡುತ್ತಿದ್ದ. ಚಂದ್ರನ ಬೆಳುದಿಂಗಳ ಸೊಬಗು ನಗರದ ಜನಗಳಿಗೆ ನೋಡಲಿಕ್ಕೆ ದೊರೆಯುತ್ತಿರಲಿಲ್ಲವಾದರೂ, ಮಾಲ್ಯ-ವಂತದ ಓವರಿಯ ಪ್ರದೇಶದಲ್ಲೆಲ್ಲ ಹೊನ್ನರಸದ ಹೊನಲು ಹರಿದಾಡು ತ್ತಿರುವಂತೆ ತೋರುತ್ತಿದ್ದಿತು. ಕನಕದಾಸರು ಪ್ರಪಂಚದ ರೀತಿಗೆ ಬೆರಗು ವಟ್ಟವರಾಗಿ 'ನಯನಬುದ್ಧಿಯ ಒಳಗೋ? ಬುದ್ಧಿನಯನದ ಒಳಗೊ?' ಎಂದು ಕೇಳಿದ್ದುದರ ರಹಸ್ಯವನ್ನು ಅನೇಕರು ಅರಿತಿರಬಹುದು! 'ಚೆಲುವು ಹೃದಯದಿಂದ ಹೊರಕ್ಕಿದೆಯೊ, ಹೃದಯವೇ ಚೆಲುವಿನ ನೆಲೆಯೊ?' ಎಂಬುದರ ಮರ್ಮವನ್ನು ಅರಿಯದವರಾಗಿ ದಾಸರು ಆಡಿದ

ಮಾತದು. ಈ ಮಾತಿಗೆ ಉತ್ತರವನ್ನು ದಾಸರ ಮೊದಲಿಗರೂ ಸಪ್ರಮಾಣವಾಗಿ ಕಂಡುಹಿಡಿದಿಲ್ಲ; ಅವರ ಬಳಿಕಿನವರೂ ಶಾಸ್ತ್ರಶುದ್ಧ-ಮಾರ್ಗದಿಂದ ನಡೆದು ನೋಡಿದುದಿಲ್ಲ. ಮಾಲ್ಯವಂತದ ಓವರಿ, ತಿಂಗಳ ಬೆಳಕಿನಲ್ಲಿ ಸೌಂದರ್ಯಸಾಗರವಾಗಿ ಪರಿಣಮಿಸಿದ್ದರೂ, ಗುಹೆಯ ಬಾಗಿಲ ಮುಂದಣ ಕಲ್ಲಮೇಲೆ ಕುಳಿತುಕೊಂಡಿದ್ದ ರಾಜಶೇಖರನಿಗೂ ದಿಲಾವರ್‌ಖಾನನಿಗೂ ಅದನ್ನು ನೋಡಿ ಆನಂದಿಸುವಂತಹ ಎದೆಯ ನೋಟವಿರಲಿಲ್ಲ. ಇಬ್ಬರ ಒಳಗಣ್ಣುಗಳೆದುರೂ ವಿಜಯನಗರದ ಭವಿಷ್ಯತ್ತಿನ ಬಗೆಬಗೆಯ ಚಿತ್ರಪಟಗಳು ಬಂದು ಬಂದು ಹೋಗುತ್ತಲಿದ್ದುವು.

ರಾಜಶೇಖರನು ಮೊಗವನ್ನು ಮೇಲಕ್ಕೆತ್ತಿ ಕೇಳಿದ:

“ಹಾಗಾದರೆ ನಾಸೀರ್‌ಖಾನನು ಸುಲ್ತಾನನಿಗೆ ನಾಳೆಯೆ ಪತ್ರವನ್ನು ಕಳುಹಲಿರುವನೇ?”

“ಹಾಗೆಂದು ನಿರ್ಣಯವಾಗಿದೆಯಂತೆ. ನಿಶ್ಚಯವು ನಾಳೆಯ ಮಧ್ಯಾಹ್ನ ಗೊತ್ತಾಗಬಹುದು.”

“ಪತ್ರದಲ್ಲಿ ಬರೆದ ವಿಷಯವು ಗೊತ್ತಾಗುವುದಕ್ಕೆ ಮಾರ್ಗವೆ ಇಲ್ಲವೆ?”

“ಏನೇನೂ ಇಲ್ಲ! ನಾಸೀರ್‌ಮುಹಮ್ಮದಖಾನರೊಬ್ಬರ ಹೊರತು ಇನ್ನೊಬ್ಬರಾರಿಗೂ ಆ ವಿಷಯವು ಗೊತ್ತಾಗುವಂತಿಲ್ಲ. ಆದರೆ ಇಷ್ಟು ಮಾತ್ರ ನಿಜ! ಸುಲ್ತಾನರಿಗೆ ಇಲ್ಲಿಗೆ ಬಂದು ಮುತ್ತಿಗೆಹಾಕುವಂತೆ ದಿನವನ್ನು ನಿರ್ಣಯಿಸಿ, ಬರೆದು ತಿಳುಹಲಿದ್ದಾರೆ.”

“ನನ್ನ ಮನಸ್ಸಿಗೆ ವ್ಯಥೆಯೆನ್ನಿಸುತ್ತಿದೆ.. ದಿಲಾವರ್‌ಖಾನ್! ತನ್ನ ಗುಟ್ಟೆಲ್ಲವೂ ನಮಗೆ ಗೊತ್ತಾಗಿದೆಯೆಂದು ನಾಸೀರ್‌ಖಾನನಿಗೇನು ಗೊತ್ತು? ಮಾರ್ಗದಲ್ಲಿಯ ಮಾಂಡಲಿಕರನ್ನೆಲ್ಲ ನರಸಿಂಹನಾಯಕರು ಎಚ್ಚರಿಸಿ, ರೇಗಿಸಿ ಕುಳ್ಳಿರಿಸಲು ತೊಡಗಿದ್ದ ಸಂಗತಿ ಆತನಿಗೆ ತಿಳಿಯುವ ಬಗೆ ಹೇಗೆ. ನಾಸೀರ್‌ಖಾನನ ಅಜ್ಞಾನದಿಂದ, ಮೊದಲೆ ತೊಂದರೆಯಲ್ಲಿ ಸಿಕ್ಕಿಕೊಂಡಿದ್ದ ಸುಲ್ತಾನನು, ವ್ಯರ್ಥವಾಗಿ ಇನ್ನಿಷ್ಟು ನಷ್ಟಕ್ಕೊಳಗಾಗಬಹುದು!”

"ರಾಜಕಾರ್ಯವಿದು ಅಣ್ಣಾಜಿ! ಬಲ, ಬುದ್ಧಿಗಳಿಲ್ಲದವರು ಬೀಳಬೇಕಾದುದು ಸಹಜವೆ! ಇದರಲ್ಲಿ ಅನ್ಯಾಯವಾದರೂ ಏನಿದೆ?"

"ಅನ್ಯಾಯವಲ್ಲದೆ ಏನು ದಿಲಾವರ್‌ಖಾನ್? ಪಾಪ! ತನ್ನ ಮಟ್ಟಿಗೆ ತಾನು ಇದ್ದುಕೊಂಡಿದ್ದವನನ್ನು, ಇಲ್ಲದ ಆಶೆಗಳನ್ನೊಡ್ಡಿ ಹಳ್ಳಕ್ಕೆ ಕೆಡಹುತ್ತಿರುವುದನ್ನು ನೋಡುತ್ತ ಸುಮ್ಮಗಿರುವವನಿಗೆ ಮಾನವನೆನ್ನಬೇಕೇ? ಅದೂ ಹೋಗಲಿ, ಸುಲ್ತಾನನು ಇದ್ದಷ್ಟು ದಂಡುಕಟ್ಟಿಕೊಂಡು ನಮ್ಮ ರಾಜ್ಯದೊಳಕ್ಕೆ ನುಗ್ಗಿದನೆನ್ನಿ. ಅದನ್ನು ನಮ್ಮವರು ಎದುರಿಸದೆ ಹೋದರೆ ನಡೆಯುವುದೇ? ಗೆಲವು ನಮಗೆ ದೊರೆಯಬಹುದಾದರೂ ವ್ಯರ್ಥವಾದ ಮನುಷ್ಯಹಿಂಸೆ ತಪ್ಪಿದುದಲ್ಲವಲ್ಲ!"

"ಹೇಳಿಕೇಳಿ ಯುದ್ಧವೆಂದಮೇಲೆ, ಮನುಷ್ಯಹಿಂಸೆಯಾಗಬೇಕಾದುದು ಆವಶ್ಯಕ, ಅನಿವಾರ್ಯ!"

"ಯುದ್ಧದ ಸಂದರ್ಭವನ್ನೆ ತಪ್ಪಿಸುವಂತೆ ಮಾಡಲಿಕ್ಕೆಬಾರದೇ ದಿಲಾವರ್‌ಖಾನ್?"

"ಅದು ಹೇಗೋ ನನಗೆ ತಿಳಿಯದು!"

ರಾಜಶೇಖರನು ಕೊಂಚವೇಳೆಯವರೆಗೆ ತಲೆಯನ್ನಲ್ಲಾಡಿಸುತ್ತ ಕುಳಿತನು; ಆತುರದೃಷ್ಟಿಯಿಂದ ದಿಲಾವರ್‌ಖಾನನು ಆತನ ಮುಖದತ್ತ ನೋಡುತ್ತಿದ್ದನು. ಕೊನೆಗೆ ರಾಜಶೇಖರನು ಜಿಜ್ಞಾಸೆಯ ಸ್ವರದಲ್ಲಿ ಕೇಳಿದನು:

"ನಾಸೀರ್‌ಮಹಮ್ಮದನ ಕಾಗದವು ಸುಲ್ತಾನನಿಗೆ ತಲ್ಪದಂತೆ, ನಡುವೆಯೆ ತಡೆದುಬಿಟ್ಟರಾಗದೆ?!"

ಸ್ವಲ್ಪ ಯೋಚಿಸಿದಂತೆ ಮಾಡಿ ದಿಲಾವರ್‌ಖಾನನು ಹೇಳಿದ:

"ಸರಿ, ಆಗಬಹುದು! ಯುದ್ಧಸಂದರ್ಭವನ್ನು ಇದರಿಂದ ತಪ್ಪಿಸಿದಂತಾಗದು; ಮತ್ತೆ ನಾಲ್ಕು ದಿನ ಮುಂದಕ್ಕೆ ಹಾಕಿದಂತೆ ಆಗಬಹುದು, ಇಷ್ಟೇ!"

"ಅಶುಭಸ್ಯ ಕಾಲಹರಣಂ! ಮುಂದೆ ಹೇಗೆ ಹೇಗೆ ಸಂದರ್ಭವೊದಗುವುದೋ ನೋಡೋಣ! ಸುಲ್ತಾನನಿಗೆ ಅಷ್ಟರಲ್ಲಿಯೆ ನಿಜಸ್ಥಿತಿ

ಗೊತ್ತಾಗಿ, ಆತನು ವಿಜಯನಗರದ ಮೇಲೆ ಸಾಗಿಬರುವುದನ್ನು ಕದಾಚಿತ್ ನಿಲ್ಲಿಸಿದರೂ ನಿಲ್ಲಿಸಿಬಿಡಬಹುದು.''

"ಅಣ್ಣಾಜೀ, ತಮ್ಮ ಮಾತು ನನಗೂ ಸರಿಯೆಂದು ಕಾಣುತ್ತಿದೆ.''

"ನಾಳೆಯ ದಿನ ಕಲಬುರ್ಗೆಗೆ ಕಾಗದ ಹೋಗುವುದು ನಿಶ್ಚಿತವಲ್ಲವೆ ?''

"ನಾಳೆಯ ಮಧ್ಯಾಹ್ನ ಇನ್ನೊಮ್ಮೆ ನಿಮ್ಮನ್ನು ಕಾಣುತ್ತೇನೆ. ಅಷ್ಟರಲ್ಲಿಯೆ ಅಲ್ಲಿಯ ವಿಷಯ ನನಗೆ ಗೊತ್ತಾಗಿರುವುದು. ಕಾಗದವನ್ನು ದಾರಿಯಲ್ಲಿಯೆ ತಡೆದು ಹಿಡುವುದರ ಬಗೆಗೂ, ನಾಳೆಯೆ ಏನೆಂಬುದನ್ನು ಮಾತನಾಡಿ ನಿರ್ಣಯಿಸಬಹುದು!''

"ಆಗಲಿ!''

ಇಬ್ಬರೂ ಎದ್ದು ದಿಣ್ಣೆಯನ್ನಿಳಿದು ಕೆಳಕ್ಕೆ ಬಂದರು. ದಿಲಾವರ್ ಖಾನನು ತನ್ನ ದಿನದ ದಾರಿಯಿಂದ ಮನೆಯ ಕಡೆಗೆ ನಡೆದನು. ರಾಜಶೇಖರನು ಮೆಲ್ಲ ಮೆಲ್ಲಗೆ ಅಡಿಯಿಡುತ್ತ, ಬೆಳುದಿಂಗಳಲ್ಲಿ ಹಾಯಾಗಿ ಮಲಗಿಕೊಂಡಿದ್ದ ತೋಟಗಳ ಸೊಬಗನ್ನು ನೋಡುತ್ತ, ತನ್ನ ಮಂದಿರದತ್ತ ಸಾಗಿದನು.

ಇದ್ದುದಿದ್ದ ಹಾಗೆಯೆ ಹೊಗೆಯ ಗುಂಪಿನಂತಹದೊಂದು ಬಂಜೆ-ಮೋಡದ ಹಾಳೆಯು, ನಗುತ್ತಿದ್ದ ತಿಂಗಳ ಮೇಲೆ ಮರೆಯಾಗಿ ಬಂದಿತು. ನೆಲಕ್ಕೆ ಹರಡಿಕೊಂಡಿದ್ದ ತಿಂಗಳಬೆಳಕು ಮಬ್ಬುಮಬ್ಬಾಗಿ ಪರಿಣಮಿಸಿತು. ತೋಟಗಳಲ್ಲಿ ಬೊಗಳುತ್ತಿರುವ ನಾಯಿಗಳ ಕೂಗು, ದಾರಿಯ ಪಕ್ಕದ ಮರಗಳ ಮೇಲೆ ಕುಳಿತು ಕಿರಿಚುವ ಇರುಳುಹಕ್ಕಿಗಳ ಕಿಲಬಿಲಧ್ವನಿ, ಆ ಮಬ್ಬಿಗೊಂದು ಬಗೆಯ ಭೀಕರತೆಯ ಬಣ್ಣ ಬಳಿಯಿತು. ರಾಜಶೇಖರನು ನಿರ್ಭೀತನಾಗಿ ದಾರಿಯಲ್ಲಿ ನಡೆದಿದ್ದ.

ಏಳೆಂಟು ತೋಟಗಳನ್ನು ದಾಟಿ ನಡೆದಿರಬಹುದು; ಕಪ್ಪುಕಪ್ಪನೆಯ ಉಡಿಗೆ ತೊಡಿಗೆಗಳುಳ್ಳ ಐದಾರು ಜನರು, ದಾರಿಯ ಎರಡೂ ಪಕ್ಕದಿಂದ ಕಳ್ಳಹೆಜ್ಜೆಯಿಂದ ನಡೆಯುತ್ತ, ರಾಜಶೇಖರನ ಹಿಂಬದಿಗ್ಗೆ ಬಂದರು. ಎಲ್ಲರೂ ಕೂಡಿ ಒಮ್ಮೆಲೆ ಆತನನ್ನು ಹಿಡಿದು ಕೆಡಹಿ,

ಕೂಗಾಡದಂತೆ ಬಾಯಲ್ಲಿ ಚೆಂಡನ್ನಿಟ್ಟು ಬಿಗಿದು, ಕೈಕಾಲುಗಳನ್ನು ಕಟ್ಟಿ ಹೊತ್ತುಕೊಂಡು ನಡೆದರು.

---

## ೧೮ನೆಯ ಪರಿಚ್ಛೇದ

ಮರುದಿನದ ಹಗಲು ಇಪ್ಪತ್ತು ಇಪ್ಪತ್ತೊಂದು ಗಳಿಗೆಗಳು ಕಳೆದು ಹೋಗಿರುವಾಗ, ದಿಲಾವರ್‌ಖಾನನು ತೋಟಗಾರನ ವೇಷದಿಂದ ರಾಜಶೇಖರನ ಮಂದಿರದ ಕಡೆಗೆ ಬಂದನು. ಹಗಲುಹೊತ್ತಿನಲ್ಲಿ ರಾಜಶೇಖರನಿದ್ದಲ್ಲಿಗೆ ಬರುವುದಾದಲ್ಲಿ, ಆತನು ತನ್ನ ನಿಜರೂಪವನ್ನು ಮಾರ್ಪಡಿಸಿಕೊಂಡು ಬರುವುದು ರೂಢಿ. ರಾಜಶೇಖರನ ಊಳಿಗದಲ್ಲಿರುವವರೆಲ್ಲರಿಗೂ ದಿಲಾವರ್‌ಖಾನನ ಬೇರೆ ಬೇರೆ ವೇಷಗಳ ಪರಿಚಯವು ಚೆನ್ನಾಗಿ ಆಗಿದ್ದಿತು.

ಮನೆಯ ಮುಂಬಾಗಿಲನ್ನು ಕಂಡೊಡನೆಯೆ, ಖಾನನಿಗೆ ಅದೇತಕ್ಕೋ ನಿರುತ್ಸಾಹವು ಹೆಣೆದುಕೊಂಡಿದ್ದಂತೆ ತೋರಿ, ಆತನೆದೆ ದಡದಡಿಸಿತು. ಮುಂಬಾಗಿಲಲ್ಲಿ ಯಾರೂ ಕಾಣಲಿಲ್ಲ; ಹಾಗೆಯೆ ಬಾಗಿಲೊಳಕ್ಕೆ ಪ್ರವೇಶಿಸಿದನು. ಚೌಕಿನಲ್ಲಿಯ ಪ್ರಾಣಿಗಳೆಲ್ಲ ಮೌನತೆಯನ್ನು ತಳೆದು, ಜೋಲುಮೊಗದಿಂದ ಇದ್ದಲ್ಲಿಯೆ ಬಿದ್ದುಕೊಂಡಂತೆ ತೋರಿದುವು. ದಿಲಾವರ್‌ಖಾನನಿಗೆ ಕರುಳನ್ನು ಹಿಂಡಿ ಹಿಸುಕಿದಂತಾಯಿತು. ಮಂದಿರದಲ್ಲಿ ಎಲ್ಲೆಲ್ಲಿಯೂ ನಿಃಶಬ್ದ.

ದಿಲಾವರ್‌ಖಾನನು ಸಭಾಭವನದಲ್ಲಿ ಅಡಿಯಿಟ್ಟ. ಹಾಸಿದ್ದ ರತ್ನಗಂಬಳಿಯ ಒಂದು ದಂಡೆಯಲ್ಲಿ, ಚಿಕ್ಕಣ್ಣ ಎರಡೂ ಕೈಗಳ ಮೇಲೆ ಮುಖವನ್ನು ಚೆಲ್ಲಿ, ಬೆನ್ನು ಮೇಲೆ ಮಾಡಿಕೊಂಡು ಬಿದ್ದಿದ್ದಾನೆ. ಚಿಂತೆಯ ಭರದಲ್ಲಿ ದಿಲಾವರ್‌ಖಾನನು ಒಳಕ್ಕೆ ಬಂದುದರ ಅರಿವು ಕೂಡ ಅವನಿಗೆ

ಇರಲಿಲ್ಲ. ಒಳಕ್ಕೆ ಮೊದಲನೆಯ ಅಡಿ ಇಟ್ಟಿದ್ದಲ್ಲಿಯೆ ಖಾನನು ತಡೆದು ನಿಂತು, ಕೂಗಿ ಕರೆದನು :

" ಚಿಕ್ಕಣ್ಣಾ ! "

ಚಿಕ್ಕಣ್ಣನು ಗಡಬಡಿಸಿ ಮೇಲಕ್ಕೆದ್ದನು. ದಿಲಾವರ್ ಖಾನನನ್ನು ಕಂಡೊಡನೆಯೆ ಆತನ ಕೊರಳ ಸಿರಗಳು ಬಿಗಿದು, ಬಾಯಿಂದ ಮಾತುಗಳೆ ಹೊರಕ್ಕೆ ಹೊರಡದಾದುವು. ಖಾನನು ಗಾಬರಿಯ ನಡುಗುದನಿಯಲ್ಲಿ ಕೇಳಿದನು :

" ಅಣ್ಣಾಜಿಯವರು ಎಲ್ಲಿ ಚಿಕ್ಕಣ್ಣಾ ? "

ಉಕ್ಕುತ್ತಿರುವ ದುಃಖವನ್ನು ನುಂಗಿಕೊಳ್ಳುತ್ತ ಚಿಕ್ಕಣ್ಣ ಹೇಳಲು ತೊಡಗಿದನು :

" ನಿನ್ನೆ ಸಾಯಂಕಾಲ ಮಾಲ್ಯವಂತದ ಕಡೆಗೆ ಹೋದವರು ಮರಳಿ ಬಂದೇ ಇಲ್ಲ. ದಿನದ ವೇಳೆಗೆ ಬಾರದೆ ಇದ್ದುದರಿಂದ, ನಾನು-ಗೋವಿಂದಯ್ಯ ಸೇರಿ, ರಾತ್ರಿಯಲ್ಲಿ ಗುಹೆಯ ಬಳಿ ಹೋಗಿ ನೋಡಿದೆವು. ಅಲ್ಲಿ ಯಾರೂ ಕಾಣಲಿಲ್ಲ ! "

ಬೆರಗುವಟ್ಟ ಸ್ವರದಲ್ಲಿ ದಿಲಾವರ್ ಖಾನನು ಹೇಳಿದ :

" ಒಂದು ಪ್ರಹರ ರಾತ್ರಿ ಕಳೆಯುವ ವರೆಗೂ ನಾವಿಬ್ಬರೂ ಅಲ್ಲಿಯೆ ಇದ್ದೆವು. ಬಳಿಕ ಇಬ್ಬರೂ ಕೂಡಿಯೆ ಬೆಟ್ಟವನ್ನಿಳಿದೆವು. ನಾನು ನನ್ನ ದಾರಿಯಿಂದ ಮನೆಯ ಕಡೆಗೆ ಹೋದೆ. ಹೋಗುತ್ತ ಹೋಗುತ್ತ ಎರಡು ಮೂರು ಸಲ ಹಿಂದಿರುಗಿ ನೋಡಿದಾಗ, ಅಣ್ಣಾಜಿಯವರು ಧಾನವಾಗಿ ಹೆಜ್ಜೆಹಾಕುತ್ತ ದಾರಿಯಲ್ಲಿ ಸಾಗಿದ್ದುದನ್ನು ಕಂಡೆ. "

" ಹಾಗಾದರೆ ಅವರು ಮನೆಗೆ ಬರಲೇ ಇಲ್ಲವಲ್ಲ ! ಈಗ ಬಂದಾರು, ಆಗ ಬಂದಾರು. . ಎಂದು ಹನ್ನೆರಡು ಗಳಿಗೆ ರಾತ್ರಿಯ ವರೆಗೂ ನಾವಿಲ್ಲಿ ದಾರಿಯನ್ನು ಕಾದೆವು. ಬಳಿಕ ಮಾಲ್ಯವಂತಕ್ಕೆ ಹೋಗಿ ನೋಡಿದೆವು. ದಾರಿಯ ತೋಟಗಾರರನ್ನೆಲ್ಲ—ಮಲಗಿದವರನ್ನು ಎಬ್ಬಿಸಿ ಎಬ್ಬಿಸಿ—ಕೇಳಿದೆವು. ಎಲ್ಲರೂ ನಮಗೇನೂ ಗೊತ್ತಿಲ್ಲವೆಂದು ಹೇಳಿದರು. ರಾತ್ರಿಯೆಲ್ಲ ಹುಡುಕಿ ಆಯಿತು. ' ಏನೋ ಹೆಚ್ಚಿನ ಕೆಲಸದ ಮೂಲಕ ಇನ್ನೆಲ್ಲಿಗಾದರೂ ಹೋಗಿರಬಹುದು ; ನಾಳೆಯ ದಿನ ಬಂದಾರು ' ಎಂದು

ಸಮಾಧಾನ ಹಚ್ಚಿಕೊಂಡು, ಮತ್ತೆ ಮನೆಗೆ ಬಂದೆವು. ಆದರೆ ಅಣ್ಣಾಜಿಯವರು ಇದುವರೆಗೂ ಬರಲಿಲ್ಲ. . . . "

ದಿಲಾವರ್‌ಖಾನನು ಯೋಚನಾಮುದ್ರೆಯಿಂದ ನಸುವೇಳೆ ನಿಂತಲ್ಲಿಯೆ ನಿಂತಿದ್ದನು. ಕರುಣಾತುರಭಾವದ ನೋಟದಿಂದ ಆತನನ್ನು ನೋಡುತ್ತ ಚಿಕ್ಕಣ್ಣನು ನಿಂತನು. ತಟ್ಟನೆ ಏನೋ ನೆನಪಾದವರಂತೆ ದಿಲಾವರ್‌ಖಾನನು ಕೇಳಿದನು :

"ವೆಂಕಟನಾಯಕರ ಮನೆಗೆ ಯಾರಾದರೂ ಹೋಗಿ ನೋಡಿ ಬಂದಿದ್ದೀರಾ? ಅವರ ಜನಾನ್‌ಖಾನೆಯ ಕಡೆಗೆ ಅಣ್ಣಾಜಿಯವರು ಆಗಾಗ ಹೋಗಿ ಬರುತ್ತಿದ್ದರಲ್ಲವೇ?"

"ಜೀವ ನಿಲ್ಲದೆ ಬೆಳಗಿನಲ್ಲಿ ನಾನೇ ಅಲ್ಲಿಗೆ ಹೋಗಿದ್ದೆ. ಅಣ್ಣಾಜಿಯವರ ವಿಷಯದಲ್ಲಿ ಬಾಯಮ್ಮನನ್ನು ಕೇಳಿದರೆ, ಅಲ್ಲಿ ಯಾವ ಸುದ್ದಿಯೂ ತಿಳಿಯಲಿಲ್ಲ. ಬಾಯಮ್ಮನು ಹೋಗಿ ಹೇಳಿದೊಡನೆಯೆ ಗೌರಮ್ಮಾಜಿಯವರು ನನ್ನನ್ನು ತಾವಿದ್ದಲ್ಲಿಗೇ ಕರೆಯಿಸಿಕೊಂಡರು. ಎಲ್ಲ ಸಂಗತಿಯನ್ನೂ ನನ್ನಿಂದ ಕೇಳಿಕೊಂಡರು. ಈ ವರ್ತಮಾನ ಕೇಳಿದೊಡನೆಯೆ ಆ ಮಹಾತಾಯಿ, ಹಡೆದ ಕರುಳನ್ನು ಕಳೆದುಕೊಂಡವರು ಮಿಡುಕುವಂತೆ ಅಣ್ಣಾಜಿಗಾಗಿ ಮಿಡುಕಿದರು; ಬಿಕ್ಕಿ ಬಿಕ್ಕಿ ಅಳಲು ತೊಡಗಿದರು. ಚೆನ್ನಾಗಿ ಹುಡುಕಿ ನೋಡಿ ಯಾವ ಸಂಗತಿಯನ್ನೂ ಬೇಗನೆ ಬಂದು ತಮಗೆ ತಿಳುಹುವಂತೆ ಮತ್ತೆ ಮತ್ತೆ ನನಗೆ ಹೇಳಿದರು."

ದಿಲಾವರ್‌ಖಾನನು ಮತ್ತೆ ಮೌನವನ್ನು ತಳೆದು, ಶೂನ್ಯದೃಷ್ಟಿಯವನಾಗಿ ನಿಂತನು. "ಕುಳಿತುಕೊಳ್ಳಬೇಕು ಬುದ್ಧೀ" ಎಂದು ಹೇಳಿದ ಚಿಕ್ಕಣ್ಣನ ಮಾತು ಆತನ ಕಿವಿದೆರೆಯನ್ನು ಹೊಕ್ಕಂತೆ ಕಾಣಲಿಲ್ಲ. ಒಂದೆರಡು ನಿಮಿಷಗಳಾದ ಮೇಲೆ ಮತ್ತೆ ಚಿಕ್ಕಣ್ಣನನ್ನು ಕೇಳಿದನು :

"ಮಿಕ್ಕವರೆಲ್ಲರೂ ಎಲ್ಲಿ ಇದ್ದಾರೆ?"

"ಅಣ್ಣಾಜಿಯವರ ಶೋಧಕ್ಕಾಗಿ ಎಲ್ಲೆಲ್ಲಿಯೊ ಅಲೆಯುತ್ತ ಹೋಗಿದ್ದಾರೆ. ನಾನೊಬ್ಬ ಇಲ್ಲಿ ಮನೆಕಾಯುತ್ತ ಬಿದ್ದುಕೊಂಡಿದ್ದೇನೆ."

"ಸರಿ! ಯೋಚನೆಯನ್ನೇನೂ ಮಾಡಬೇಡಿರಿ! ನಾನೂ ಅವರ ಶೋಧಕ್ಕೆ ತೊಡಗುತ್ತೇನೆ. ಈ ದಿನ ವಿಶೇಷವಾದ ಕೆಲಸಗಳಿರುವುದರಿಂದ ಸಂಜೆಗೆ ನನಗೆ ಬರಲಾಗುವುದಿಲ್ಲ. ನಾಳೆಯ ಬೆಳಗಿನಲ್ಲಿಯೆ ಇಲ್ಲಿಗೆ ಬರುತ್ತೇನೆ. ಆಗ ಅಣ್ಣಾಜಿಯವರ ಬಗೆಗೆ ಏನಾದರೂ ವರ್ತಮಾನವನ್ನು ತಂದೇ ತರುತ್ತೇನೆ. ಈಗ ಅವರ ಬಳಿ ತುಂಬ ಕೆಲಸವಿದ್ದಿತು; ಮಾತ ನಾಡಿಕೊಂಡು ಹೋಗಬೇಕೆಂದು ಆತುರದಿಂದ ಇಲ್ಲಿಗೆ ಬಂದರೆ, ಇಲ್ಲಿ ಎಲ್ಲವೂ ತಲೆಕೆಳಗು. ನಮ್ಮ ಕಾರ್ಯಕ್ಕೆ ಫಲ ಏನಿದೆಯೋ ಏನೋ! ಇರಲಿ ಚಿಕ್ಕಣ್ಣಾ! ಎಲ್ಲರೂ ಧೈರ್ಯವಾಗಿ ಇರಿ! ನಾನು ನಾಳೆಗೆ ಮತ್ತೆ ಬರುತ್ತೇನೆ."

ಒಂದರ್ಧ ಮಾತು ಚಿಕ್ಕಣ್ಣನೊಡನೆ, ಒಂದೆರಡು ಮಾತು ತನಗೆ ತಾನೆ–ಮಾತನಾಡಿ, ದಿಲಾವರ್‌ಖಾನನು ಮರಳಿ ನಡೆದನು. ಆತನನ್ನು ಅನುಸರಿಸಿ ಚಿಕ್ಕಣ್ಣನೂ ಹೊರಟನು. ಮುಂಬಾಗಿಲನ್ನು ದಾಟುತ್ತಿ ರುವಾಗಲೆ ತೋಟಗಾರರ ಹುಡುಗರು ಮೂರು-ನಾಲ್ಕು ಜನರು, ಓಡುತ್ತ ಓಡುತ್ತ ದಿಲಾವರ್‌ಖಾನನನ್ನು ಬಳಿಸಾರಿದರು. ಎಲ್ಲ ಹುಡುಗರ ಮುಖದಲ್ಲಿಯೂ ತಾಯನ್ನಗಲಿದಾಗಿನ ಕಳವಳದ ಭಾವ ಮೂಡಿ ಕೊಂಡಿದ್ದಿತು. ದಿಲಾವರ್‌ಖಾನನ ಮುಖದ ಪರಿಚಯ ಎಲ್ಲ ಹುಡುಗರಿಗೂ ಆಗಿದ್ದಿತು. ಅವರು ಒಬ್ಬೊಬ್ಬರೂ ಒಂದೊಂದು ಪ್ರಶ್ನೆ ಕೇಳಿದರು :

"ಅನ್ನಾಜಿ ಯಾವಾಗ ಬತ್ತಾರೆ?"

"ಎಲ್ಲಿಗೆ ಹೋಗಿದ್ದಾರೆ ಅಣ್ಣಾಜಿ?"

"ನಿಮ್ಮ ಮನೇಲಿ ಇದ್ದಾರೇನು?"

"ಅನ್ನಾಜಿಯ ಬಲಿಗೆ ನಮ್ಮನ್ನೂ ಕಲಕೊಂಡು ಹೋಗತೀರಾ?"

ಹುಡುಗರ ಮಾತು ದಿಲಾವರ್‌ಖಾನನ ಮನಸ್ಸನ್ನು ಮತ್ತಷ್ಟು ಕಲಕಿತು. ಅದನ್ನು ಹೊರಕ್ಕೆ ತೋರಗೊಡದೆ, ಒತ್ತಾಯದ ಮೆಲುನಗೆ ನಗುತ್ತ, ಸಲುಗೆಯ ಮಾತಿನಲ್ಲಿ ಅವನು ಹುಡುಗರಿಗೆ ಹೇಳಿದನು :

"ನಾಳೆಗೆ ಅಣ್ಣಾಜಿಯವರನ್ನು ಇಲ್ಲಿಗೇ ಕರೆದುಕೊಂಡು ಬರುತ್ತೇನೆ; ತಿಳಿಯತೇ?"

"ಹೋ! ನಾಲೆ ಅನ್ನಾಜಿ ಬತ್ತಾರಂತೆ! ಹೋ!"

ಹುಡುಗರೆಲ್ಲರೂ ಹಿಗ್ಗಿನಿಂದ ಚಪ್ಪಳೆಯಿಕ್ಕುತ್ತ ಕೂಗಿದರು. ಅದನ್ನು ನೋಡಿದ ದಿಲಾವರ್‌ಖಾನನ ಹೃದಯವು ಅರಳಿ, ಮೈ ಜುಮ್ಮೆಂದಿತು. ಏನೋ ಒಂದು ಬಗೆಯ ಹೆಮ್ಮೆಯಿಂದ ಮನಸ್ಸು ಚೇತರಿಸಿಕೊಂಡಂತಾಯಿತು. ಉಪವನದ ಸುತ್ತುಗೋಡೆಯ ಬಾಗಿಲನ್ನು ದಾಟಿ, ಒತ್ತರದಿಂದ ಅಡಿಯಿಡುತ್ತ ಆತನು ಹೊರಟುಬಿಟ್ಟನು.

---

## ೧೯ನೆಯ ಪರಿಚ್ಛೇದ

ಅದೇ ದಿನದ ಸೂರ್ಯ ಪಡುವಣ ನಿಟ್ಟಿನ ಬಾನಲ್ಲಿ ಮೂರೆರಡು ಮಾರಿನಿಂದ ಮೇಲಕ್ಕೆ ನಿಂತುಕೊಂಡಿದ್ದಾನೆ. ವಿರೂಪಾಕ್ಷರಾಯನು, ಸಂಜೆಯ ಕುದುರೆಯೇರಾಟದ ಸಮಯ ಸಮೀಪಕ್ಕೆ ಬಂದಿದ್ದರೂ ಅದರ ಎಚ್ಚರವಿಲ್ಲದೆ—ವಿಶ್ರಾಂತಿಭವನದಲ್ಲಿ ಮೆತ್ತನೆಯ ತಕ್ಕೆಗೆ ಒರಗಿ—ಬಿದ್ದುಕೊಂಡಿದ್ದಾನೆ. ತಲೆಯಲ್ಲಿ ಒಂದರ ಹಿಂದೊಂದು ಭಾವನೆಗಳು ಬಂದು ಬಂದು, ಆಶೆ-ನಿರಾಶೆ, ತೃಪ್ತಿ-ಅತೃಪ್ತಿ, ಸಂತೋಷ-ಕ್ರೋಧ, ಸಮಾಧಾನ-ಜುಗುಪ್ಸೆ ಮೊದಲಾದ ಭಾವಗಳ ಪಡಿನೆಳಲನ್ನು ಮುಖದಲ್ಲಿ ಮೂಡಿಸುತ್ತಲಿವೆ.

ವಿರೂಪಾಕ್ಷರಾಯನು ಒಂದೊಂದು ಸಲ ಹೇಮಾಂಬಿಕೆಯನ್ನು ಕುರಿತು ವಿಚಾರಿಸುವನು :

"ತುಂಬ ಗಡುಸಿನ ಹೆಣ್ಣು; ಆದರೆ ಅಂತಹ ಹೆಣ್ಣನ್ನು ಒಲಿಸಿ ಆಳುವುದರಲ್ಲಿಯೆ ನನ್ನ ಗಂಡುತನದ ಸಾರ್ಥಕತೆ. ಅಹಹ! ಅವಳದೊಂದು, ಒಂದೇ ಒಂದು ಒಲವಿನ ನೋಟ ನನ್ನ ಮೈಯನ್ನು ಸೋಂಕಿದರೆ, ಅದರ ಎದುರು ಇನ್ನುಳಿದ ಸುಖಗಳೆಲ್ಲವೂ ಕಾಲುಕಸ. ಆದರೆ ಬಯಸಿದಾಗ ಬೇಡಿದುದನ್ನು ಪಡೆಯುವ ಸಾಮರ್ಥ್ಯವುಳ್ಳ ಈ ವಿರೂಪಾಕ್ಷರಾಯನಿಗೆ ಹೇಮಾಂಬಿಕೆಯ ಒಂದು ಸಲದ ಒಲವಿನ ನೋಟವೂ ಮುಗಿಲು ಮಲ್ಲಿಗೆಯಾಗಿ ಪರಿಣಮಿಸಿದೆಯಲ್ಲಾ!"

ಹೇಮಾಂಬಿಕೆಯ ನೆನಪಿನೊಡನೆಯೆ ನರಸಿಂಹನಾಯಕನು ದೃಷ್ಟಿಗೆ ಕಾಣಲು, ಅವನನ್ನು ಕುರಿತು ಆಲೋಚಿಸುವನು :

" ನರಸಿಂಹನಾಯಕನನ್ನು ನಾನು ಮರಳಿ ಕರೆಯಿಸಬೇಕೆಂದು ಹೇಮಾಂಬಿಕೆ ಹೇಳುವಳು. ಕರೆಯಿಸಿ ನೋಡಬಹುದೇ....? ಆತನು ಪ್ರತ್ಯಕ್ಷವಾಗಿ ನನಗೇನು ಕೆಡುಕು ಮಾಡಿದ್ದಾನೆ? 'ಸಾಮ್ರಾಜ್ಯ' 'ಸಾಮ್ರಾಜ್ಯ' ಎಂಬ ಹುಚ್ಚಿನಿಂದ ಕೆಲವು ಸಲ ನನ್ನ ಮಾತನ್ನು ನಡೆಯಿಸದೆ ಹೋಗಿದ್ದಾನೆ.. ಇಷ್ಟೇ! ಆತನನ್ನು ಕರೆಯಿಸುವುದರಿಂದ ಹೇಮಾಂಬಿಕೆ ನನ್ನವಳಾಗುತ್ತಿದ್ದರೆ, ನಾನೇತಕ್ಕೆ ಕರೆಯಿಸಿ ಬಿಡಬಾರದು! ಆದರೆ ಆತನು ಇಲ್ಲಿಗೆ ಬಂದು, ರಾಜಶೇಖರನ ಮೇಲಿನ ಅಭಿಮಾನದಿಂದ ನನಗೆ ವಿರೋಧಿಯಾಗಿ ವರ್ತಿಸಲು ತೊಡಗಿದರೆ..! ಹೇಮಾಂಬಿಕೆಗೂ ರಾಜಶೇಖರನಲ್ಲಿ ಎಲ್ಲಿಯೂ ಇಲ್ಲದಷ್ಟು ವಿಶ್ವಾಸ ......ಸರಿ....! ಮೊದಲು ರಾಜಶೇಖರನನ್ನು ಜಗತ್ತಿನಲ್ಲಿ ಇಲ್ಲದಂತೆ ಮಾಡಬೇಕು ; ಆ ಮೇಲೆ ನರಸಿಂಹನಾಯಕನನ್ನು ಕರೆಯಿಸಿಕೊಳ್ಳಬೇಕು. ಬೇಟೆಯು ಹೇಗೂ ಬಲೆಯಲ್ಲಿ ಬಂದು ಸಿಕ್ಕಿಕೊಂಡಿದೆ. ಸಂದರ್ಭವು ನನಗೆ ಅನುಕೂಲವಾಗಿದೆ. ನರಸಿಂಹನಾಯಕನನ್ನು ಕರೆಯಿಸಿಕೊಂಡರೆ, ಆತನ ನೊಂದ ಮನಸ್ಸು ಮತ್ತೆ ನೇರವಾಗಬಹುದು ; ನನಗೆ ವಿರೋಧಿಯಾಗಿ ನಾಡಿನಲ್ಲಿ ನಡೆಯಿಸಿದ್ದ ಚಟುವಟಿಕೆಯನ್ನೂ ನಿಲ್ಲಿಸಿಬಿಡಬಹುದು. ನನಗೆ ಬರಲಿರುವ ಗಂಡಾಂತರವು ತಪ್ಪಿ, ನಾನು ಹೇಮಾಂಬಿಕೆಯೊಂದಿಗೆ ಹಾಯಾಗಿ ಇರಬಹುದು. ಅಹುದು! ನಾನೀಗ ಹೀಗೆಯೆ ಮಾಡಬೇಕು! ಈಗಲೆ ಹೋಗಿ ಹೇಮಾಂಬಿಕೆಗೆ ಈ ಮಾತನ್ನು ಹೇಳಿ ಬಿಡಲೇ? ನಾನು ಹೇಳಿದೊಡನೆಯೆ ಆಕೆ ತನ್ನ ಮೆಲುನಗೆಯ ನೋಟವನ್ನು ನನ್ನ ಕಡೆಗೆ ಖಂಡಿತವಾಗಿಯೂ ಬೀರಬಹುದಲ್ಲವೆ?"

ವಿರೂಪಾಕ್ಷರಾಯನು ಉತ್ಸಾಹದ ಭರದಲ್ಲಿ ಎದ್ದು ಕುಳಿತು, ತನಗೆ ತಾನೇ ಗಟ್ಟಿಯಾಗಿ ನುಡಿದನು:

" ನಾನೀಗ ಅಲ್ಲಿಗೆ ಹೋಗಲೇ ಬೇಕು!"

ರಾಯನು ತನ್ನ ಕೈಯಾಳನ್ನು ಕೂಗಿ ಕರೆಯಬೇಕೆಂಬ ಹವಣಿಕೆಯಲ್ಲಿದ್ದ. ಇದ್ದುದಿದ್ದ ಹಾಗೆಯೆ ಬಾಗಿಲಾಳು ಒಳಕ್ಕೆ ಬಂದು ಪೊಡಮಟ್ಟು,

ವಿನಯದಿಂದ ಕೈಮುಗಿದು ನಿಂತುಕೊಂಡ. ವಿರೂಪಾಕ್ಷರಾಯನು ಬಾಗಿಲಾಳನ್ನು ಕೇಳಿದ :

" ಇನ್ನೇನು ಸಮಾಚಾರ ? "

" ಹೊಸತಾಗಿ ಬಂದಿದ್ದ ನರ್ತಕಿಯರ ಕಡೆಯಿಂದ ಯಾರೋ ಇಬ್ಬರು ಬಂದಿದ್ದಾರೆ. ಸನ್ನಿಧಿಯನ್ನು ಆವಶ್ಯಕವಾಗಿ ಕಾಣಲೇ ಬೇಕೆಂದು ಹೇಳುತ್ತಿದ್ದಾರೆ. "

ರಾಯನು ಕೆಲವು ವೇಳೆ ಕೆಳನೋಟದಿಂದ ಸುಮ್ಮಗೆ ಕುಳಿತು, ಆಲೋಚಿಸಿದಂತೆ ಮಾಡಿದ ; ಬಳಿಕ ಕೇಳಿದ :

" ಈಗೇತಕ್ಕೆ ಬಂದಿದ್ದಾರೊ ! ಅವರನ್ನು ಒಳಕ್ಕೆ ಬರುವಂತೆ ಹೇಳು ! "

ಬಾಗಿಲಾಳು ಮತ್ತೊಂದು ಸಲ ಮಣಿದು ಮರಳಿ ಹೋದ. ಹೊಸತಾಗಿ ಬಂದಿದ್ದ ನರ್ತಕಿಯರ ಪಕ್ಕವಾದ್ಯದವರಾದ ಖೋಜಾಗಳಿಬ್ಬರು ಒಳಕ್ಕೆ ಬಂದು, ತಮ್ಮ ಸಂಪ್ರದಾಯದಂತೆ ರಾಯನಿಗೆ ಸಲ್ಲಾಂ ಮಾಡಿದರು. ರಾಯನು ಅವರಿಗೆ ಹಾಸುಗೆಯ ಮೇಲೆ ಕುಳಿತುಕೊಳ್ಳುವಂತೆ ಸೂಚಿಸಿ ಮುಂದೆ ಕೇಳಿದ :

" ಇದೇನು ? ನೀವು ಈಗೇತಕ್ಕೆ ಬಂದಿದ್ದೀರಿ ? "

ಇಬ್ಬರಲ್ಲಿಯ ಒಬ್ಬನು ಮಾರುಹೇಳಿದ :

" ಹೀಗೆಯೆ ಬಂದು ಬಿಟ್ಟೆವು ಸರಕಾರ್ ! ನಾಷೀರ್ ಮುಹಮ್ಮದ್ ಖಾನರ ಮನೆಗೆ ನಮ್ಮನ್ನು ಕರೆಯಿಸಿದ್ದರು ; ಅಲ್ಲಿಂದ ಕೆಲಸ ಮುಗಿಸಿಕೊಂಡು ಹೊರಟವರು, ಹುಜೂರನ್ನು ಕಾಣಬೇಕೆಂಬ ಆಶೆಯಿಂದ ಇಲ್ಲಿಗೆ ಬಂದೆವು. "

" ನಾಷೀರ್‌ಮುಹಮ್ಮದ ಖಾನರಲ್ಲಿ ಏನು ಕೆಲಸ ನಿಮಗೆ ? "

"ಅವರ ಮಗಳು ರೋಷ್‌ನಾರ್‌ಬೀ ಇಲ್ಲವೇ ? ಅವರು ದಿಲ್‌ರುಬಾ ನುಡಿಸಿದರು; ಜೊತೆಗೆ ಬಾರಿಸುವುದಕ್ಕಾಗಿ ನಮ್ಮನ್ನು ಕರೆಯಿಸಿದ್ದರು."

" ಅವಳು ದಿಲ್‌ರುಬಾ ನುಡಿಸುತ್ತಾಳೆಯೆ ? ನನಗೆ ಗೊತ್ತೇ ಇಲ್ಲವಲ್ಲ ! "

“ಅದನ್ನೇನು ಹೇಳುವುದಿದೆ ಸರಕಾರ್! ಅವರ ಹಾಗೆ ದಿಲ್‌ರುಬಾ ನುಡಿಸುವವರು ನಮ್ಮ ದಖನ್ನಿನ ರಾಜ್ಯದಲ್ಲಿ ಯಾರು ಇದ್ದಾರೆ? ಬಲು ಇಂಪಾಗಿ ನುಡಿಸುತ್ತಾರೆ! ಯಾಕೆ ಇಬ್ರಾಹಿಮ್?”

“ದಖನ್ನಿನಲ್ಲಿ ಅಷ್ಟೇ ಏಕೆ? ಇಡಿ ಹಿಂದೂಸ್ತಾನದಲ್ಲಿ ಯಾರು ಇದ್ದಾರೆ?.. ಎಂದು ನಾನು ಕೇಳುತ್ತೇನೆ!”

ಮಹಾರಾಜನು ಆಶೆಯ ದನಿಯಲ್ಲಿ ಕೇಳಿದನು :

“ಹೀಗೆಯೇನು? ಆಕೆಯ ಮದುವೆಯಾಗಿದೆಯೇನು?”

“ಇನ್ನೂ ಎಲ್ಲಿಯ ಮದುವೆ ಸರಕಾರ್! ಅಂತಹ ಹೆಣ್ಣಿನ ಕೈ ಹಿಡಿಯುವ ಯೋಗ್ಯತೆ ಯಾರಿಗಿದೆ? ರೋಷನಾರ್‌ಬೀಯನ್ನು ಮದುವೆ ಯಾಗುವ ಗಂಡುಸೆಂದರೆ ಅವನು ಖುದಾನ ಮಗನಾಗಿಯೇ ಇರಬೇಕು!”

ವಿರೂಪಾಕ್ಷರಾಯನು ಇನ್ನಿಷ್ಟು ಮನಸ್ಸು ಸೋತವನಾಗಿ ಕೇಳಿದನು :

“ಆಕೆ ತುಂಬ ಚೆಲುವೆಯಾಗಿದ್ದಾಳೆಯೆ?”

“ಅದನ್ನೇನು ಹೇಳುವುದಿದೆ ಸರಕಾರ್! ಚೆಲುವೆಯೆಂದರೆ ಅವಳೇ ಚೆಲುವೆ. ಆಕೆಯಂತಹ ಚೆಲುವೆಯರು ನಿಮ್ಮ ಹಿಂದೂಮಂದಿಯಲ್ಲಿ ಕೂಡ ಸಿಕ್ಕಲಿಕ್ಕಿಲ್ಲ ಹುಜೂರ್!”

ವಿರೂಪಾಕ್ಷರಾಯನು ಭ್ರಾಂತನಾದವನಂತೆ ಸುಮ್ಮಗೆ ಕುಳಿತು ಕೊಂಡ. ನೋಟಗಳು ಒಳಕ್ಕೆ ತಿರುಗಿ ಏನೇನನೋ ನೋಡಲು ತೊಡಗಿ ದುವು. ಅಲ್ಲಾಡುತ್ತಿರುವ ತಲೆಯು ಯಾವುದೋ ಮಾತನ್ನು ನಿರ್ಣಯಿ ಸುತ್ತಿರುವಂತೆ ತೋರುತ್ತಿದ್ದಿತು. ಖೋಜಾಗಳಿಬ್ಬರೂ ಕಣ್ಣುಗಳಿಂದ ಮಾತ್ರ ತಮ್ಮ ತಮ್ಮಲ್ಲಿ ಏನೋ ಸಮಾಧಾನದ ಮೂಗುನುಡಿಯನ್ನು ಆಡಿಕೊಂಡರು. ಬಳಿಕ ಇಬ್ರಾಹಿಮನೆಂಬುವವನು ವಿನಯದ ದನಿಯಲ್ಲಿ ಸಂಬೋಧಿಸಿದ :

“ಸರಕಾರ್!”

ನಿಧಾನವಾಗಿ ನೋಟಗಳನ್ನು ಹೊರಕ್ಕೆ ಹೊರಳಿಸಿ ರಾಯನು ಕೇಳಿದ :

" ಇನ್ನೇನು ? "

" ಏನೂ ಇಲ್ಲ ಹುಜೂರ್ ! ನಮಗೆ ದೊರೆಯುತ್ತಿರುವ ಸಂಬಳವನ್ನು ಇನ್ನಿಷ್ಟು ಹೆಚ್ಚಿಸಬೇಕೆಂದು ಅರಿಕೆಮಾಡಿಕೊಳ್ಳುವುದಕ್ಕೆ ಪಾದದ ಬಳಿಗೆ ಬಂದಿದ್ದೇವೆ. "

ಯೋಚನೆಯ ಜಡವಾದ ನುಡಿಯಲ್ಲಿ ರಾಯನು ಹೇಳಿದ :

" ದಂಡನಾಯಕರೊಂದಿಗೆ ಮಾತನಾಡುತ್ತೇನೆ; ಅವಶ್ಯವಾಗಿ ಹೆಚ್ಚಿಸುವ ವಿಚಾರವನ್ನು ಮಾಡುತ್ತೇನೆ. ಈಗ ನೀವು ಹೊರಡಬಹುದು. "

ಬಂದವರಿಬ್ಬರೂ ಹೊರಟು ನಡೆದರು. ಯೋಚನೆಯಲ್ಲಿಯೆ ಬಿದ್ದು-ಕೊಂಡುಬಿಟ್ಟಿದ್ದ ವಿರೂಪಾಕ್ಷರಾಯನ ಮೈಗೆ, ಅಂದು ವಿಶ್ರಾಂತಿ-ಭವನದ ಹೊರಗಿನ ಗಾಳಿ ಕೂಡ ಸೋಂಕಿರಲಾರದೆಂದು ಎನಿಸುವುದು.

---

## ೨೦ನೆಯ ಪರಿಚ್ಛೇದ

ಮಾನವನ ಆಶೆಯನ್ನು ಆಟವಾಡಿಸುವುದಕ್ಕಾಗಿ ನಿಸರ್ಗವು ಕಣ್ಣು-ಮನಗಳನ್ನೆಳೆಯುವ ಮೋಹಕವಾದ ಹಲವು ಬಲೆಗಳನ್ನು ಹರಡಿ ಇಟ್ಟಿರುವುದು. ಒಂದು ಬಲೆಯಲ್ಲಿ ಸಿಲುಕಿ ತೊಡಕಾಡುತ್ತಿರುವಾಗಲೆ ಇನ್ನೊಂದು ಬಲೆಯ ಸೊಬಗನ್ನು ಕಾಣುವುದು ಮನಸ್ಸು; ಮೊದಲಿನ ಬಲೆಯೊಡನೆಯೆ ಅದರೊಳಕ್ಕೆ ಹಾರಲು ಹವಣಿಸುವುದು. ಹಾಗೆಯೆ ಹಾರಿ ಇನ್ನೊಂದು ತೊಡಕನ್ನು ಮೈಗೆ ಸುತ್ತಿಕೊಳ್ಳುವುದು. ಹೀಗೆಯೆ ಒಂದರ ಹಿಂದೆ ಒಂದರಂತೆ ತೊಡಕನ್ನು ಸುತ್ತಿಕೊಂಡು, ಮಾನವನ ಮನಸ್ಸು ಅತೃಪ್ತಿ-ಅಶಾಂತಿಗಳ ಆವಾಸವಾಗಿಬಿಡುವುದು.

ರಾತ್ರಿಯ ಒಂದು ಪ್ರಹರ ಕಳೆದಿರಬಹುದು; ಈ ದಿನದ ಇಳಿಯ ಹೊತ್ತಿನಲ್ಲಿ ಕುಳಿತಿದ್ದ ಸ್ಥಳದಲ್ಲಿಯೆ ವಿರೂಪಾಕ್ಷರಾಯನು ಕುಳಿತು ಕೊಂಡು, ಆತುರಭಾವದವನಾಗಿ ಯಾರದೊ ದಾರಿಯನ್ನು ಕಾಯುತ್ತಿದ್ದಾನೆ. ಏನನ್ನೊ ನೆನೆದುಕೊಳ್ಳುತ್ತಿರುವುದರಿಂದಲೇನೊ, ನಡುನಡುವೆ

ಎದೆಯು ದಡದಡನೆ ಬಡಿದುಕೊಳ್ಳುತ್ತಲಿದೆ. ರಾಯನ ಕಣ್ಣನೋಟದ ಶಕ್ತಿಯೆಲ್ಲ ಮುಂಬಾಗಿಲ ಕಡೆಗೆ ಒಟ್ಟುಗೂಡಿದೆ. ಜಕ್ಕನು ಗಡಬಡಿ ಯಿಂದ ಬಂದು ಬಿನ್ನವಿಸಿದನು:

"ನಾಸೀರ್‌ಖಾನರು ಬಂದುಬಿಟ್ಟರು ಮಹಾರಾಜ!"

ರಾಯನು ಹಿಗ್ಗು-ಗಾಬರಿಗಳೆರಡನ್ನೂ ಅನುಭವಿಸುತ್ತ ನೇರವಾಗಿ ಕುಳಿತುಕೊಂಡನು. ನಾಸೀರ್‌ಖಾನನು ಒಳಕ್ಕೆ ಬಂದೊಡನೆಯೆ, ದಿನಕ್ಕಿಂತಲೂ ವಿಶೇಷವಾದ ದಾಕ್ಷಿಣ್ಯಭಾವವನ್ನು ತೋರಿ ಆದರಿಸಿ ಕುಳ್ಳಿರಿಸಿದನು. ರಾಯನ ಸೂಚನೆಯಂತೆ ಜಕ್ಕನು ಹೊರಕ್ಕೆ ಹೊರಟು ಬಿಟ್ಟನು. ನಡುವೇಳೆ ಇಬ್ಬರಲ್ಲಿಯೂ ಮಾತಿಲ್ಲ; ಒಬ್ಬರನ್ನೊಬ್ಬರು ತೆರೆದ ಕಣ್ಣುಗಳಿಂದ ನೋಡುತ್ತ ಸುಮ್ಮಗೆ ಕುಳಿತುಕೊಂಡಿದ್ದರು. ಮೂರು-ನಾಲ್ಕು ನಿಮಿಷಗಳು ಕಳೆದ ಬಳಿಕ ನಾಸೀರನೇ ಮಾತಿಗೆ ಮೊದಲು ಮಾಡಿದನು:

"ಮಹಾರಾಜರು ಇಷ್ಟೊಂದು ಅವಸರದಿಂದ ಕರೆಯಿಸಿಕೊಂಡುದು ಏತಕ್ಕೆ? ಮತ್ತೇನಾದರೂ ಹೆಚ್ಚಿನ ಕಾರ್ಯಭಾರಗಳೇನು?"

ಸಂಕೋಚಭಾವದಿಂದ ರಾಯನು ನುಡಿದನು:

"ನಾಸೀರ್‌ಖಾನ್, ನಾನು ನಿಮ್ಮನ್ನು ತೀರ ಹತ್ತಿರದ ಆಪ್ತ ರೆಂದು ತಿಳಿದುಕೊಂಡಿದ್ದೇನೆ."

"ನಾನದನ್ನು ಒಪ್ಪದೆ ಇರುವೆನೇನು ಸರಕಾರ್? ಎಂತಲೆ ತಮಗಾಗಿ ಎಂತಹ ಕೆಲಸವನ್ನು ಮಾಡಲಿಕ್ಕೂ ಯಾವಾಗಲೂ ಸಿದ್ಧ ನಾಗಿರುವೆನು. ನಮ್ಮ ಇಸ್ಲಾಂ ಮತವು ನಿಮಕ್‌ಹರಾಮರನ್ನು ಎಂದೂ ಹೆರುವುದಿಲ್ಲ ಮಹಾರಾಜ!"

ಅರೆನಿಮಿಷ ಸುಮ್ಮಗಿದ್ದು, ವಿರೂಪಾಕ್ಷರಾಯನು ಒಂದು ಬಗೆಯ ಮೆಲುನಗೆ ತಂದುಕೊಂಡು, ಆಶೆ-ಆತುರದ ದನಿಯಲ್ಲಿ ಕೇಳಿದನು:

"ನನಗಾಗಿ ಎಂತಹ ಕೆಲಸವನ್ನು ಮಾಡಲಿಕ್ಕೂ ಸಿದ್ಧರಿದ್ದೀರಾ ಹಾಗಾದರೆ?"

"ಬೇ–ಲಾಷಕ್! ಇದರಲ್ಲಿ ತಮಗೆ ಸಂಶಯವೇ?"

"ಸರಿ! ಆಗಬಹುದು! ಆದರೆ.. 'ಕೂಡದು' ಎಂಬ ಉತ್ತರವನ್ನು ಹೇಳುವುದಾದಲ್ಲಿ ಎಚ್ಚರಿಕೆಯಿಂದ ಹೇಳಬೇಕು. ಇದು ವಿರೂಪಾಕ್ಷರಾಯನ ನಿರಂಕುಶವಾದ ರಾಜ್ಯ! ಆತನ ಅಸಂತುಷ್ಟಿಗೆ ಕಾರಣರಾದವರು ವಿಜಯನಗರದಲ್ಲಿ ಅಷ್ಟೇ ಅಲ್ಲ, ಪ್ರಪಂಚದಲ್ಲಿಯೆ ಇಲ್ಲದಂತಾಗಬೇಕಾದೀತು!"

ವಿವೇಕವನ್ನು ಉಪಯೋಗಿಸಿಕೊಳ್ಳದಿದ್ದರೆ ನಾಷೀರ್‌ಖಾನನ ಕ್ರೋಧವು ಕರಕರನೆಂದು ಹಲ್ಲುಕಚ್ಚಿಸಿಬಿಡುತ್ತಿದ್ದಿತು. ಆತನು ರಾಯನ ಕಡೆಗೆ ಬಿರುನೋಟದಿಂದ ನೋಡುತ್ತ, ವಿಚಿತ್ರವಾದ ನಗೆಯೊಂದನ್ನು ನಕ್ಕು ನುಡಿದನು:

"ತಮಗೆ ವಿರೋಧಿಗಳಾಗಿ ಬದುಕುವೆನೆನ್ನುವ ಎದೆ ಯಾರಿಗಿದೆ ಮಹಾರಾಜ? ನಾನಿನ್ನು ಹೊರಡುತ್ತೇನೆ. ನಾಳೆಯ ದಿನ ನಿಶ್ಚಯವಾಗಿಯೂ ತಮ್ಮನ್ನು ಕಂಡು ಒಳ್ಳೆಯ ವಾರ್ತೆಯನ್ನು ತಿಳಿಸುತ್ತೇನೆ."

"ಸರಿ! ಹೊರಡಬಹುದು!"

ನಾಷೀರ್‌ಖಾನನು ಗೆಲುವಿನ ನಡಿಗೆಯಲ್ಲಿ ಹೊರಟುಬಿಟ್ಟನು. ವಿರೂಪಾಕ್ಷರಾಯನು ಆಶೆ-ನಿರಾಶೆಯ ಸೇರುಗಳನ್ನು ಅಳೆದು ಬಳಚುತ್ತ, ಕ್ಷಣಗಳನ್ನು ಒಂದೊಂದಾಗಿ ನೂಕುತ್ತ, ಕುಳಿತಲ್ಲಿಯೆ ಬಿದ್ದುಕೊಂಡಿದ್ದನು. ಆಗ ಆತನ ಮನಸ್ಸಿನಿಂದ ಹೇಮಾಂಬಿಕೆ ಮರೆಯಾಗಿಬಿಟ್ಟಿದ್ದಳು.

---

## ೨೧ನೆಯ ಪರಿಚ್ಛೇದ

ರಾತ್ರಿಯ ಮೂರನೆಯ ಪ್ರಹರದ ಮಧ್ಯಕಾಲ; ಬೆಳುದಿಂಗಳ ರಾತ್ರಿಯಾದರೂ ಪಶ್ಚಿಮದ ಕ್ಷಿತಿಜವನ್ನು ಸಮೀಪಿಸಿ ಹೊರಟಿದ್ದ ಏಕಾದಶಿಯ ಚಂದ್ರನು ಬೂದುಬಣ್ಣದ ಮೋಡದ ರಾಶಿಯಲ್ಲಿ ಮರೆಯಾಗಿ ಹೋಗಿದ್ದಾನೆ, ವಿಜಯನಗರದ ಸುತ್ತಣ ಕಾಡು-ಮೇಡುಗಳಲ್ಲೆಲ್ಲ ಮಂಜುಗತ್ತಲೆಯು ಹಾಸಿಕೊಂಡು ಮಲಗಿ ನಿದ್ರಿಸುತ್ತಲಿದೆ.

ವಿಜಯನಗರದಿಂದ ಕಲಬುರ್ಗಿಗೆ ಹೋಗಬೇಕಾದ ದಾರಿಯು, ಆನೆಗೊಂದೆಯನ್ನು ದಾಟಿದ ಮೇಲೆ, ಎರಡು ಮೂರು ಗಾವುದಗಳ ವರೆಗೂ ಕಗ್ಗಾಡಿನಲ್ಲಿಯೆ ಹೋಗಿರುವುದು. ಕಾಡಿನ ದಟ್ಟವಾದ ಮರಗಳ ಕಗ್ಗತ್ತಲೆಯು, ಎಂತಹ ಚುರುಕುನೋಟದವರಿಗೂ ಸರಿಯಾದ ದಾರಿ ಕಾಣದಂತೆ ಮಾಡಿಬಿಟ್ಟಿದೆ. ಆಗ ದಾರಿಯನ್ನು ನಡೆಯಬೇಕಾಗಿದ್ದವರು, ಕುರುಡನಂತೆ ಕೇವಲ ಅಡಿಗಳ ಸ್ಪರ್ಶಜ್ಞಾನದ ಉಪಯೋಗವನ್ನೇ ಹೆಚ್ಚಾಗಿ ಮಾಡಿಕೊಳ್ಳಬೇಕಾಗಿದ್ದಿತು. ಆನೆಗೊಂದೆಯ ಗಡಿಯ ಕಾವಲಿನ ಕಟ್ಟೆಯಲ್ಲಿ ಮಿಣುಕುತ್ತ ಉರಿಯುತ್ತಿದ್ದ ಹರಳೆಣ್ಣೆಯ ಸೊಡರೊಂದನ್ನು ದಾಟಿಹೋದರೆ, ಅದಕ್ಕೆ ಮುಂದೆ ಹೊನ್ನೆಹುಳುಗಳ ಬೆಳಕೇ ಬೆಳಕು. ದಾರಿಯ ಎರಡೂ ಪಕ್ಕದ ಹೆಮ್ಮರಗಳ ಬುಡದ ತರಗೆಲೆಗಳ ರಾಶಿಯಲ್ಲಿ ಹುಳು-ಹುಪ್ಪಡಿಗಳು ತಿರುಗಾಡಿ, ಸರಸರನೆಂದು ಸಪ್ಪುಳಮಾಡಿ, ಎಂತಹ ಕಲ್ಲೆದೆಯ ದಾರಿಗರನ್ನೂ ಬೆಚ್ಚಿಬೀಳುವಂತೆ ಮಾಡುವುವು; ಆದರೆ ಅಷ್ಟೊಂದು ರಾತ್ರಿಯಾಗಿರುವಾಗ, ದಾರಿನಡೆಯುವ ದಾರಿಗರಾದರೂ ಅಲ್ಲಿ ಎಲ್ಲಿಂದ ಬರಬೇಕು ? ಏತಕ್ಕಾಗಿ ಬರಬೇಕು ? ಎಂದಮೇಲೆ ಆ ಸರಸರನೆಯ ಸಪ್ಪುಳು ಯಾರಿಗೆ ಹೆದರಿಕೆಯುನ್ನುಂಟುಮಾಡಬೇಕು ? ಇರುಳುದೇವತೆಯ ಪಟ್ಟಣದ ಪ್ರಹರಿಗಳಂತೆ ಅಲ್ಲಲ್ಲಿ ಗುಂಪುಗೂಡಿ ಕೂಗುತ್ತಿರುವ ನರಿಗಳ ' ಹುಕ್ ಹುಯ್ ಹುಕ್ ಹುಯ್ ' ಎಂಬ ಕೂಗು ಆಗಾಗ ಧ್ವನಿದೋರಿ, ದಿಕ್ಕುದಿಕ್ಕಿನಲ್ಲಿಯೂ ಮರುದನಿಗೊಳ್ಳುತ್ತಿದ್ದಿತು. ಜೀರುಂಡೆಯ ' ಜಿರ್‌ರ್ ' ಎಂಬ ಅವಿರತನಾದವು, ಕೇಳಿದವರ ಕಿವಿಗಳನ್ನು ಕೊರೆಯುವಂತಿದ್ದಿತು. ಮರಗಳಲ್ಲಿ ಮನೆಮಾಡಿಕೊಂಡಿದ್ದ ಬಗೆಬಗೆಯ ಹಕ್ಕಿಗಳ 'ಫಟ್ ಫಟ್' ಎಂಬ ಕೊಕ್ಕು-ರೆಕ್ಕೆಗಳ ಸಪ್ಪುಳುಗಳು, ರಾತ್ರಿಯ ರೌದ್ರತೆಗೆ ಕಳೆಗೊಡುತ್ತಿರುವುವು.

ಗಡಿಯ ಕಾವಲಿನ ಕಟ್ಟೆಯಿಂದ ಅರ್ಧಗಾವುದದ ವರೆಗೆ ಮನುಷ್ಯರ ಸುಳಿವೇನೂ ಕಾಣುವಂತಿರಲಿಲ್ಲ. ಅರ್ಧಗಾವುದ ಮುಗಿಯಿತೆಂಬುದನ್ನು ಸೂಚಿಸಬಹುದಾಗಿದ್ದ ಬಸಿರೆಮರದ ಅಡಿಯಲ್ಲಿ, ಇಬ್ಬರು ಕುಳಿತು ಕೊಂಡಿದ್ದಂತೆ, ಗುಣುಗುಣು ಮಾತಿನ ದನಿಯಿಂದ ಕಂಡುಬರುತ್ತಿದ್ದಿತು. ಫುರ್ ಫುರ್ ' ಎಂದು–ಕೊಂಚದೂರದಿಂದ–ಕುದುರೆಯ ಮೂಗಿನ

ಶಬ್ದವು ನಡುನಡುವೆ ಕೇಳುತ್ತಿದ್ದಿತು. ಬಹುತರವಾಗಿ ಆ ಕುದುರೆಗಳು ಇಲ್ಲಿ ಕುಳಿತಿದ್ದವರವೇ ಆಗಿರಬಹುದು. ಅವರಿಬ್ಬರಲ್ಲಿ ನಡೆದ ಗುಣುಗುಣು ಮಾತು ಹೀಗೆ :

" ಇದ್ದುದಿದ್ದ ಹಾಗೆಯೆ ಅಣ್ಣಾಜಿಯವರು ಅದೆಲ್ಲಿ ಮರೆಯಾಗಿರಬಹುದು—ಸಾಹೇಬ್ ? "

" ನನಗೂ ಅದು ತಿಳಿಯದ ವಿಷಯವಾಗಿದೆ; ಇಂದಿನ ಕಾರ್ಯವಷ್ಟು ಸುಸೂತ್ರವಾಗಿ ಕೊನೆಗಂಡಿತೆಂದರೆ, ನಾಳೆಯ ದಿನವೇ ಅವರ ಶೋಧದ ಕೆಲಸದಲ್ಲಿ ತೊಡಗುವೆನು ! "

" ಈಗ ನರಸಿಂಹನಾಯಕರು ಊರಲ್ಲಿದ್ದಿದ್ದರೆ ಚೆನ್ನಾಗುತ್ತಿದ್ದಿತು."

" ಅದೇನೋ ಸರಿ ! ನಮ್ಮದೀಗ ಪರೀಕ್ಷೆಯ ಕಾಲ; ಮೊನ್ನೆ ಅಣ್ಣಾಜಿಯವರು ಹೇಳಿದ ಮಾತು ನನಗೆ ಸಂಪೂರ್ಣವಾಗಿ ಒಪ್ಪಿಗೆಯಾಗಿರಲಿಲ್ಲವಾದರೂ, ಸದ್ಯದ ಸಂದರ್ಭದಲ್ಲಿ ಹಾಗೆ ಮಾಡಿದ ಹೊರತು ಬೇರೆ ಗತಿಯಿಲ್ಲವಾಗಿದೆ."

" ಈ ಹೊತ್ತು ಕುದುರೆಯಾಳುಗಳು ಹೊರಟೇ ತೀರುವರಲ್ಲವೇ ಕಲಬುರ್ಗಿಗೆ ? "

" ಹಾಗೆಂದು ನನಗೆ ನಿಶ್ಚಿತವಾದ ಸುದ್ದಿ ತಿಳಿದಿದೆ. ಇಂದಿನ ನಡುರಾತ್ರಿಯಲ್ಲಿ ಅವರು ವಿಜಯನಗರವನ್ನು ಬಿಟ್ಟು ಹೊರಟಿರಲೆಬೇಕು."

" ಒಳ್ಳೆಯ ಕುದುರೆಗಳಿಗೆ ನಾಲ್ಕುಗಳಿಗೆಯ ದಾರಿಯಿದು ; ಅದೇತಕ್ಕೋ ಇದುವರೆಗೆ ಬರಲಿಲ್ಲ. ಇಂದು ಕಳುಹುವುದನ್ನು ನಿಲ್ಲಿಸಿಬಿಟ್ಟಿದ್ದಾರೋ ಏನು ಮತ್ತೆ ? "

" ಏನೆಂಬುದು ಇನ್ನು ಸ್ವಲ್ಪಕಾಲದಲ್ಲಿ ತಿಳಿದೇ ತಿಳಿಯುತ್ತದಲ್ಲವೇ ? ನಾಯಕರೇ, ನನಗೇನೋ ಈ ಪ್ರದೇಶದ ಪರಿಚಯವು ಅಷ್ಟೊಂದಿಲ್ಲ. ಇದೊಂದು ದಾರಿಯನ್ನು ಬಿಟ್ಟು, ಇನ್ನಾವ ಸೀಳುದಾರಿ ಪಾಳುದಾರಿಗಳು ಇಲ್ಲಿ ಎಲ್ಲಿಯೂ ಇಲ್ಲ ತಾನೇ ? "

ಇರುಗನಾಯಕನು ಕೊಂಚ ವೇಳೆಯ ವರೆಗೆ ಯೋಚಿಸಿದನು; ಬಳಿಕ ಒಮ್ಮೆಲೆ ನೆನಪಾಗಿ ಹೇಳಿದನು:

"ಹಾಂ! ಹಾಂ! ಕಾವಲುಗಟ್ಟೆಯ ಹಿಂದೆ, ಒಂದು ಕೂಗಳತೆಯಲ್ಲಿಯೆ ಇದೇ ಹೆದ್ದಾರಿಯಿಂದ ಒಂದು ಸೀಳುದಾರಿ ಹೊರಟು, ಆ ದಿಣ್ಣೆಯ ಆಚೆಗೆ–ಈ ದಾರಿಗೆ ಸಮಾಂತರವಾಗಿಯೆ—ಮುಂದಕ್ಕೆ ಸಾಗಿದೆ. ಇಲ್ಲಿಂದ ಮುಂದೆ ಒಂದು ಅರ್ಧಹರಿದಾರಿಯಷ್ಟು ಹೋಗಿ, ಅದೇ ಎರಡು ಸೀಳಾಗಿ, ಒಂದು ಸಮೀಪದ ಹಳ್ಳಿಗೆ ಹೋಗುವುದು; ಇನ್ನೊಂದು ಹಾಗೆಯೆ ಕಾಡಿನಲ್ಲಿ ಸಾಗಿ, ಈ ಮುಖ್ಯದಾರಿಗೆ ಬಂದು ಕೂಡುವುದು."

"ಅದು ಕೂಡಿದುದು ಇಲ್ಲಿಗೆ ಎಷ್ಟು ದೂರವಾಗಬಹುದು?"

"ಸುಮಾರು ಒಂದುವರೆ ಗಾವುದ."

ದಿಲಾವರ್‌ಖಾನನು ಒಂದೆರಡು ನಿಮಿಷ ಯೋಚಿಸಿ, ತನ್ನ ಜೊತೆಗಾರನೊಡನೆ ಹೇಳಿದನು :

"ಹಾಗಾದರೆ ನಾನು ಅಲ್ಲಿಗೆ ಹೋಗುತ್ತೇನೆ. ನೀವು ಇಲ್ಲಿಯೆ ಇದ್ದು ನೋಡುತ್ತಿರಿ!"

"ನಿಮಗದು ಗೊತ್ತಾಗಲಿಕ್ಕಿಲ್ಲ; ನೀವೇ ಇಲ್ಲಿ ಇದ್ದುಬಿಡಿ; ನಾನು ಹೀಗೆಯೆ ದಿಣ್ಣೆಯನ್ನು ದಾಟಿ, ಆ ಸೀಳುದಾರಿಯನ್ನು ಕೂಡಿ ಹೋಗುತ್ತೇನೆ."

"ಹಾಗೆಯೆ ಆಗಲಿ!"

ಇರುಗನಾಯಕನು ತನ್ನ ಕುದುರೆಯ ಬಳಿ ಹೋದನು. ಆತನು ಕುದುರೆ ಹತ್ತಿ, ಕಾಡಿನ ಅಡ್ಡತಿಡ್ಡ ದಾರಿಯಿಂದ ದಿಣ್ಣೆಯ ಓವರಿಯೊಂದಿಗೆ ಸಾಗಿದನು. ಮುಳುಗಲಿರುವ ಚಂದ್ರನು ಆಗ ಮೋಡದ ಮುಸುಕನ್ನು ತೆರೆದು ನಿಂತಿದ್ದ. ಮರಗಳ ಕಂಡಿಗಳೊಳಗಿಂದ ಹಾಯ್ದು ಬರುತ್ತಲಿದ್ದ ಆತನ ಮಸುಕುಕಿರಣಗಳು, ನಾಯಕನಿಗೆ ಸ್ವಲ್ಪ ಸಹಾಯ ಮಾಡುತ್ತಿದ್ದುವು.

ಇರುಗನಾಯಕನು ಹೊರಟು ಹೋಗಿ ಅರ್ಧ–ಮುಕ್ಕಾಲು ಗಳಿಗೆ ಆಗಿರಬಹುದಿಷ್ಟೇ! ಇದ್ದುದಿದ್ದ ಹಾಗೆಯೆ ದಿಲಾವರ್‌ಖಾನನ ಕಿವಿಗೆ ಕುದುರೆಗಳ ನಡಿಗೆಯ ಕಾಲಸಪ್ಪಳು ಕೇಳಲು ತೊಡಗಿತು. ಆತುರಮನದವನಾಗಿ, ಖಾನನು ಒಂದರೆನಿಮಿಷ ಕಿವಿಗೊಟ್ಟು ಕೇಳಿದನು. ಬಳಿಕ

ಆಯುಧಗಳನ್ನು ಕೈಯಲ್ಲಿ ತೆಗೆದುಕೊಂಡು ಎದ್ದು, ದಾರಿಯ ಮಧ್ಯಕ್ಕೆ ಬಂದು ನಿಂತನು. 'ಇರುಗನಾಯಕನನ್ನು ನಾನು ಅದೇತಕ್ಕೆ ಕಳುಹಿದೆನೋ' ಎಂಬ ಕಳವಳವು ಒಂದು ಕ್ಷಣಕಾಲ ಮಾತ್ರ ಆತನ ಹೃದಯದ ತಂತಿಯನ್ನು ಮಿಡಿಯಿತು. ಕೈಗಲ್ಲಳತೆಯಲ್ಲಿಯೆ ಇಬ್ಬರು ಕುದುರೆಯಾಳುಗಳು ಬರುತ್ತಿರುವುದನ್ನು ಕಂಡು, ಮನಸ್ಥೈರ್ಯವು ಆ ಕಳವಳವನ್ನು ಹೊಡೆದೋಡಿಸಿಬಿಟ್ಟಿತು. ಖಾನನು ಕದಲದ ಎದೆಯಿಂದ ನಿಂತುಕೊಂಡನು. ಅದೇತಕ್ಕೋ ನೋ! ಕುದುರೆಯಾಳುಗಳು ಕುದುರೆಗಳನ್ನು ನಿಧಾನವಾಗಿ ನಡೆಯಿಸುತ್ತಿದ್ದರು.

ಮುಂದಣ ಕುದುರೆಯಾಳು ಖಾನನ ಬಳಿಗೆ ಬರುತ್ತಿರುವಾಗಲೆ 'ಅರೇ..ಅಲ್ಲಾ!' ಎಂದು ಕೂಗಿಕೊಂಡು, ಕುದುರೆಯಿಂದ ಕೆಳಕ್ಕೆ ಬಿದ್ದುಬಿಟ್ಟ. ದಿಲಾವರ್‌ಖಾನನ ಕಿರುಭಲ್ಲೆಯ ಗುರಿಯು ಹುಸಿ-ಹೋಗಿರಲಿಲ್ಲ; ಕುದುರೆಯಾಳಿನ ನಟ್ಟೆದೆಯಲ್ಲಿ ನೆಟ್ಟು ಪಾರಾಗಿದ್ದಿತು.

ಹಿಂದಣವನು ಗಾಬರಿಬಿದ್ದುಹೋದ. ಕೂಡಲೆ ಮನಸ್ಸನ್ನೂ ಮೈಯನ್ನೂ ಸಾವರಿಸಿಕೊಂಡು, ಕುದುರೆಯನ್ನು ಜಗ್ಗಿ ನಿಲ್ಲಿಸಿ, ಚುರುಕು-ಗಣ್ಣುಗಳಿಂದ ಮುಂದೆ ನೋಡಿದ; ಯಾವನೋ ಒಬ್ಬನು ಕತ್ತಿ—ಹರಿಗೆಗಳನ್ನು ಹಿಡಿದುಕೊಂಡು ತನ್ನ ಕಡೆಗೆ ಬರುತ್ತಿರುವುದನ್ನು ಕಂಡ ನಡುಪಟ್ಟಿಯಲ್ಲಿ ಜೋಲಾಡುತ್ತಿದ್ದ ತನ್ನ ನಿಡುಗತ್ತಿಯನ್ನು ಒರೆಯಿಂದ ಹಿರಿದು ಕೈಯೊಳಕ್ಕೆ ತೆಗೆದುಕೊಂಡು ಗಟ್ಟಿಯಾಗಿ ಕೇಳಿದ:

"ಯಾರು ನೀನು?"

ಮರುದನಿ ಬಂದಿತು:

"ನೀನು ಯಾರು?"

"ಅದನ್ನು ತೆಗೆದುಕೊಂಡು ನೀನೇನು ಮಾಡುತ್ತೀಯೆ?"

"ಏನೂ ಮಾಡುವುದಿಲ್ಲ!"

"ಮುಂದಣವನು ಹಾಗೆ ಕೆಳಕ್ಕೆ ಬಿದ್ದುದೇಕೆ?"

"ಆತನನ್ನೇ ಕೇಳಿ ತಿಳಿದುಕೊಳ್ಳುವೆಯಂತೆ ತಡೆ!"

"ಇದೇನು ಮಾತು? ನಾವು ಯಾರೆಂದು ತಿಳಿದಿರುತ್ತೀಯೆ?"

"ನಾಷೀರ್‌ಖಾನರ ಕಡೆಯಿಂದ ಕಲಬುರ್ಗೆಗೆ ಹೊರಟವರೆಂದು ತಿಳಿದಿದ್ದೇನೆ!"

ರಾವುತನ ಎದೆಯನ್ನು ಹಿಂಡಿ ಹೊರಕ್ಕೆ ತೆಗೆದಂತಾಯಿತು; ಅರಿವು ಹಾರಿದ ಧ್ವನಿಯಲ್ಲಿ ಕೂಗಿ ನುಡಿದ :

"ಅಯ್ಯೋ! ನರಸಿಂಹನಾಯಕ.. ಸೈತಾನ್..ಸೈತಾನ್..!"

"ಕೂಗಿಕೊಳಬೇಡ! ನಿನ್ನನ್ನು ಆ ಸೈತಾನನ ಬಳಿಯಲ್ಲಿಯೆ ಕಳುಹುತ್ತೇನೆ."

ಎಂದು ದಿಲಾವರ್‌ಖಾನನು ರಾವುತನನ್ನು ಸಮೀಪಿಸಿ, ಆವನ ಎಡದ ಕಾಲನ್ನು ಹಿಡಿದು ಬಲವಾಗಿ ಕೆಳಕ್ಕೆಳೆದನು. ರಾವುತನೂ ಶಕ್ತಿವಂತನು. ಆ ಎತ್ತರವಾದ ದೇಹರಚನೆ, ಪುಷ್ಟವಾದ ಅಂಗಾಂಗಗಳು, ಮುಖವನ್ನೆಲ್ಲ ಬಳಸಿಕೊಂಡು ನಿಂತು— ಸಿಂಹವನ್ನು ನೆನಪಿಗೆ ತಂದು ಕೊಡುವ—ನಿಮಿರಿ ನಿಂತ ಗಡ್ಡದ ನಿಡುಗೂದಲು ಇವೆಲ್ಲವೂ ಆಳ್ಕೆದೆಯವ ರನ್ನು ಅಂಜಿಸಿಬಿಡುವಂತೆ ಇದ್ದುವು. ದಿಲಾವರ್‌ಖಾನನು ಕಾಲನ್ನು ಹಿಡಿದು ಎಳೆದಾಗ, ರಾವುತನು ಕಸುವಿನಿಂದ ಕಾಲನ್ನು ಝಾಡಿಸಿದನು. ಆ ಕಾಲಿನೇಟು ದಿಲಾವರ್‌ಖಾನನನ್ನು ಹತ್ತು-ಹನ್ನೆರಡು ಮೊಳಗಳಿಂದ ಆಚೆಗೆ ಒಯ್ದು ಕೆಡಹಿಬಿಟ್ಟಿತು. ಬಲದ ಮೊಳಕೈಯ ಗೆಣ್ಣಿಗೆ ದಾರಿಯ ಕಗ್ಗಲ್ಲೊಂದು ತಗುಲಿ, ನರನರಗಳನ್ನೂ ನೋವು ಮರುಗಿಸಿತು.

ದಿಲಾವರನು ಬೇಗನೆ ಸಾವರಿಸಿಕೊಂಡು ಮೇಲಕ್ಕೆದ್ದ. ರಾವುತನೂ ಅಷ್ಟರಲ್ಲಿಯೆ ಚಿತ್ತಸ್ಥೈರ್ಯವನ್ನು ತಂದುಕೊಂಡು, ತನ್ನ ಸಂರಕ್ಷಣೆಗೆ ಅಣಿಯಾಗಿ ನಿಂತಿದ್ದ; ದಿಲಾವರ್‌ಖಾನನು ಕತ್ತಿಯನ್ನೆತ್ತಿಕೊಂಡು ರಾವುತನ ಬಳಿಗೆ ಬಂದ. ರಾವುತನು ಕುದುರೆಯ ಮೇಲೆ; ದಿಲಾವರ್ ಖಾನನು ನೆಲದ ಮೇಲೆ. ಇನ್ನೊಂದು ಮಾತೆಂದರೆ: ಬಿದ್ದಾಗ ತಗುಲಿದ್ದ ಕಲ್ಲಿನೇಟು ಖಾನನ ಕೈಯ ಚಳಕವನ್ನು ಚೆನ್ನಾಗಿ ನಡೆಯಗೊಡಲಾರ ದಾಯಿತು. ಮೊಳಕೈಯ ನೋವನ್ನೂ ಲಕ್ಷಿಸದೆ, ಆತನು ರಾವುತ ನೊಂದಿಗೆ ಕತ್ತಿಯ ಕಾಳೆಗಕ್ಕೆ ತೊಡಗಿದ. ರಾವುತನ ಐದಾರು ಆಘಾತ ಗಳನ್ನು ತನ್ನ ಹರಿಗೆಯ ಮರೆಯಿಂದ, ಕತ್ತಿಯ ತಿರುಹಿನಿಂದ ತಪ್ಪಿಸಿ ಕೊಂಡ; ಕೊನೆಗೂ ಕೈಯನೋವು ದಿಲಾವರ್‌ಖಾನನಿಗೆ ಕೆಲಸ-

ಕೊಟ್ಟಿತು. ಬರುಬರುತ್ತ ಕೈ ಭಾರವಾಗಲು ತೊಡಗಿತು. ಚುರುಕು ಕಡಿಮೆಯಾಗಲು ಮೊದಲಾಯಿತು. ಒಂದುಸಲ ರಾವುತನ ಎದೆಗೆ ಗುರಿಯಿಟ್ಟು ಬೀಸಿದ ಕತ್ತಿಯು ಮೇಲೆಯೆ ರಾವುತನ ಕತ್ತಿಯೇಟು ಕಸುವಿನಿಂದ ಬಿದ್ದು, ದಿಲಾವರನ ಕತ್ತಿಯು ಮಧ್ಯದಲ್ಲಿಯೆ ತುಂಡಾಗಿಹೋಯಿತು. ಮುಂದಣ ತುಂಡು ಮೇಲಕ್ಕೆ ಹಾರಿ, ದೂರದಲ್ಲಿ ಹೋಗಿಬಿದ್ದಿತು.

ದಿಲಾವರ್‌ಖಾನನ ಕೈಯಲ್ಲಿ ಕೆಲಸಕ್ಕೆ ಬಾರದ ಅರೆಮುರಿದ ಕತ್ತಿ. ಅವನೀಗ ಕೊಂಚ ಎದೆಗುಂದಿದವನಾದ. ಮೇಲೆ ಏರಿಹೋಗಿ ಯುದ್ಧ ಮಾಡುವುದಕ್ಕೆ ಮಾರ್ಗವನ್ನು ಕಾಣದವನಾದ. ಆದರೂ ಜೀವವನ್ನೆ ಹೊಣೆಯಾಗಿಟ್ಟು, ಆ ಮುರುಕುಕತ್ತಿಯಿಂದಲೇ ಕಾದತೊಡಗಿದ. ರಾವುತನ ಕಾಲಿಗೆ ಐದಾರು ಸಣ್ಣಪುಟ್ಟ ಗಾಯಗಳಾದುವು. ಆತನ ರೊಚ್ಚು ಮೇರೆವರಿತು. ಆ ರೊಚ್ಚಿನ ರಭಸದಲ್ಲಿಯ ರಾವುತನ ಕತ್ತಿಯ ಏಟನ್ನು ತಪ್ಪಿಸಿಕೊಳ್ಳುವುದಕ್ಕೆ, ದಿಲಾವರ್‌ಖಾನನ ಮೈ-ಮನಸುಗಳ ಸ್ಥಿತಿ ಅಸಮರ್ಥವಾಯಿತು. ಕತ್ತಿಯೇಟು ಸಡುಹೆಗಲಮೇಲೆ ಬಿದ್ದೇ ಬಿಟ್ಟಿತು. ಏಟು ಬಲವಾದುದು. ನೆತ್ತರು ಹೊನಲಾಗಿ ಹರಿಯಲು ತೊಡಗಿತು. ಖಾನನು ಈಗ ಕೇವಲ ತನ್ನ ಸಂರಕ್ಷಣೆಗಾಗಿ ಹಣುಗಲು ತೊಡಗಿದನು. 'ಮಾಡಬೇಕಾದುದನ್ನು ಮಾಡಲಿಕ್ಕೆ ಆಗದೆಹೋಗುವ ಸಂದರ್ಭ ಒದಗಿತಲ್ಲಾ!' ಎಂಬ ಯೋಚನೆಯು ಹೆಗಲ ನೋವಿಗಿಂತ ಹೆಚ್ಚಿಗೆ ಅವನ ಮನಸ್ಸನ್ನು ಕಿಮುಚಿತು. ಇನ್ನೂ ನಿಂತುಕೊಂಡು ಯುದ್ಧಮಾಡುವುದಕ್ಕೆ ಶಕ್ತಿ-ಸಾಧನೆಗಳಿರಲಿಲ್ಲ; ಅಲ್ಲಿಂದ ಹಿಂದಡಿಯಿಟ್ಟು ತಾನು ದೂರವಾಗಬೇಕೆಂಬ ಮನಸ್ಸೂ ಆತನದಾಗಲಿಲ್ಲ. ಜೀವದ ಮೇಲಿನ ಆಶೆಯನ್ನು ಬಿಟ್ಟವನಾಗಿಯೆ ತನ್ನ ಮುರುಕುಕತ್ತಿಯನ್ನು ತಿರುಹುತ್ತ, ಆಗಾಗ ಮೇಲೆ ಬೀಳಲು ಬರುತ್ತಿರುವ ಕತ್ತಿಯೇಟುಗಳಿಗೆ ಹರಿಗೆಯನ್ನು ಒಡ್ಡುತ್ತ, ತನ್ನ ಮೈಯನ್ನು ಕಾಯ್ದುಕೊಳ್ಳುತ್ತಿದ್ದನು.

ಎದುರಾಳು ಸೋತಿರುವ ಸಂಗತಿ ರಾವುತನಿಗೆ ಗೊತ್ತಾಯಿತು. ಆಗ ಆತನ ಹುರುಪು ಇಮ್ಮಡಿಗೊಳಬೇಕಾಗಿದ್ದಿತಾದರೂ, ಕುದುರೆಯಿಂದ ಕೆಳಕ್ಕೆ ಬಿದ್ದವನು ಮರಳಿ ಮೇಲಕ್ಕೇಳದಿರುವುದು ಆತನ ಹೃದಯದ ಅಸ್ಥಿರತೆಗೆ ಕಾರಣವಾಯಿತು. 'ಇವನನ್ನು ಮೊದಲು ತೀರಿಸಿಯೆ

ಬೀಡಬೇಕೋ ? ಮುಂದೆ ಹೋಗಿ ಜೊತೆಗಾರನ ಸ್ಥಿತಿಯನ್ನು ನೋಡಬೇಕೋ ?' ಎಂದು ಮನಸ್ಸು ಉಯ್ಯಾಲೆಯಾಡಿತು. ಆಗಲೆ ದಿಲಾವರ್ ಖಾನನಿಗೆ ಏನೆನಿಸಿತೇನೊ! ಎರಡು ಮೂರು ಸಲ ಗಟ್ಟಿಯಾಗಿ ಕೂಗಿಕೊಂಡ:

" ಇರುಗನಾಯಕರೇ !...... ಇರುಗನಾಯಕರೇ......! ಇರುಗನಾಯಕರೇ....!"

ರಾವುತನು ಮತ್ತೆ ಮನಸ್ಸನ್ನು ಗಟ್ಟಿಗೊಳಿಸಿಕೊಂಡ: 'ಇವನನ್ನು ತೀರಿಸಿಯೆ ತಾನು ಮುಂದೆ ಮಾಡಬೇಕಾದುದನ್ನು ಮಾಡಬೇಕು....' ಎಂದು. ಮತ್ತೆ ದಿಲಾವರ್‌ಖಾನನ ಮೇಲೆ ರಭಸದಿಂದ ಕತ್ತಿಯನ್ನು ಬೀಸಲು ತೊಡಗಿದ.

ಇದ್ದುದಿದ್ದಹಾಗೆಯೆ ಎದುರುದಾರಿಯಿಂದ ಕುದುರೆಯನ್ನೋಡಿಸುತ್ತ ಯಾವನೋ ಒಬ್ಬ ಅಲ್ಲಿಗೆ ಬಂದ. ದಿಲಾವರ್‌ಖಾನನ ಮೇಲೆ ಬೀಸುತ್ತಿದ್ದ ರಾವುತನ ಕತ್ತಿಯನ್ನು ತನ್ನ ಕೈಗತ್ತಿಯಿಂದ ಹೊಡೆದು ಕೆಳಕ್ಕೆ ಕೆಡಹಿ ಕೇಳಿದ:

" ಯಾರು ನೀವು? ಏತಕ್ಕಾಗಿ ಇಲ್ಲಿ ಜಗಳವಾಡುತ್ತಿದ್ದೀರಿ ?"

ರಾವುತನು ಅಪ್ರತಿಭನಾಗಿ ಆಗಂತುಕನ ಕಡೆಗೆ ನೋಡಲು ತೊಡಗಿದನು. ದಿಲಾವರ್‌ಖಾನನು ಒಮ್ಮೆಲೆ ಕೂಗಿಕೊಂಡನು:

"ನಾಯಕರೆ, ಆ ರಾವುತನನ್ನು ಹಾಗೆಯೆ ಬಿಡಬೇಡಿ; ಓಡಿಹೋದಾನು.. ನೋಡಿಕೊಳ್ಳಿ!"

ಕೂಗಿನೊಡನೆಯೆ ಎಸೆದ ದಿಲಾವರ್‌ಖಾನನ ಅರೆಗತ್ತಿ, ರಾವುತನ ಕೊರಳ ನರಗಳನ್ನು ಹರಿದುಬಿಟ್ಟಿತು. ಕಿರ್ರನೆ ಕಿರಿಚಿಕೊಂಡು ಆತನು ಕುದುರೆಯ ಬೆನ್ನಮೇಲೆಯೆ ಬಿದ್ದುಕೊಂಡ. ಬಂದಿದ್ದ ಕುದುರೆಯವನಿಗೆ ದಿಲಾವರನ ಧ್ವನಿಯು ಪರಿಚಯವು ಹತ್ತಿದಂತಾಗಿ ಅವನ ಬಳಿಗೆ ಹೋಗುವುದರಲ್ಲಿಯೆ, ದಿಲಾವರನು ನಿಂತಿದ್ದಲ್ಲಿಯೆ ಕುಳಿತುಕೊಂಡು, ಉಬ್ಬಸದ ಉಸಿರನ್ನು ಹಾಕುತ್ತ ಹೇಳಿದನು:

" ನರಸಿಂಹನಾಯಕರೆ, ನೀವು ಬಂದ ವೇಳೆ ಒಳ್ಳೆಯ ವೇಳೆ!"

" ಯಾರು ? ದಿಲಾವರ್‌ಖಾನ್! ಇದೇನು ? ಇಲ್ಲಿ ಏಕೆ ?"

"ಈಗ ಎಲ್ಲವನ್ನೂ ಹೇಳುವಷ್ಟು ಶಕ್ತಿ ನನ್ನಲ್ಲಿ ಉಳಿದಿಲ್ಲ; ಮೊದಲು ಆ ರಾವುತರಿಬ್ಬರೂ ಪೂರ್ತಿಯಾಗಿ ಸತ್ತಿದ್ದಾರೋ ಇಲ್ಲವೋ ನೋಡಿ! ಅವರ ಬಳಿಯಲ್ಲಿದ್ದ ಗುಪ್ತಪತ್ರವನ್ನು ಶೋಧಮಾಡಿ ಸ್ವಾಧೀನ ಪಡಿಸಿಕೊಳ್ಳಿ! ಈ ಕೊಲೆಯು ಯಾರಿಗೂ ಗೊತ್ತಾಗದಂತೆ ಆ ಹೆಣಗಳೆರಡನ್ನೂ ಎಲ್ಲಿಯಾದರೂ ಕಾಡಿನ ಕೊಳ್ಳವೊಂದರಲ್ಲಿ ಬೇಗನೆ ಹಾಕಿಬಿಡಿ!"

ಅಷ್ಟರಲ್ಲಿಯೆ ಕುದುರೆಯನ್ನೋಡಿಸುತ್ತ ಇರುಗನಾಯಕನೂ ಅಲ್ಲಿಗೆ ಬಂದ. ರಾತ್ರಿಯ ಆ ಏಕಾಂತಸಮಯದಲ್ಲಿ, ದಿಲಾವರ್‌ಖಾನನು ಕೂಗಿದ ಕೂಗು ಆತನ ಕಿವಿದೆರೆಗೆ ಅಸ್ಪಷ್ಟವಾಗಿ ಬಿದ್ದಿದ್ದಿತು; ಕೂಡಲೆ ಕುದುರೆ ಹತ್ತಿ ಕಲ್ಲು–ಮುಳ್ಳು–ಮರಗಳನ್ನು ನೋಡದೆ, ಕಾಡನ್ನು ದಾಟಿ ಅಲ್ಲಿಗೆ ಬಂದುದರಿಂದ, ಅವನೂ ಸುಗ್ಗುಸುಗ್ಗಾಗಿದ್ದನು. ಅವನ ಕುದುರೆಯೂ ಸುಗ್ಗಾಗಿದ್ದಿತು. ಬಂದವನೇ ಆತುರದ ನಿಡುನೋಟಗಳಿಂದ ಅಲ್ಲಿಯ ಪರಿಸ್ಥಿತಿಯನ್ನೆಲ್ಲ ನೋಡಿದ; ಆಶ್ಚರ್ಯದ ದನಿಯಲ್ಲಿ ಕೇಳಿದ:

"ನರಸಿಂಹನಾಯಕರೇನು? ನೀವು ಇಲ್ಲಿಗೆ ಬಂದುದು ಯಾವಾಗ?"

"ಇದೋ ಹೀಗೆಯೇ ಬಂದೆ. ಆನೆಗೊಂದೆಗೆ ಬಂದು ನಿಮ್ಮನ್ನು ಕಂಡು, ವಿಜಯನಗರದ ಪರಿಸ್ಥಿಯನ್ನೆಲ್ಲ ತಿಳಿದುಕೊಂಡು ಹೋಗಬೇಕೆಂದು, ಮೊನ್ನೆಯ ದಿನವೇ ಮುದಗಲ್ಲಿಂದ ಹೊರಟೆ. ನಿನ್ನೆಯ ಸಾಯಂಕಾಲ ಒಂದು ಹಳ್ಳಿಯಲ್ಲಿದ್ದು ಊಟ ತೀರಿಸಿಕೊಂಡು, ಮಧ್ಯರಾತ್ರಿಗೆ ಕುದುರೆಹತ್ತಿದೆ. ಇಲ್ಲಿಗೆ ಬರುವುದರಲ್ಲಿಯೆ ಇವರಿಬ್ಬರ ಜಗಳಾಟವನ್ನು ನೋಡಿದೆ."

ದಿಲಾವರ್‌ಖಾನನು — ರಕ್ತಸ್ರಾವದ ಅಶಕ್ತತೆಯಿಂದ—ಗ್ಲಾನಿ ಬಂದಂತಾಗಿ ಕುಳಿತಲ್ಲಿಯೆ ಬಿದ್ದುಕೊಂಡಿದ್ದನು. ಇರುಗನಾಯಕನು ಬಂದುದರ ಅರಿವು ಆತನಿಗಿರಲಿಲ್ಲ. ಇರುಗನಾಯಕನೇನೋ ಕೇಳಿದುದಕ್ಕೆ ದಿಲಾವರ್‌ಖಾನನಿಂದ ಮರುನುಡಿ ಬಾರದುದರಿಂದ, ಇಬ್ಬರೂ ಮುಂದುವರಿದು ಬಂದರು; ಆತನಿಗೆ ಮೂರ್ಛೆಬಂದುದನ್ನು ಕಂಡುಕೊಂಡರು. ನರಸಿಂಹನಾಯಕನು ದಡದಡಿಸುವ ಎದೆಯಿಂದ ಒಮ್ಮೆಲೆ

ಕೆಳಕ್ಕೆ ಕುಳಿತು, ದಿಲಾವರ್‌ಖಾನನ ತಲೆಯನ್ನು ತೊಡೆಯಮೇಲೆ ಇರಿಸಿಕೊಂಡ; ಸೆಲ್ಲೆಯದಿಂದ ಗಾಳಿಹಾಕಲು ತೊಡಗಿದ. ಇರುಗನಾಯಕನು ಸಮೀಪದಲ್ಲಿಯೆ ಹರಿಯುತ್ತಿದ್ದ ಹಳ್ಳಕ್ಕೆ ಓಡಿಹೋಗಿ, ತನ್ನ ಸೆಲ್ಲೆಯವನ್ನು ನೀರಲ್ಲಿ ಅದ್ದಿಕೊಂಡು ಬಂದ; ಖಾನನ ಬಾಯಲ್ಲಿ ಆಗಾಗ ನೀರು ಬಿಡಲು ತೊಡಗಿದ. ನರಸಿಂಹನಾಯಕನು ಹೆಗಲ ಗಾಯವನ್ನು ಒತ್ತಿ ಹಿಡಿದು, ನೆತ್ತರು ಹರಿಯದಂತೆ ಮಾಡಿದ. ಒಂದುಗಳಿಗೆ ಕಳೆದುಹೋಗಿರಬಹುದು; ದಿಲಾವರ್‌ಖಾನನು ಮೆಲ್ಲಮೆಲ್ಲಗೆ ಚೇತರಿಸಿಕೊಂಡು ಕಣ್ಣು ತೆರೆದ. ಒಡನೆಯೆ ಬಳಿಯಲ್ಲಿದ್ದವರನ್ನು ಕೇಳಿದ:

"ಪತ್ರ ಸಿಕ್ಕಿತೇ? ಹೆಣಗಳ ವ್ಯವಸ್ಥೆಯಾಯಿತೇ?"

"ಎಲ್ಲವನ್ನೂ ಮಾಡುತ್ತೇವೆ. ನೀನೀಗ ಯಾವ ಯೋಚನೆಯನ್ನೂ ಮಾಡಬೇಡ. ಸ್ವಲ್ಪ ಇಲ್ಲಿಯೆ ಮಲಗಿಕೊಂಡಿರು!"

ನರಸಿಂಹನಾಯಕನು ತನ್ನ ಸೆಲ್ಲೆಯವನ್ನು ದಿಲಾವರನಿಗೆ ತಲೆಗಿಂಬಾಗಿ ಕೊಟ್ಟು ಮೇಲಕ್ಕೆದ್ದನು. ಬೆಳಗಾಗುವುದಕ್ಕೆ ಇನ್ನೂ ಐದಾರು ಗಳಿಗೆಗಳ ಅವಕಾಶವಿದ್ದಿತು. ಇಬ್ಬರು ನಾಯಕರೂ ಕೂಡಿ, ರಾವುತರಿಬ್ಬರನ್ನೂ ಪರೀಕ್ಷಿಸಿದರು. ಎದೆಯಲ್ಲಿ ಭಲ್ಲೆಯವು ನೆಟ್ಟವನ ಅವಸ್ಥೆ ಆಗಲೆ ಕೊನೆಗಂಡು ಹೋಗಿದ್ದಿತು. ಹಿಂದೆಯಿದ್ದ ರಾವುತನಿಗೆ ಮಿಡುಕುಜೀವ ಇದ್ದಿತಾದರೂ, ಬದುಕುವ ಆಶೆಯೇನೂ ಇರಲಿಲ್ಲ. ಇಬ್ಬರ ಅಂಗಾಂಗಗಳನ್ನೂ ಪರೀಕ್ಷಿಸುತ್ತಿರುವಾಗ, ಮುಂದಿದ್ದ ರಾವುತನ ಜೇಬಿನಲ್ಲಿ, ಮುದ್ರೆಮಾಡಿದ್ದ ಕಟ್ಟೋಲೆಯೊಂದು ದೊರೆಯಿತು. ನರಸಿಂಹನಾಯಕನು ಅದನ್ನು ತೆಗೆದುಕೊಂಡು ಅತ್ತಿತ್ತ ಹೊರಳಿಸಿ ನೋಡಿ, ಇರುಗನಾಯಕನ ಕೈಗೆ ಕೊಟ್ಟನು. ಬಳಿಕ ಇಬ್ಬರೂ ಒಂದೊಂದು ಹೆಣಗಳನ್ನು ಹೊತ್ತುಕೊಂಡು, ಬಲಗಡೆಯ ಕಾಡಿನೊಳಕ್ಕೆ ಸೇರಿದರು.

* * * *

ಇಬ್ಬರೂ ಮರಳಿ ಬಂದಾಗ, ರಾತ್ರಿಯ ಕೊನೆಯ ತಂಗಾಳಿ ಅದೇ ಹೊರಕ್ಕೆ ಹೊರಡುವುದರಲ್ಲಿದ್ದಿತು. ಚಳಿಗಾಲದ ಮೊದಲಿನ ಎಳೆಯ ಚಳಿಯು, ಮೈ-ಮೊಗಗಳಿಗೆ ಮುತ್ತನ್ನು ಕೊಡುತ್ತಿದ್ದಿತು.

ದಿಲಾವರ್‌ಖಾನನು ಈಗ ಪೂರ್ತಿಯಾಗಿ ಅರಿವುಳ್ಳವನಾಗಿದ್ದನು; ಆದರೆ ಆತನಿಗೆ ಎದ್ದು ಅಡಿಯಿಡಲಿಕ್ಕೆ ಬಾರದಷ್ಟು ಅಶಕ್ತತೆ ಬಂದುಬಿಟ್ಟಿದ್ದಿತು. ದಾರಿಯಲ್ಲಿ ನೆತ್ತರುಬಿದ್ದುದನ್ನು ನಿಟ್ಟಿಸಿ ನಿಟ್ಟಿಸಿ ನೋಡಿ, ಇಬ್ಬರೂ ಸಾಧ್ಯವಿದ್ದಷ್ಟು—ಅಲ್ಲಿ ಎಲ್ಲ ಕಡೆಗೂ—ಹೊಸ ಮಣ್ಣುತಂದು ಹಾಕಿದರು. ತರಗೆಲೆಗಳನ್ನು ತಂದು ಹರಡಿದರು. ಬಳಿಕ ರಾವುತರಿಬ್ಬರ ಕುದುರೆಗಳಿರಡನ್ನೂ ಜೊತೆಗೆ ತೆಗೆದುಕೊಂಡು, ಇರುಗನಾಯಕನು ತನ್ನ ಕುದುರೆಯ ಮೇಲೆ ಕುಳಿತು ಮುಂದುವರಿದ. ನರಸಿಂಹನಾಯಕನು ದಿಲಾವರ್‌ಖಾನನ ಕುದುರೆಯನ್ನು ತಂದು, ಅದರ ಮೇಲೆ ಎತ್ತಿ ಆತನನ್ನು ಕುಳ್ಳಿರಿಸಿದ; ತಾನೂ ತನ್ನ ಕುದುರೆಯನ್ನು ಹತ್ತಿ, ಖಾನನನ್ನು ಎಚ್ಚರಿಕೆಯಿಂದ ನೋಡಿಕೊಳ್ಳುತ್ತ, ಆತನ ಕುದುರೆಯ ಪಕ್ಕದಲ್ಲಿಯೆ ತನ್ನ ಕುದುರೆಯನ್ನು ನಿಧಾನವಾಗಿ ನಡೆಯಿಸುತ್ತ, ಆನೆಗೊಂದೆಯ ಕಡೆಗೆ ಸಾಗಿದ.

---

## ೨೨ನೆಯ ಪರಿಚ್ಛೇದ

ಖಾನನೂ ನರಸಿಂಹನಾಯಕನೂ ಆನೆಗೊಂದೆಗೆ ತಲ್ಪಿದಾಗ ಅದೇ ಅರುಣೋದಯಕ್ಕೆ ಮೊದಲಾಗಿದ್ದಿತು. ಇರುಗನಾಯಕನು ಮೊದಲೆ ಹೋಗಿ, ದಿಲಾವರ್‌ಖಾನನು ತಮ್ಮ ಮನೆಯಲ್ಲಿಯೆ ಇದ್ದುಕೊಂಡು ಆರಯ್ಕೆಹೊಂದಬೇಕೆಂದು ಏರ್ಪಾಡುಮಾಡಿದ್ದನು. ಇಂತಹ ಸ್ಥಿತಿಯಲ್ಲಿ ಇನ್ನೆಲ್ಲಿಗಾದರೂ ಹೋಗುವುದೆಂದರೆ ಇಲ್ಲದ ಸಂಶಯಗಳಿಗೆ ಕಾರಣವೆಂದು, ದಿಲಾವರ್‌ಖಾನನೂ ಕೆಲವು ದಿನಗಳವರೆಗೆ ಅಲ್ಲಿಯೆ ಇರಲು ಒಪ್ಪಿಕೊಂಡಿದ್ದನು. ಆದರೆ 'ರಾಜಶೇಖರನನ್ನು ಹುಡುಕುವ ಕೆಲಸ ತನ್ನಿಂದಾಗದೆ ಹೋಯಿತಲ್ಲಾ!' ಎಂಬ ಯೋಚನೆಯಿಂದ ದಿಲಾವರನು ಆಗಾಗ ಕಳವಳವನ್ನು ಅನುಭವಿಸುತ್ತಿದ್ದನು.

ಇರುಗನಾಯಕನ ಮನೆಯ ನೆಲಮನೆಯ ಕೋಣೆಯೊಂದರಲ್ಲಿ,

ಕಿರುಮಂಚದ ಮೇಲೆ, ದಿಲಾವರ್‌ಖಾನನನ್ನು ಮೆಲ್ಲಗೆ ಕರೆದುತಂದು ಮಲಗಿಸಿ ಆಯಿತು. ಹೆಗಲ ಗಾಯವನ್ನು ಔಷಧಿಯ ನೀರಿನಿಂದ ತೊಳೆದು, ಏನೇನೋ ಕಾಡಿನ ಸೊಪ್ಪುಗಳನ್ನು ಅರೆದು ಕಟ್ಟಿ ಆಯಿತು. ಮೈಯೊಳಗಿನ ನೆತ್ತರುತುಂಬಿದ ಒಟ್ಟಿಗಳನ್ನು ಬದಲಿಸಿಯೂ ಆಯಿತು. ಬಳಿಕ ನಾಯಕರಿಬ್ಬರೂ ಸ್ನಾನಮಾಡಿಕೊಂಡು ಆ ಕಿರುಮನೆಗೆ ಬಂದಾಗ, ಬೆಳಗಿನ ಎರಡು ಗಳಿಗೆಗಳು ಮುಗಿದುಹೋಗಿದ್ದುವು. ಬಂದೊಡನೆಯೆ ನರಸಿಂಹನಾಯಕನು ತವಕದಿಂದ ಕೇಳಿದನು :

"ದಿಲಾವರ್ ! ಈಗ ಹೇಗೆ ಎನಿಸುತ್ತಿದೆ ಮೈಯಲ್ಲಿ ?"

"ಸ್ವಲ್ಪ ಆರಾಮವೆನಿಸುತ್ತಿದೆ. ಪತ್ರದಲ್ಲಿ ಏನಿದೆ ? ನೋಡಿ ಆಯಿತೇ ?"

"ಇನ್ನೂ ನೋಡಿಲ್ಲ ! ಇಲ್ಲಿಯೆ ಓದಿ ನೋಡಬೇಕೆಂದು ಈಗ ಬಂದಿದ್ದೇವೆ. ಇರುಗಣ್ಣ, ಆ ಕಟ್ಟೋಲೆಯೆಲ್ಲಿದೆ ?"

ಇರುಗಣ್ಣನು ರಾತ್ರಿಯಲ್ಲಿ ದೊರೆತಿದ್ದ ಕಟ್ಟೋಲೆಯನ್ನು ಕೊಟ್ಟನು. ನರಸಿಂಹನಾಯಕನು ತೆಗೆದುಕೊಂಡು, ಮುದ್ರೆಯನ್ನು ಒಡೆದು, ಒಳಗಿದ್ದ ಕಾಗದವನ್ನು ಕೀಳ್‌ದನಿಯಲ್ಲಿ ಓದಲು ತೊಡಗಿದನು:

"ಹುಜೂರಿಗೆ ಸಲ್ಲಾಂಗಳು.

ಈಗ ಪರಿಸ್ಥಿತಿಯನ್ನು ತುಂಬ ಹದಕ್ಕೆ ತಂದು ಇಟ್ಟಿದ್ದೇನೆ. ನರಸಿಂಹನಾಯಕನಂತೂ ಊರೊಳಗಿಲ್ಲ. ಬಂದೊಡನೆಯೆ ಹಿಡಿದು ಹಾಕಿಬಿಡುವಂತೆ ಇಲ್ಲಿಯ ಕಾಫರ್‌ರಾಯನಿಂದ ವಚನ ತೆಗೆದುಕೊಂಡಿದ್ದೇನೆ. ನರಸಿಂಹನ ಮುಖ್ಯ ಬೆಂಬಲದವನಾದ ರಾಜಶೇಖರನೆಂಬ ಮೊದಲಿನ ರಾಜನ ಮಗನನ್ನು, ಈಗಾಗಲೆ ಸೆರೆಯಲ್ಲಿಡಿಸಿಬಿಟ್ಟಿದ್ದೇನೆ. ವಿಜಯನಗರದಲ್ಲಿ ಅವರಿಬ್ಬರೇ ಇಬ್ಬರು ನಮಗೆ ನಿಜವಾದ ಶತ್ರುಗಳು. ಅವರಿಬ್ಬರನ್ನೂ ಹಿಡಿದುಹಾಕುವುದರಿಂದ, ಅವರ ಪಕ್ಷದ ಇನ್ನಾವ ಜನರಿಂದಲೂ ನಮಗೆ ತೊಂದರೆಯಾಗದು.

ಈ ಮೂರ್ಖನಾದ ಕಾಫರ್ ದೊರೆಯು ನಮ್ಮ ರೋಷನಾರಳನ್ನು

ಮದುವೆಯಾಗಲು ಅಪೇಕ್ಷಿಸಿದ. ಕಾರ್ಯಸಾಧನೆಯ ಕಡೆಗೆ ದೃಷ್ಟಿಯಿಟ್ಟು, ಆತನ ಮಾತಿಗೆ ನಾನು ಒಪ್ಪಿಕೊಂಡಂತೆ ಮಾಡಿ, ದೊರೆಯನ್ನು ಪೂರ್ತಿಯಾಗಿ ಬಲೆಯಲ್ಲಿ ಹಾಕಿಕೊಂಡಿದ್ದೇನೆ. ಈಗ ಆತನು ರಾಜ್ಯವೊಂದನ್ನು ಬಿಟ್ಟು ಮಿಕ್ಕುದಾವುದನ್ನು ಬೇಡಿದರೂ ಕೊಡುವಂತಹ ಮನಃಸ್ಥಿತಿಯಲ್ಲಿದ್ದಾನೆ. ಎಂತಲೆ ರಾಜಧಾನಿಯ ಕೋಟೆಯ ಅಧಿಪತ್ಯವನ್ನು, ನಮ್ಮ ಷೇರ್‌ಉದ್ದೀನನ ಕಡೆಗೆ ಕೊಡಬೇಕೆಂದು ಕೇಳಿಕೊಂಡಿದ್ದೇನೆ. ರಾಯನು ಒಂದೇ ಮಾತಿಗೆ ತನ್ನ ಒಪ್ಪಿಗೆ ಕೊಟ್ಟುಬಿಟ್ಟಿದ್ದಾನೆ. ಕೋಟೆಯ ಅಧಿಪತ್ಯವು ನಮ್ಮ ಕಡೆಗೆ ಬಂದರೆ, ತಾವು ತಮ್ಮ ಸೈನ್ಯದೊಂದಿಗೆ ಸುಖವಾಗಿ ಒಮ್ಮೆಲೆ ರಾಜಧಾನಿಯಲ್ಲಿ ಪ್ರವೇಶಿಸಿಬಿಡಬಹುದು. ಇಲ್ಲದಿದ್ದರೆ ತಮ್ಮಲ್ಲಿದ್ದ ಸಣ್ಣ ಸೈನ್ಯವು, ಎರಡು ವರುಷಗಳವರೆಗೆ ಮುತ್ತಿಗೆಹಾಕಿದರೂ ಹಣಿಯುವಂತಹ ಕೋಟೆಯಿದಲ್ಲ.

ಮದುವೆಯ ದಿನವನ್ನು ಇಂದಿನಿಂದ ಸರಿಯಾಗಿ ಹದಿನಾರನೆಯ ದಿನವೆಂದು ನಿರ್ಣಯಿಸಿ, ದೊರೆಗೆ ಹೇಳಬೇಕೆಂದಿದ್ದೇನೆ. ಅಷ್ಟರಲ್ಲಿಯೆ ತಾವು ಎಲ್ಲ ಏರ್ಪಾಡನ್ನು ಮಾಡಿಕೊಂಡು, ಮದುವೆಯ ದಿನವೇ ಸಂಜೆಗೆ ಇಲ್ಲಿಗೆ ಬಂದು ತಲ್ಪುವಂತೆ ಹೊರಡಬೇಕು. ದಂಡಿನ ಎಲ್ಲ ಭಾಗವನ್ನೂ ಒಮ್ಮೆಲೆ ಜೊತೆಗೆ ತಾರದೆ, ಬೇರೆ ಬೇರೆ ತುಂಡುಗಳನ್ನು ಮಾಡಿ, ಒಬ್ಬೊಬ್ಬ ಅಧಿಕಾರಿಯೊಂದಿಗೆ ಬೇರೆ ಬೇರೆ ವೇಳೆಗಳನ್ನು ಗೊತ್ತು ಮಾಡಿ, ಒಂದರ ಹಿಂದೆ ಒಂದರಂತೆ ಇಲ್ಲಿಗೆ ಕಳುಹುತ್ತಿರಬೇಕು. ಬರಲಿರುವವರೆಲ್ಲರೂ ಕೇಳಿದವರಿಗೆ ಬೇರೆ ಬೇರೆ ಊರುಗಳ ಹೆಸರನ್ನು ಹೇಳುತ್ತಿರಬೇಕು. ಕೊನೆಯ ತುಂಡಿನೊಂದಿಗೆ ಸನ್ನಿಧಿಯು ದಯೆಮಾಡಿಸಬೇಕು. 'ನನ್ನ ಮಗಳ ಮದುವೆಯ ಸಮಾರಂಭಕ್ಕಾಗಿ ಬೇರೆ ಬೇರೆ ಕಡೆಗಳಿಂದ ಬರಲಿರುವ ನನ್ನ ಸ್ನೇಹಿತರಾದ ಸವಾಬರಿಗೂ ಸರದಾರರಿಗೂ ಸುಸೂತ್ರವಾಗಿ ವಿಜಯನಗರದ ರಾಜ್ಯದಲ್ಲಿ ಪ್ರವೇಶ ದೊರೆಯಬೇಕು' ಎಂದು ದೊರೆಯೊಡನೆ ಮಾತನಾಡಿ, ಆತನ ಒಪ್ಪಿಗೆಯನ್ನು ಪಡೆಯುವೆನು; ಅದರಂತೆಯೆ ಬೇರೆ ಬೇರೆ ದಾರಿಗಳ ಕಟ್ಟೆಕಾವಲಿನವರ ಕಡೆಗೂ, ಅಲ್ಲಲ್ಲಿಯ ಅಧಿಕಾರಿಗಳ ಕಡೆಗೂ, ರಾಜಾಜ್ಞೆ ಹೋಗುವಂತೆ ವ್ಯವಸ್ಥೆ ಮಾಡುವೆನು.

ಇಸ್ಲಾಂ ಧರ್ಮದ ಅಭಿಮಾನಿಯಯದ ಖುದಾನು ಸುಲ್ತಾನರಿಗೆ ನಿಜವಾಗಿಯೂ ಯಶಸ್ಸನ್ನು ಒದಗಿಸಿಕೊಡದೆ ಬಿಡನು.

ತಮ್ಮ ಸೇವಕ
ನಾಶೀರ್ ಮಹಮ್ಮದ"

ಬಹುಭಾಷಾವಿದನಾದ ನರಸಿಂಹನಾಯಕನು, ಪಾರಸೀ ಭಾಷೆಯಲ್ಲಿದ್ದ ಆ ಓಲೆಯನ್ನು ಅಡೆತಡೆಯಿಲ್ಲದೆ ಓದಿದನು. ಇರುಗನಾಯಕನಿಗೆ ಅರ್ಥವಾಗದಲ್ಲಿ, ನಡುನಡುವೆ ಅರ್ಥಮಾಡಿ ಹೇಳಿದನು. ಪತ್ರವನ್ನೋದುವುದಾದೊಡನೆಯೆ ದಿಲಾವರ್‌ಖಾನನು ಹುರುಪಿನ ದನಿಯಲ್ಲಿ ಹೇಳಿದ:

"ಒಂದೇ ಕಲ್ಲಿನೇಟಿನಿಂದ ಎರಡು ಹಣ್ಣು ಕೆಡಹಿದಂತಾಯಿತು. ಅಣ್ಣಾಜಿಯವರ ಗೊತ್ತೂ ಹತ್ತಿದಂತಾಯಿತಲ್ಲವೇ ಈ ಕಾಗದದಿಂದ!"

ನರಸಿಂಹನಾಯಕನು ಸಸುವೇಳೆ ಯೋಚನಾಮುದ್ರೆಯಲ್ಲಿ ಕುಳಿತಿದ್ದು, ಬಳಿಕ ಮಾತನಾಡಿದನು:

"ನಾವೀಗ ಕಲಬುರ್ಗಿಗೆ ಕಾಗದವು ತಲ್ಪದಂತೆ ಮಾಡಿದ್ದರೂ, ರಾಜ್ಯದ ಬೇರೆಬೇರೆಯ ಕಡೆಗಳಲ್ಲಿ ತಕ್ಕ ಏರ್ಪಾಡನ್ನು ಮಾಡದಿದ್ದರೆ ನಡೆಯುವಂತಿಲ್ಲ. ಈ ಕಾಗದದ ಉಪಯೋಗವನ್ನು ಮಾಡಿಕೊಂಡು, ಅಲ್ಲಲ್ಲಿಯ ಮಾಂಡಲಿಕರನ್ನು, ಮನ್ನೆಯರನ್ನು ಎಚ್ಚರಿಸಬೇಕಾಗಿದೆ. ಮುದಗಲ್ಲಿನ ಅಧಿಪತಿಯ ಮನಸ್ಸನ್ನು ಇನ್ನೂ ಕೊಂಚ ತಿದ್ದಬೇಕಾಗಿದೆ. ನಾನಿನ್ನು ಬಹಳ ವೇಳೆಯವರೆಗೆ ಇಲ್ಲಿ ನಿಂತು ಕಾಲಕಳೆಯುವಂತಿಲ್ಲ. ಈ ಹೊತ್ತು ಹೊರಡಲೆ ಬೇಕು. ನಾಡಿದಿನ ಸಂಜೆಗೆ ನಾನು ಮತ್ತೆ ಇಲ್ಲಿಗೆ ಬರುತ್ತೇನೆ. ದಿಲಾವರ್‌ಖಾನ್, ಅದುವರೆಗೆ ನೀನು ಯಾವ ಯೋಚನೆಯನ್ನೂ ಮನದಲ್ಲಿ ತರಲಾಗದು! ಇರುಗಣ್ಣಾ, ನೀನು ಅಣ್ಣಾಜಿಯವರನ್ನಿಟ್ಟ ಸ್ಥಳದ ಶೋಧವನ್ನು, ಉಪಾಯಾಂತರಗಳಿಂದ ನಡೆಯಿಸಿರು. ಅಣ್ಣಾಜಿಯ ಅಂಗರಕ್ಷಕ ಚಿಕ್ಕಣ್ಣ ಇಲ್ಲವೆ? ಆತನನ್ನೂ ನೆರವಿಗೆ ಕರೆ! ಅರಮನೆಯಲ್ಲಿ ಹೇಮಾಂಬಿಕೆಯ ಕಿವಿಗೆ ಅಣ್ಣಾಜಿಯವರ ವರ್ತಮಾನ ನಿಲುಕುವಂತೆ ಪ್ರಯತ್ನಮಾಡು! ನಾನು ಪೆದ್ದಣ್ಣನನ್ನು ಕಂಡು, ಈ ವಿಷಯವನ್ನೆಲ್ಲ ಆತನಿಗೂ ತಿಳುಹಿ, ಬಂದುಬಿಡುತ್ತೇನೆ."

ನರಸಿಂಹನಾಯಕನ ಮಾತನ್ನು ಇಬ್ಬರೂ ಗೌರವಭಾವದಿಂದ ಕೇಳಿಕೊಂಡರು. ಆತನ ಮಾತುಗಳಿಗೆ ತಮ್ಮ ಒಪ್ಪಿಗೆಯನ್ನೂ ಸೂಚಿಸಿದರು. ಬಳಿಕ ನರಸಿಂಹನಾಯಕನು ಎದ್ದು ದಿಲಾವರ್‌ಖಾನನ ಮಂಚವನ್ನು ಬಳಿಸಾರಿದನು. ಒಂದು ಪಕ್ಕದಲ್ಲಿ ಕುಳಿತು, ವಾತ್ಸಲ್ಯದ ಬಗೆಯಿಂದ ಖಾನನ ಮೈಮೇಲೆ ಕೈಯಾಡಿಸುತ್ತ, ಕೃತಜ್ಞತೆಯ ಸ್ವರದಲ್ಲಿ ಮಾತನಾಡಿದನು:

"ದಿಲಾವರ್‌ಖಾನ್, ನಿನ್ನ ಉಪಕಾರದ ಭಾರವನ್ನು ವಿಜಯನಗರದ ಸಾಮ್ರಾಜ್ಯವು ಹೇಗೆ ತೀರಿಸೀತು?"

ದಿಲಾವರ್‌ಖಾನನ ಮನದಲ್ಲಿ ಮೂಡಿದ ಹೆಮ್ಮೆಯು, ಆತನ ನೋವನ್ನೆಲ್ಲ ಮರೆಯಿಸಿಬಿಟ್ಟಿತು.

---

## ೨೩ನೆಯ ಪರಿಚ್ಛೇದ

ಹೇಮಾಂಬಿಕೆಯನ್ನಿರಿಸಿದ್ದ ಕಿರುಮನೆಯಲ್ಲಿ ಹೇಮಾಂಬಿಕೆ, ರುದ್ರಮ್ಮ, ಸಿವಮ್ಮ ಮೂವರೂ ತೀರ ಹತ್ತಿರ-ಹತ್ತಿರದಲ್ಲಿಯೆ ಕುಳಿತು-ಕೊಂಡಿದ್ದಾರೆ. ಸಿವಮ್ಮ-ರುದ್ರಮ್ಮರ ಮುಖದ ಮೇಲೆ ಹೇಮಾಂಬಿಕೆಯ ವಿಷಯಕವಾದ ಸಹಾನುಭೂತಿ, ಇನ್ನಾವುದೋ ಸಂಗತಿಯ ವಿಷಯಕವಾದ ಅಸಮಾಧಾನ ಇವೆರಡೂ ಮೂಡಿಕೊಂಡು ನಿಂತಿವೆ. ಹೇಮಾಂಬಿಕೆಯ ಮುಖದಲ್ಲಿ—ಯೋಚನೆಯೊಂದಿಗೆ-ಬಲೆಯಲ್ಲಿ ಬಿದ್ದಾಗಿನ ಸಿಂಹಿಣಿಯ ಉಗ್ರತೆಯೂ ನೆಲಸಿದೆ. ಕಳವಳದ ಧ್ವನಿಯಲ್ಲಿ ರುದ್ರಮ್ಮ ಮಾತನಾಡಿದಳು:

"ಇದುವರೆಗೆ ವಿಜಯನಗರದ ಯಾವ ರಾಜರೂ ತುರುಕರ ಹೆಣ್ಣನ್ನು ಮದುವೆಯಾದುದಿಲ್ಲ ಅಮ್ಮಾಜೀ!"

ಹೇಮಾಂಬಿಕೆ ಏನನೂ ನುಡಿಯದೆ ಇದ್ದಳು. ಸಿವಮ್ಮ ಅಸಮಾಧಾನದ ಉಸಿರು ಚೆಲ್ಲಿ ಹೇಳಿದಳು:

"ತುರುಕರವಳನ್ನು ತಂದು ಅಂತಃಪುರದಲ್ಲಿ ಇರಿಸಿಕೊಂಡು ಬಿಟ್ಟರೆ, ನಾವು ಹೇಗಮ್ಮಾ ಅವಳ ಸೇವೆ ಮಾಡುವುದು? ಅವಳನ್ನು ಮುಟ್ಟಿ ಮುಟ್ಟಿ ಉಣ್ಣುವ ತಿನ್ನುವ ಪ್ರಸಂಗ ಬಾರದೆ ಇರುವುದೇ ನಮ್ಮೆಲ್ಲರಿಗೂ?"

"ನನಗೂ ಅದೇ ಯೋಚನೆ. ನಾವು ಅಹೋಬಲ ನರಸಿಂಹಸ್ವಾಮಿಯ ಒಕ್ಕಲು. ಮಹಾ ಉಗ್ರದೇವತೆಯದು. ಮುಟ್ಟು ಮೈಲಿಗೆ ಸ್ವಲ್ಪವೂ ನಡೆಯುವಂತಿಲ್ಲ!"

"ನಮ್ಮ ಮನೆಯ ದೇವರೇನು ಕಡಿಮೆ? ಶ್ರೀಶೈಲದ ಮಲ್ಲಿಕಾರ್ಜುನಸ್ವಾಮಿ?"

"ಇನ್ನೂ ಸ್ವಲ್ಪದಿನ ತಡೆಯಿರಿ! ನಿಮ್ಮ ದೊರೆಯೂ ತುರುಕರವನಾಗುವನು; ನಿಮ್ಮ ದೇವರೂ ತುರುಕರ ಮತಕ್ಕೆ ಸೇರಿಹೋಗುವುವು! ಆ ಮೇಲೆ, ಆ ನಿಮ್ಮ ದೇವರುಗಳಿಗೆ ಮುಟ್ಟು ಮೈಲಿಗೆ ನಡೆಯುವುದೋ ಇಲ್ಲವೋ ನೋಡುವಿರಂತೆ!"

ಸಿವಮ್ಮ ರುದ್ರಮ್ಮ ಇಬ್ಬರೂ ಹೇಮಾಂಬಿಕೆಯ ಭವಿಷ್ಯವನ್ನು ಕೇಳಿ ನಡುಗಿದರು. ದುಗುಡದ ಹೊರೆಯನ್ನು ಹೊತ್ತು ನಸುವೇಳೆ ಸುಮ್ಮಗೆ ಕುಳಿತರು. ಬಳಿಕ ರುದ್ರಮ್ಮ ಮತ್ತೆ ಮಾತಿಗೆ ಮೊದಲು ಮಾಡಿದಳು:

"ಅಮ್ಮಾಜಿ! ಈ ಸಂದರ್ಭವನ್ನು ತಪ್ಪಿಸುವುದಕ್ಕೆ ಯಾರಿಂದಲೂ ಸಾಧ್ಯವೇ ಇಲ್ಲವೇನು?"

ಹೇಮಾಂಬಿಕೆ ತಗ್ಗಿದ ಧ್ವನಿಯಲ್ಲಿ ನುಡಿದಳಾದರೂ ಅದರಲ್ಲಿ ರೋಷವು ಇಡಿಯಾಗಿ ತುಂಬಿದ್ದಿತು.

"ರುದ್ರಮ್ಮಾ! ನಮ್ಮ ಜನರೆಲ್ಲರೂ ಸ್ವಾರ್ಥದಿಂದ ಕಲ್ಲಿಗಿಂತ ಕಲ್ಲಾಗಿ ಹೋಗಿದ್ದಾರೆ. ಅವರಿಗೆ ಸ್ವಾಭಿಮಾನವಿದೆಯೆ? ಸ್ವಜನ-ಪ್ರೀತಿಯ ಕಲ್ಪನೆಯಿದೆಯೆ? ಸ್ವಧರ್ಮದ ಬಗೆಗೆ ಕಳವಳವಿದೆಯೆ? ಸಾಮ್ರಾಜ್ಯದ ಅವನತಿಯ ಕಡೆಗೆ ಲಕ್ಷ್ಯವಿದೆಯೆ? ಎಲ್ಲರಿಗೂ ಹಸಿವೊಂದು ಗೊತ್ತು, ವಿಷಯವಾಸನೆಗಳಷ್ಟು ಗೊತ್ತು! ಪಶುಗಳಿಗಿಂತ ಪಶುಗಳು! ತಮಗೆ ಹಿತಮಾಡುವವರಾರೆಂಬ ಕಲ್ಪನೆಯೂ ಇಲ್ಲ; ಅಹಿತವನ್ನೆ

ಮಾಡುವವರಾರೆಂಬ ಕಲ್ಪನೆಯೂ ಇಲ್ಲ ! ತಮ್ಮ ಮೊಸಳೆಯ ಶಕ್ತಿಯನ್ನು ಜನಹಿತಕ್ಕಾಗಿ ಹವಣಿಸುವವರ ಮೇಲೆ ಪ್ರಯೋಗಿಸಿ, ಹಣ್ಣುಮಾಡು ವುದನ್ನು ಮಾತ್ರ ಚೆನ್ನಾಗಿ ಬಲ್ಲರು; ಆದರೆ ತಮ್ಮನ್ನು ಹಿಡಿಯಲೆಂದು ಬಲೆಹರಡಿ ನಿಂತಿದ್ದ ಬೇಡನ ಕಡೆಗೆ ನೋಡುವವರೇ ಇಲ್ಲ!''

"ಈಗ ನರಸಿಂಹನಾಯಕರು ಊರಲ್ಲಿದ್ದರೆ ಒಳಿತಾಗುತ್ತಿತ್ತು!'' ಸಿವಮ್ಮನೆಂದಳು.

"ಏನು ಒಳಿತಾಗುತ್ತಿತ್ತು? ರಾಜಶೇಖರನಂತೆ ಅವರಿಗೂ ಸೆರೆ-ಮನೆಯಲ್ಲಿ ಕೊಳೆಯುತ್ತಿರಬೇಕಾಗುತ್ತಿತ್ತು!''

ಇದುವರೆಗೆ ತನ್ನ ಯೋಚನೆಯಲ್ಲಿಯೆ ಕುಳಿತಿದ್ದ ರುದ್ರಮ್ಮ ತಟ್ಟನೆ ಮಾತನಾಡಿದಳು:

"ಅಣ್ಣಾಜಿಯವರು ಈಗ ಸೆರೆಮನೆಯಿಂದ ಹೊರಕ್ಕೆ ಬಿದ್ದರೆ ಏನಾದರೂ ಇದಕ್ಕೆ ಅಡೆತಡೆ ಒಡ್ಡಬಹುದಲ್ಲವೇ?''

"ಅವರು ಹೊರಕ್ಕೆ ಇದ್ದರೆ. .ಹಲವು ಹಂಚಿಕೆಮಾಡಿ ಈ ಸಂಕಟ ವನ್ನು ತಪ್ಪಿಸುತ್ತಿದ್ದರು. ಆದರೆ ಏನು? ಸೆರೆಮನೆಯ ಯಾವ ಕಗ್ಗತ್ತ ಲೆಯ ಕೋಣೆಯಲ್ಲಿ ಅವರು ಕೊಳೆಯುತ್ತ ಬಿದ್ದಿದ್ದಾರೋ! ಇದರ ವರ್ತಮಾನ ಕೂಡ ಅವರ ಕಿವಿಗೆ ಬೀಳಲಿಕ್ಕಿಲ್ಲ!'' ಹೇಮಾಂಬಿಕೆ ಮಾತಿನ ಕೊನೆಗೆ ಬಿಸಿಯುಸಿರೊಂದನ್ನು ಚೆಲ್ಲಿದಳು.

ರುದ್ರಮ್ಮ-ಸಿವಮ್ಮರು ಸೂಚಕದೃಷ್ಟಿಯಿಂದ ಒಬ್ಬರನ್ನೊಬ್ಬರು ನೋಡಲು ತೊಡಗಿದರು. ಅವರ ಕಣ್ಣುಗಳು ಮಾತನಾಡುತ್ತಿರುವುದನ್ನು ಹೇಮಾಂಬಿಕೆಯು ಕಂಡುಹಿಡಿದವಳಾಗಿ ಕೇಳಿದಳು :

"ನಿಮಗಾದರೂ ನಿಮ್ಮ ಧರ್ಮ ಬೇಕಾಗಿದೆಯಲ್ಲವೇ ರುದ್ರಮ್ಮಾ?''

"ಅದನ್ನು ಕಾಪಾಡಿಕೊಳ್ಳುವುದಕ್ಕಾಗಿ ನಾವು ಯಾವ ಕೆಲಸ ಮಾಡಲಿಕ್ಕೂ ಹಿಂದೆ ಮುಂದೆ ನೋಡಲಾರೆವು. ದೊರೆಯು ನಮ್ಮನ್ನು ಕರೆಯಿಸಿ ಇಂದೆಯೆ ಶೂಲಕ್ಕೇರಿಸಿ ಬಿಡಲಿ ಬೇಕಾದರೆ! ಧರ್ಮ ಕೆಡಿಸಿ ಕೊಂಡು ಬದುಕಿರುವುದಕ್ಕಿಂತ ಸತ್ತುಹೋಗುವುದು ಲೇಸಲ್ಲವೇ?''

ಸಿವಮ್ಮ ನುಡಿದಳು:

" ದೊರೆಗಳು ತಮ್ಮ ಮಟ್ಟಿಗೆ ತಾವು ಬೇಕಾದುದನ್ನು ಮಾಡಿಕೊಳ್ಳಲಿ! ಅನ್ಯಧರ್ಮದವಳನ್ನು ತಂದು, ಅಂತಃಪುರದಲ್ಲೆಲ್ಲ ಹೊಲೆಗಲಸಿಬಿಟ್ಟೇನೆಂದರೆ ಯಾರಿಂದ ತಾಳುವುದಕ್ಕಾದೀತು ತಾಯಿ! ಇದು ವಿಜಯ-ನಗರದ ರಾಜರ ಪವಿತ್ರವಾದ ಅಂತಃಪುರ! ಇದಕ್ಕೆ ಮೈಲಿಗೆಯಾಗುವುದನ್ನು ಕಣ್ಣಾರೆ ಕಂಡು ನನ್ನಿಂದ ಸುಮ್ಮಗಿರುವುದಾಗದು!"

ಹೇಮಾಂಬಿಕೆಗೆ ಒಂದುಬಗೆಯ ಆಂತರಿಕವಾದ ಸಮಾಧಾನ. ಆ ಸಮಾಧಾನವು ಅವಳ ಕಣ್ಣುಕುಣಿಕೆಗಳನ್ನು ಕಂಬನಿಯಿಂದ ನನೆಯಿಸುತ್ತಲಿದ್ದಿತು. ಇಬ್ಬರ ಮಾತುಗಳನ್ನೂ ಕಿವಿಗೊಟ್ಟು ಕೇಳಿದಳು ಮಾತ್ರ; ತಾನು ಏನೂ ಮಾತನಾಡದೆ ಕುಳಿತಿದ್ದಳು. ಸಿವಮ್ಮ ಆಶೆಯ ಸ್ವರದಲ್ಲಿ ಕೇಳಿದಳು:

" ಈ ಸಂದರ್ಭದಲ್ಲಿ ನಿಮ್ಮಿಂದ ಆಗತಕ್ಕ ಕೆಲಸವೇನಾದರೂ ಇದೆಯೇ?"

ಹೇಮಾಂಬಿಕೆ ತಿರುಗಿ ಕೇಳಿದಳು:

" ಸೆರೆಮನೆಯಲ್ಲಿ ಯಾರಿಗಾದರೂ ಪ್ರವೇಶದೊರೆಯುವುದೇನು?"

ಒಮ್ಮೆಲೆ ರುದ್ರಮ್ಮ ಹೇಳಿದಳು:

" ಅಹುದು; ದೊರೆಯುವುದು! ಸಿವಮ್ಮ ಪ್ರಯತ್ನ ಮಾಡಿದರೆ ಖಂಡಿತವಾಗಿಯೂ ಪ್ರವೇಶ ದೊರೆಯುವುದು!"

" ಅದು ಹೇಗೆ?"

" ಸೆರೆಮನೆಯ ಕಾವಲುಗಾರರ ಮುಖ್ಯನು ನಮ್ಮ ಅಣ್ಣ!" ರುದ್ರಮ್ಮನೆಂದಳು.

" ನಿಮ್ಮ ಅಣ್ಣನಾದರೆ ನಿನಗೇ ಅದು ಸಾಧ್ಯವಾಗಬಹುದಲ್ಲವೆ?"

ರುದ್ರಮ್ಮನಿಗೆ ಅಂತಹ ಸಂದರ್ಭದಲ್ಲಿಯೂ ಮುಖದಲ್ಲಿ ಮುಗುಳು-ನಗೆಯಾಡಿತು. ಹುಡುಗಾಟದ ನೋಟದಿಂದ ಸಿವಮ್ಮನ ಕಡೆಗೆ ನೋಡುತ್ತ ಆಕೆ ಮಾತನ್ನಾಡಿದಳು:

" ಹಾಗಲ್ಲ ಅಮ್ಮಾಜೀ! ನನಗಿಂತಲೂ ಸಿವಮ್ಮನಿಗೇ ಹೆಚ್ಚು ಸುಲಭ ಆ ಕೆಲಸ."

ಹೇಮಾಂಬಿಕೆಯ ಮುಖದಲ್ಲಿಯೂ ಒಂದು ಸಲ ಮೆಲುನಗೆ

ಮಿಂಚಿ, ಕೂಡಲೆ ಮಾಯವಾಯಿತು. ತೀರ ತಗ್ಗಿದ ದನಿಯಲ್ಲಿ ಆಕೆ ಮೆಲ್ಲಗೆ ಹೇಳಿದಳು:

" ಈ ಮದುವೆಯ ಸುದ್ದಿಯನ್ನು ರಾಜಶೇಖರನ ಕಿವಿಯವರೆಗೆ ಒಯ್ಯಬೇಕು! ಅಲ್ಲದೆ ನಾನು ಹೇಳುವ ಕೆಲವು ಬೇರೆಯ ಮಾತುಗಳೂ ಆತನ ಕಿವಿಗೆ ಬೀಳುವಂತೆ ಮಾಡಬೇಕು."

ಸಿವಮ್ಮ ತಟ್ಟನೆ ನುಡಿದಳು:

" ಅಮ್ಮಾಜಿ; ನಮ್ಮ ಮೇಲೆ ಸಂಪೂರ್ಣ ನಂಬುಗೆಯನ್ನಿಡಿರಿ! ಈ ಕೆಲಸವನ್ನು ನಮ್ಮಿಬ್ಬರಲ್ಲಿ ಯಾರೂ ಮಾಡಬಹುದು!"

---

## ೨೪ನೆಯ ಪರಿಚ್ಛೇದ

ರಾಜಶೇಖರನನ್ನು ಸೆರೆಯಲ್ಲಿರಿಸಿದ್ದ ಕಿರುಮನೆಯಲ್ಲಿ, ಹಗಲು ಹೊತ್ತಿನಲ್ಲಿ ಮಾತ್ರ ಮಂಜುಬೆಳಕು ಇರುವುದು. ರಾತ್ರಿಯೆಲ್ಲವೂ ಕಾವಳದಲ್ಲಿಯೆ ಕಾಲಕಳೆಯಬೇಕು! ಕತ್ತಲೆ ಬೆಳಕುಗಳ ನಿಜವಾದ ಬೆಲೆಯು, ರಾಜಶೇಖರನಿಗೆ ಸೆರೆಮನೆಗೆ ಬಂದ ಮೇಲೆಯೆ ಗೊತ್ತಾಯಿತೇನೋ! ಹೊರಗಣ ಪ್ರಪಂಚದ ಈ ಕತ್ತಲೆ ಬೆಳಕುಗಳ ಕಾರ್ಯವು, ಆಂತರಿಕ ಜಗತ್ತಿನ ಕತ್ತಲೆ ಬೆಳಕುಗಳನ್ನು ಸರಿಯಾಗಿ ಕಂಡುಹಿಡಿಯಲು ಆತನಿಗೆ ತುಂಬ ಸಹಾಯಕವಾಗಿರಬಹುದು.

ಬೆಳಗಾಗಿ ಐದಾರು ಗಳಿಗೆಗಳಾಗಿರಬಹುದು. ಕೊನೆಯ ರಾತ್ರಿಯಲ್ಲಿ ಕಂಡ ಕನಸು ಕಣಸಾಗಿ, ರಾಜಶೇಖರನ ಮನಸ್ಸಿನೆದುರು ಆಗಾಗ ಬಂದು ನಿಂತು, ಹೃದಯವನ್ನು ಕೆಣಕುತ್ತಲಿದ್ದಿತು. ಅದನ್ನು ಮತ್ತೆ ಮತ್ತೆ ಕಾಣುತ್ತಲೆ ರಾಜಶೇಖರನ ಮೈ ಜುಮ್ಮೆನ್ನುವುದು. ಕನಸಿನಲ್ಲಿ ಕೂಗಿಕೂಗಿ ಹೇಳಿದ ವ್ಯಕ್ತಿಯ ಮಾತುಗಳು ಕಿವಿಯಲ್ಲಿ ಗುಣುಗುಣಿಸಿದಂತಾಗಿ, ಆತನ ಮನಸ್ಸು-ಹೃದಯಗಳು ಬಡಿದೆಬ್ಬಿಸಿದವರಂತೆ ಒಮ್ಮೆಲೆ ಹಾರಿಬಿದ್ದು ಮೇಲಕ್ಕೇಳುವುವು. ಆಗ ರಾಜಶೇಖರನ ತಲೆಯಲ್ಲೆಲ್ಲ ತಾಂಡವವಾಡುತ್ತಿದ್ದ ವಿಚಾರಗಳೆಂದರೆ, ಅವನು ಕಂಡ ಕನಸಿನ ವಿಷಯಕವಾದುವುಗಳೆ!

"ನಾನಿಂದು ಕನಸಿನಲ್ಲಿ ಕಂಡ ಚಿತ್ರವು ಖಂಡಿತವಾಗಿಯೂ ಪರಮಾತ್ಮನ ಸಂದೇಶದ ಒಂದು ರೂಪಕವು ಅಹುದು. ಕೇಳಿದ ಮಾತುಗಳು **ಆತನ** ಆದೇಶವೇ ಅಹುದು. ಹಿಂಸೆಯು ತೀರ ತ್ಯಾಜ್ಯವೆಂದು ಗಟ್ಟಿಯಾಗಿ ತಿಳಿದುಕೊಂಡಿದ್ದ ಮನಸ್ಸಿಂದು, ಅದರ ವಿಚಾರದಲ್ಲಿ ಉಯ್ಯಾಲೆ ಯಾಡುತ್ತಲಿದೆ. ಬೀದಿಯಲ್ಲಿ ಒಬ್ಬನ ಮನೆಗೆ ಹತ್ತಿದ ಉರಿಯಿಂದ ಬೀದಿಯ ಮನೆಗಳೆಲ್ಲವನ್ನೂ ಸುಡದಂತೆ ಕಾಪಾಡಬೇಕಾದರೆ, ಉರಿಹತ್ತಿದ ಮನೆಯೊಂದನ್ನು ಮುರಿಯಲೇ ಬೇಕಾಗುವುದು. ದೇಹದ ಯಾವುದೇ ಒಂದು ಭಾಗವು ವಿಷರೋಗದಿಂದ ಕೊಳೆಯುತ್ತಲಿರುವಾಗ, ಆ ವಿಷ-ರೋಗವು ಮೈಯಲ್ಲೆಲ್ಲವೂ ಭೇದಿಸದಂತೆ, ಕೊಳೆತ ದೇಹದ ಭಾಗವನ್ನು ಕೊಯ್ದುಹಾಕಲೆ ಬೇಕಾಗುವುದು. ಹಲವರ ಹಿತಕ್ಕಾಗಿ ಒಬ್ಬನನ್ನು ನಾಶಮಾಡಬೇಕಾದ ಸಂದರ್ಭವೊದಗಿದಾಗ, ಯಾವ ಯೋಚನೆಯನ್ನೂ ಮಾಡದೆ ಆ ಕಾರ್ಯ ಮಾಡಲೆ ಬೇಕು. ಆದರೆ....ಈಗ ನಾನೇನು ಮಾಡುವಂತಿದ್ದೇನೆ?....ನಾನೀಗ ಬರಿಯೆ ಉಸಿರಾಡಿಸುವ ಹೆಣ! ಜೀವವಿದ್ದೂ ಜೀವವಿಲ್ಲದಂತಿರುವ ಮನುಷ್ಯನೆಂಬ ಬೊಂಬೆ...."

ಇದ್ದುದಿದ್ದ ಹಾಗೆಯೆ ಕಿರುಮನೆಯ ಬಾಗಿಲ ಹೊರಗಣ ಚಿಲಕವನ್ನು ತೆಗೆದ ಸಪ್ಪಳಾಯಿತು. ರಾಜಶೇಖರನು ಅತ್ತಕಡೆಗೆ ನೋಡುತ್ತಿರುವಾಗಲೆ, ತೆರೆದ ಬಾಗಿಲಲ್ಲಿ ಸೆರೆಮನೆಯ ಹಿರಿಯ ಕಾವಲುಗಾರ–ತಿಮ್ಮಲಯ್ಯನ ಮೂರ್ತಿ ಕಂಡಿತು. ಆತನು ತನ್ನ ಹಿಂದೆಯಿದ್ದ ಹೆಂಗುಸೊ-ಬ್ಬಾಕೆಯನ್ನು ಮೆಲ್ಲಗೆ ಒಳಕ್ಕೆ ಕಳುಹಿಸಿ, ಮತ್ತೆ ಬಾಗಿಲನ್ನು ಭದ್ರಪಡಿಸಿಕೊಂಡು ಹೊರಕ್ಕೆ ಹೋದ. ಒಳಕ್ಕೆ ಬಂದವಳ ಮುಖವನ್ನು ರಾಜಶೇಖರನು ಚೆನ್ನಾಗಿ ನಿಟ್ಟಿಸಿ ನೋಡದೆ ಒಮ್ಮೆಲೆ ಕೇಳಿದನು:

"ಮತ್ತೇನಾದರೂ ವಿಶೇಷಸಂಗತಿಯಿದೆಯೋ ಸಿವಮ್ಮಾ?"

ಸಿವಮ್ಮ ಮಾತನಾಡಲಿಲ್ಲ; ಬೇಗನೆ ಮಾತನಾಡುವಂತೆಯೂ ಕಾಣಲಿಲ್ಲ. ಅವಳು ಅಲ್ಲಿಗೆ ಬಂದಾಗ, ನಿಃಸಂಕೋಚಭಾವದಿಂದ ಎದುರಿಗೆ ಕುಳಿತುಕೊಂಡು ಮಾತನಾಡುವವಳು; ಇಂದು ಅವಳಲ್ಲಿ ಸಂಕೋಚ-ಭಾವವು ಕಂಡುಬಂದುದರಿಂದ, ರಾಜಶೇಖರನಿಗೆ ಏನೋ ವಿಚಿತ್ರವೆನಿಸಿ, ಆತನು ಮೇಲಕ್ಕೆ ಮುಖವೆತ್ತಿ ನೋಡಿದನು; ದೇಹರಚನೆ ಸಿವಮ್ಮನದೆಲ್ಲ

ಎಂದು ತೋರಿತು. ಇನ್ನಿಷ್ಟು ಸೂಕ್ಷ್ಮವಾಗಿ ನಿಟ್ಟಿಸಿನೋಡಿದನು. ತಿಳಿಯದಂತೆಯೆ ಅವನ ಬಾಯಿಂದ ಆಶ್ಚರ್ಯದ ಕರೆಯೊಂದು ಹೊರಟಿತು :

“ ಯಾರು ? ಹೇಮಾ ! ”

“ ಹಂ ! ಮೆಲ್ಲಗೆ ! ನಿಧಾನವಾಗಿ ಮಾತನಾಡಿ ! ” ಎಂದು ತಿಮ್ಮಲರಾಯನು ಬಾಗಿಲ ಹೊರಗಿನಿಂದ ಪಿಸುನುಡಿಯಲ್ಲಿ ಕೂಗಿ ಹೇಳಿದನು. ರಾಜಶೇಖರನು ಪರಿಸ್ಥಿತಿಯನ್ನರಿತವನಾಗಿ, ಮತ್ತೆ ಮೆಲ್ಲಗೆ ಮಾತನಾಡಿದನು:

“ ಕುಳಿತುಕೊಳ್ಳು ಹೇಮಾ ! ”

ನಿಂತಿದ್ದಲ್ಲಿಯೆ ನಿಧಾನವಾಗಿ ಹೇಮಾಂಬಿಕೆ ಕುಳಿತುಕೊಂಡಳು. ತಗ್ಗಿಸಿದ್ದ ತಲೆಯನ್ನು ಮೇಲಕ್ಕೆತ್ತಿ ರಾಜಶೇಖರನನ್ನು ನೋಡುವ ಧೈರ್ಯ ಅವಳಿಗಾಗಲೊಲ್ಲದು ; ಆದರೆ ನೋಡಬೇಕೆಂಬ ತವಕದಿಂದ ಕಣ್ಣುಮನಗಳು ಕುಣಿದಾಟವನ್ನು ನಡೆಯಿಸಿದ್ದುವು. ಅರ್ಧಗಳಿಗೆ ಕಳೆದುಹೋದರೂ ಇಬ್ಬರೂ ಮಾತನಾಡಲಿಲ್ಲ. ಒಬ್ಬರ ಕಣ್ಣನ್ನು ಒಬ್ಬರು ತಪ್ಪಿಸಿ, ಅವರಿಬ್ಬರೂ ಆಗಾಗ ಪರಸ್ಪರರನ್ನು ನೋಡಲು ಹವಣಿಸುತ್ತಿದ್ದರು ಮಾತ್ರ. ಕೊನೆಗೆ ರಾಜಶೇಖರನು ಮರುಕದ ದನಿಯಲ್ಲಿ ಮಾತನಾಡಿದ :

“ ಹೇಮಾ ! ನಾನಿನ್ನು ಈ ಬದುಕಿನಲ್ಲಿ. . . . ನಿನ್ನನ್ನು ಎಂದೂ ಕಾಣಲಾರೆನೆಂದು ಭಾವಿಸಿ ಬಿಟ್ಟಿದ್ದೆ ! ”

ಹೇಮಾಂಬಿಕೆ ಮುಖವೆತ್ತದೆ ನುಡಿದಳು:

“ ಹಾಗೆ ಭಾವಿಸಿದುದು ಸ್ವಾಭಾವಿಕ ; ಆದರೆ ನಾವೆಲ್ಲ ಪರಿಸ್ಥಿತಿಯ ಕೈಯೊಳಗಿನ ಬೊಂಬೆಗಳು ! ಅದು ಕುಣಿಸಿದಂತೆ ಕುಣಿಯಲೆ ಬೇಕಲ್ಲವೆ ? ”

“ ನಿನ್ನ ಮಾತುಗಳೆಲ್ಲವನ್ನೂ ಸಿವಮ್ಮ ನನಗೆ ಹೇಳಿದ್ದಾಳೆ. ಅಂತಃಪುರದೊಳಕ್ಕೆ— ಸೆರೆಮನೆಯಲ್ಲಿದ್ದರೂ— ನೀನು ಮಾಡುತ್ತಿದ್ದ ಕಾರ್ಯಕ್ಕಾಗಿ ನನಗೆ ಆಶ್ಚರ್ಯವೆನಿಸುತ್ತಿದೆ. ನನ್ನನ್ನು ನೋಡು ; ಬಂದ ದಿನದಿಂದಲೂ ಕಗ್ಗಲ್ಲಿನಂತೆ ಈ ಕೋಣೆಯಲ್ಲಿ ಬಿದ್ದುಕೊಂಡಿದ್ದೇನೆ ! ”

"ಒಂದೊಂದು ಸ್ವಭಾವದ ರೀತಿ ಕುಮಾರ!"

"ಹೇಮಾ, ಇಂದು ಬೆಳಗಿನಲ್ಲಿ ನನಗೊಂದು ವಿಚಿತ್ರವಾದ ಕನಸು! ಅದನ್ನು ಕಂಡಾಗಿನಿಂದ ನನ್ನ ಸ್ವಭಾವವೇ ಪರಿವರ್ತನೆಗೊಳ್ಳುವುದರಲ್ಲಿದೆ. ಹೇಗಾದರೂ ಮಾಡಿ ಈ ಸೆರೆಮನೆಯಿಂದ ಹೊರಡಬೇಕೆಂಬ ತವಕವು ಹೆಚ್ಚುತ್ತ ನಡೆದಿದೆ."

"ಅದೇನು ಕನಸು?"

"ನೋಡು ಹೇಮಾ! ಸುಂದರವಾದುದೊಂದು ವಿಹಾರವನವಿದ್ದಿತು. ಅಲ್ಲಿಯ ಬಗೆಬಗೆಯ ಹೂಗಳ ಗಿಡಬಳ್ಳಿಗಳು ತಳಿತು ನಳನಳಿಸುತ್ತ, ನನೆ-ಕೊನೆಯಾಂತು ನಿಂತಿದ್ದುವು. ಹಣ್ಣುಗಳಿಂದ ತುಂಬಿದ ಹೆಮ್ಮರಗಳು ಮುಗಿಲಿಗೆ ಮುತ್ತುಕೊಡುತ್ತ ಬಳೆದಿದ್ದುವು. ಎಲ್ಲವನ್ನೂ ನೋಡುತ್ತ ನಡುದೋಟಕ್ಕೆ ಬಂದೆ. ಅಲ್ಲೊಂದು ಸುಂದರವಾದ ಹಣ್ಣಿನ ಗಿಡ; ಅದರ ನೂರಾರು ಕೊಂಬೆಗಳು ದಿಕ್ಕು ದಿಕ್ಕಿಗೂ ಸಾಗಿಹೋಗಿವೆ. ಎಲ್ಲ ಕೊಂಬೆಗಳೂ ತಳಿರು, ಪಚ್ಚೆಲೆ, ಕುಡಿ, ಮೊಗ್ಗು, ಹೂ, ಕಾಯಿ, ಹಣ್ಣುಗಳಿಂದ ತುಂಬಿಬಿಟ್ಟಿವೆ. ಒಂದು ಕೊಂಬೆ ಮಾತ್ರ ಏನೂ ಇರದೆ ಒಣಕಲು ಮರವಾಗಿ ನೀಡಿಕೊಂಡಿದೆ. ನಾನು ನೋಡುತ್ತ ನಿಂತುಕೊಂಡಿದ್ದಾಗಲೆ ಆ ಒಣಕಲು ಕೊಂಬೆಗೆ ಉರಿಹತ್ತಿ, ಕೊಂಬೆಯೆಲ್ಲವೂ ಸುಡಲು ತೊಡಗಿತು. ಉರಿಯ ಸೆಕೆಯೂ ಹಬ್ಬಿಹರಡಿದ್ದ ಹೊಗೆಯೂ ಕೂಡಿ, ಮರವನ್ನಾಶ್ರಯಿಸಿಕೊಂಡಿದ್ದ ಬಗೆಬಗೆಯ ಪ್ರಾಣಿಗಳನ್ನು ತಳಮಳಗೊಳಿಸಲು ತೊಡಗಿದುವು. ಎದೆಯು ಕಳವಳಪಡುತ್ತಿದ್ದಿತಾದರೂ ಅದನ್ನು ನೋಡುತ್ತ ನಾನು ಸುಮ್ಮಗೆ ನಿಂತಿದ್ದೆ. ನಸುವೇಳೆಯಲ್ಲಿಯೆ ಜಡೆ-ಗಡ್ಡಗಳಿಂದ ಕೂಡಿದ, ತೇಜಃಪುಂಜವಾದ ಕಣ್ಮೊಗದ ಮುನಿಯೊಬ್ಬನು ನನ್ನೆದುರುಬಂದ; ತನ್ನ ಕೈಯಲ್ಲಿದ್ದ ಕೊಡಲಿಯನ್ನು ನನ್ನ ಕೈಯಲ್ಲಿ ಕೊಟ್ಟು ಹೇಳಿದ:—'ಉರಿಯುತ್ತಿರುವ ಕೊಂಬೆಯನ್ನು ಕಡಿದು ಚೆಲ್ಲು! ತಡೆ ಮಾಡಿದರೆ ಉರಿಯು ಮರವನ್ನೆಲ್ಲ ವ್ಯಾಪಿಸಿಬಿಡಬಹುದು!' ಮರದಲ್ಲಿಯ ಹಕ್ಕಿಗಳೆಲ್ಲ ಕಲಕಲಿಸತೊಡಗಿದುವು. ಆ ಕಲಕಲಕ್ಕೆ ನನಗೆ ಎಚ್ಚರಿಕೆಯಾದಾಗ, ಬೆಳಗಿನ ಹಕ್ಕಿಗಳ ಉಲಿದಾಟ ಕಿವಿಗೆ ಬಿದ್ದು ಹಾಗೆಯೆ ಎದ್ದು ಕುಳಿತೆನು. ಆ ಮುನಿಯ ಮಾತು ನನ್ನ ಕಿವಿಯಲ್ಲಿ

ಈಗಲೂ ಮೊರೆಯುತ್ತಿರುವುದು. ಆತನ ರೂಪವನ್ನು ನನ್ನ ಕಣ್ಣುಗಳು ತಮ್ಮ ಮೇಲೆ ಮೂಡಿಸಿಕೊಂಡೇ ಬಿಟ್ಟಿವೆ. 'ನಿಮಿತ್ತಮಾತ್ರಂ ಭವಸವ್ಯಸಾಚಿನ್' ಎಂಬ ಭಗವಂತನ ಗೀತೆಯ ಉಕ್ತಿ ನೂರಾರು ಸಲ ನನ್ನ ನೆನಪಿಗೆ ಬಂದುಬಂದು ಹೋಗುತ್ತಲಿದೆ. . . . ಹಾಸಿಗೆ ಬಿಟ್ಟು ಎದ್ದಾಗಿನಿಂದ.

ಹೇಮಾಂಬಿಕೆ ಧ್ಯಾಸಮುದ್ರೆಯಿಂದ ಕುಳಿತಿದ್ದಳು. ತಿಮ್ಮಲ ರಾಯನು ಹೊರಗಣಿಂದ ಅವಸರಪಡಿಸಲು ತೊಡಗಿದ. ಒಂದುಸಲ ಮೊಗವನ್ನೆತ್ತಿ ರಾಜಶೇಖರನನ್ನು ಪೂರ್ತಿಯಾಗಿ ನೋಡಿದಳು ; ಬಳಿಕ ಮಾತನಾಡಿದಳು:

" ಹೆಚ್ಚುವೇಳೆ ಮಾತನಾಡಲಿಕ್ಕೆ ಅವಕಾಶವಿಲ್ಲ ; ಕಲಬುರ್ಗೆಯಿಂದ ಮುತ್ತಿಗೆ ಬರುವ ಗಂಡಾಂತರವು ಸದ್ಯಕ್ಕಂತೂ ತಪ್ಪಿದಂತಾಗಿದೆ. ಬಾಯಮ್ಮನ ಮುಖಾಂತರವಾಗಿ ಆಗಾಗ ನನಗೆ ಹೊರಗಿನ ವರ್ತಮಾನ ಗಳು ಬರುತ್ತಿರುತ್ತವೆ. ನರಸಿಂಹನಾಯಕರೂ ಪೆದ್ದಣ್ಣನೂ ಕೂಡಿ, ರಾಜಧಾನಿಯ ಹೊರಗಣ ಅಧಿಕಾರಿಜನರ ಮನಸ್ಸುಗಳನ್ನು ತಿದ್ದುತ್ತ ಲಿದ್ದಾರೆ. ನಿಮ್ಮನ್ನು ಇಲ್ಲಿಂದ ಮುಕ್ತರನ್ನಾಗಿ ಮಾಡುವುದಕ್ಕೂ ಪ್ರಯತ್ನ ನಡೆಯಿಸಿದ್ದಾರೆ. ಆದರೆ . . . . ವಿಜಯನಗರದ ದೊರೆಯು ವಿಧರ್ಮದ ಹೆಣ್ಣನ್ನು ಮದುವೆಯಾಗಲಿರುವುದನ್ನು ಮಾತ್ರ ಯಾರೂ ನಿಲ್ಲಿಸಲಾರರು ! ಇನ್ನೊಂದು ಮಾತು ಕುಮಾರ! ರೋಷನಾರಳು ನಮ್ಮ ದಿಲಾವರ್‌ಖಾನನ ಜೀವದ ಜೀವವಂತೆ ! "

" ನಾನದನ್ನು ಬಲ್ಲೆ ! ಹೇಮಾ, ನಾನು ಹೊರಕ್ಕೆ ಬಂದರೆ ಆ ಮದುವೆಯನ್ನು ಹೇಗಾದರೂ ಮಾಡಿ ನಿಲ್ಲಿಸುತ್ತೇನೆ. ಮದುವೆಯ ದಿನದೊಳಗಾಗಿ ನನ್ನ ಬಿಡುಗಡೆಯಾಗಬೇಕು ಇಷ್ಟೇ ! "

ತಿಮ್ಮಲರಾಯನು ತೀರ ಗಡಬಿಡಿ ಮಾಡಿದುದರಿಂದ ಹೇಮಾಂಬಿಕೆ ಹೊರಟು ಬಿಟ್ಟಳು. ರಾಜಶೇಖರನು ಎದ್ದು, ಕಿರುಮನೆಯಲ್ಲಿಯೆ ಅತ್ತಿತ್ತ ಅಡಿಯಾಡಲು ತೊಡಗಿದನು.

---

## ೨೫ ನೆಯ ಪರಿಚ್ಛೇದ

ನಾಳೆಯ ದಿನವೆ ಮದುವೆಗಾಗಿ ಗೊತ್ತುಮಾಡಿದ ದಿನ. ವಿಜಯ-ನಗರದ ದೊರೆಯು ಮಾವನಾಗಲಿರುವ ನಾಷೀರ್‌ಮುಹಮ್ಮದನ ಮನೆಯಲ್ಲಿ ಸಡಗರದ ಸುಗ್ಗಿಯಾಗಿರಬೇಕಲ್ಲವೇ? ಖಾನನ ಸ್ನೇಹಿತರು ಹಿಂಡುಹಿಂಡಾಗಿ – ಮದುವೆಯ ಸಮಾರಂಭಕ್ಕೆ – ಬರುವವರಿದ್ದಾರೆಂಬ ಮಾತು, ರಾಜಧಾನಿಯಲ್ಲೆಲ್ಲ ಬೀದಿನಾತಾಗಿದ್ದಿತು. ವಿಜಯನಗರ—ಕಲಬುರ್ಗೆಗಳ ಮುಖ್ಯದಾರಿಯಲ್ಲಿದ್ದ ಕಟ್ಟೆಕಾವಲಿನವರಿಗೆಲ್ಲ 'ಮದುವೆಗೆ ಬರಲು ಹೊರಟವರನ್ನು, ಗುರುತನ್ನು ಕೇಳಿಕೊಂಡು ರಾಜ್ಯದಲ್ಲಿ ನಿರಾತಂಕವಾಗಿ ಬರಗೊಡಿಸಬೇಕು!' ಎಂಬರ್ಥದ ರಾಜಾಜ್ಞೆಯು ಹೊರಟಿದ್ದಿತು. ಬರಲಿರುವ ಬೇರೆ ಬೇರೆ ನವಾಬರಿಗೆ, ದಾರಿಯಲ್ಲಿ ತಕ್ಕ ಆದರೋಪಚಾರಗಳು ಸಲ್ಲಬೇಕೆಂಬ ಅರ್ಥದ ಆಜ್ಞಾಪತ್ರವು, ರಾಜ್ಯದ ಹೊರಗಿನ ಬೇರೆ ಬೇರೆ ಅಧಿಕಾರಿಗಳ ಕಡೆಗೆ ಹೋಗಿದ್ದಿತು. ವಿಜಯ-ನಗರದ ದುರ್ಗಾಧಿಪತ್ಯವಂತೂ ಷೇರ್‌ಉದ್ದೀನನ ಕೈಸೇರಿ ಎಂಟು ಹತ್ತು ದಿನಗಳಾಗಿ ಹೋಗಿವೆ. ಆತನು, ತಮ್ಮವರೆಂದು ರಾಜಧಾನಿಯೊಳಕ್ಕೆ ಯಾರನ್ನು ಬಿಟ್ಟರೂ ಕೇಳುವಂತಿರಲಿಲ್ಲ. ಇಷ್ಟಾದರೂ ನಾಷೀರ್‌ಮುಹಮ್ಮದನ ಮನೆಯಲ್ಲಿಂದು ಇಷ್ಟೊಂದು ಅಸಮಾಧಾನದ ಆಡಳಿತವೇಕೆ?

ಉಪ್ಪರಿಗೆಯ ಒಳಮನೆಯೊಂದರಲ್ಲಿ ಹಾಸಿದ್ದ ಹಾಸಿಗೆಯ ಮೇಲೆ ನಾಷೀರ್‌ಮುಹಮ್ಮದನು ಬಿದ್ದುಕೊಂಡಿದ್ದಾನೆ. ಮುಖ ನೋಡಿದರೆ, ಆರುತಿಂಗಳ ಬೇನೆಯುವನ ಮುಖದಂತೆ ಬಿಳಿಚಿಹೋಗಿದೆ. ಯಾವಾಗಲೂ ಹುರಿಗೊಂಡು ಸೆಡೆದು ನಿಂತಿರಬೇಕಾದ ನಿಡುಗಡ್ಡದ ನವಿರು ಅಸ್ತವ್ಯಸ್ತವಾಗಿದೆ. ಆಗಾಗ ಯೋಚನೆಯ ಶೂನ್ಯದೃಷ್ಟಿಯಿಂದಿರುವಾಗಲೆ, ದಾಡಿಯ ತುದಿಗಳನ್ನು ಬೆರಳಲ್ಲಿ ಹಿಡಿದು ತಿಕ್ಕುತ್ತಿದ್ದಾನೆ. ಯಾವುದೂ ಬಗೆಗೆ ಹರಿಯದೆ ನಡುನಡುವೆ ನಿಡಿದಾಗಿ ಉಸಿರುಹಾಕುತ್ತಿದ್ದಾನೆ.

ರೋಷನಾರಳನ್ನು ಮೊದಲಿನಿಂದಲೂ ಪ್ರೀತಿಯಿಂದ ಸಾಕಿ-ಕೊಂಡುಬಂದಿದ್ದ ಮುದುಕಿ—ಹಮಿದಾದಳು, ಒಮ್ಮೆಲೆ ನಾಷೀರ್‌ಖಾನನು

ಇದ್ದಲ್ಲಿಗೆ ಬಂದಳು. ನಾಷೀರನ ಸ್ಥಿತಿಯನ್ನವಳು ದೂರದಿಂದಲೆ ಕಂಡು ಎದೆನಡುಕ ಹೊಂದಿದಳು. ಆಕೆ ಬಳಿಗೆ ಬಂದೊಡನೆಯೆ ನಾಷೀರ್ ಖಾನನು ಮಲಗಿದಲ್ಲಿಯೆ ಎದ್ದು ಕುಳಿತು, ಆತುರದಿಂದ ಕೇಳಿದನು :

" ರೋಷನಾರ್ ಈಗ ಸಮಾಧಾನವಾಗಿದ್ದಾಳೆಯೆ ? "

ಕಳವಳದ ಸ್ವರದಲ್ಲಿ ಮುದುಕಿ ಹೇಳಿದಳು :

" ಏನು ಸಮಾಧಾನವೋ ! ಒಂದೇ ಸಮನೆ ಅಳುವು ! ಊಟಬೇಡ, ಉಡಿಗೆ ಬೇಡ, ಒಂದೂ ಬೇಡ. ಕಣ್ಣಿಗೆ ಕಣ್ಣು ಹತ್ತಿತೋ ಇಲ್ಲವೋ 'ದಿಲಾವರ್ ! ದಿಲಾವರ್ !' ಎಂದು ಕಿರಿಚಿಕೊಳ್ಳುತ್ತ ಏಳುವಳು !"

ನಾಷೀರ್‌ಖಾನನು ಸುಮ್ಮಗೆ ಕುಳಿತಿದ್ದನು. ಮುದುಕಿ ಮತ್ತೆ ತಾನೇ ಮಾತನಾಡಿದಳು :

" ಅಲ್ಲಾ . . ನಾಷೀರ್ ! ದಿಲಾವರನು ಹೋಗಿರಬಹುದಾದರೂ ಎಲ್ಲಿಗೆ ? "

ನಿಟ್ಟುಸಿರೊಂದನ್ನು ಚೆಲ್ಲಿ, ಕರುಣಾಧ್ವನಿಯಲ್ಲಿ ನಾಷೀರನು ಹೇಳಿದ :

" ಖುದಾನಿಗೆ ಗೊತ್ತು ! ಬೇಕಾದಷ್ಟು ಹುಡುಕಿಸಿದೆ; ದಿಲಾವರನ ಸುದ್ದಿಯೇ ಇಲ್ಲ. ಆತನ ಮನಸ್ಸು ಒಂದು ವಿಚಿತ್ರದ ಮನಸ್ಸು. ರೋಷನಾರಳನ್ನು ನಿಜವಾಗಿಯೂ ಮಹಾರಾಜನಿಗೆ ಮದುವೆ ಮಾಡಿ ಕೊಡುತ್ತಾರೆಂದು ತಿಳಿದನೆನೋ; ನನ್ನನ್ನು ಒಂದು ಮಾತು ಕೇಳಿದ್ದರೆ ಆತನಿಗೆ ಇದ್ದ ಸಂಗತಿಯನ್ನು ತಿಳುಹುತ್ತಿದ್ದೆ. ಇಸ್ಲಾಂ ಧರ್ಮಾಭಿಮಾನ ತನಗೊಬ್ಬನಿಗೇ ಇದೆಯೆಂದು ಆತನ ಅಭಿಪ್ರಾಯವೇನೋ ! "

" ನಮ್ಮ ಹುಚ್ಚಿ ರೋಷನಾರಳನ್ನು ನೋಡಬಾರದೇ ? ಆತನಿಗಾಗಿ ಹಾಗೆಯೆ ಪ್ರಾಣಕಳೆದುಕೊಳ್ಳುತ್ತಿದ್ದಾಳೆ. ದಿಲಾವರನು ಒಂದು ವೇಳೆ ಇಲ್ಲಿಯೆ ಇದ್ದಿದ್ದರಾದರೂ, ಆತನಿಗೆ ರೋಷನಾರಳನ್ನು ಕೊಡಲಿಕ್ಕೆ ಆಗುತ್ತಿದ್ದಿತೇ ? ಹೇಳಿಕೇಳಿ ಹಿಂದೂಸ್ಥಾನದ ಮುಹಮ್ಮದೀಯನವ ! ಅಂತಹವನಿಗಾಗಿ ಇವಳೇಕೆ ಇಷ್ಟೊಂದು ಹಚ್ಚಿಕೊಳ್ಳಬೇಕು ! "

ಸಲುಗೆಯ ಸಸುಮುನಿಸಿನ ದನಿಯಲ್ಲಿ ಮುದುಕಿ ನುಡಿದಳು. ನಾಷೀರ್ ಮುಹಮ್ಮದನು ಏನೂ ಮಾತನಾಡದೆ, ಉಪ್ಪರಿಗೆಯ ಮಾಳಿಗೆಯನ್ನು

ನೋಡುತ್ತಿದ್ದನು. ಕಣ್ಣಿಮೆಗಳು ಒದ್ದೆಯಾಗಿದ್ದಂತೆ ಕಾಣುತ್ತಿದ್ದುವು.

ಇದ್ದುದಿದ್ದಹಾಗೆಯೆ ಫಿರೂಜ್‌ಖಾನನು ಉಪ್ಪರಿಗೆಯನ್ನೇರಿ ಒಳಕ್ಕೆ ಬಂದ. ಫಿರೂಜ್‌ಖಾನನೆಂದರೆ ಖಾನನ ರತ್ನಪಡಿಯ ಅಂಗಡಿಯಲ್ಲಿಯ ಮುಖ್ಯ ಕಾರ್ಯಕರ್ತನು. ನಾಷೀರ್‌ಮುಹಮ್ಮದನ ಜೀವಜೀವಾಳವೆಂದರೆ ಈ ಫಿರೂಜ್‌ಖಾನನು. ಖಾನನ ಯಾವ ಗುಪ್ತಕಾರ್ಯವೂ ಈತನ ಸಲಹೆಯಿಲ್ಲದಿದ್ದರೆ ನಡೆಯದು. ಫಿರೂಜಖಾನನು ಒಳಕ್ಕೆ ಬಂದೊಡನೆಯೆ, ಹಮಿಾದಳು ಎದ್ದು ಇನ್ನೊಂದು ಬಾಗಿಲಿಂದ ಹೊರಟು ನಡೆದಳು. ಬಂದಿದ್ದವನನ್ನು ಕುಳಿತುಕೊಳುವಂತೆ ಖಾನನು ಹೇಳಿದ. 'ಹುಶ್' ಎಂದು ಜಡಭಾವವನ್ನು ತೋರುತ್ತ, ಫಿರೂಜ್‌ಖಾನನು ಜೋಲುಮೈಯಿಂದ ಕುಳಿತುಕೊಂಡ; ಗಂಟಲೊಣಗಿದ ದನಿಯಿಂದ ಮಾತಿಗೆ ಮೊದಲುಮಾಡಿದ:

"ನಮ್ಮ ಪರೀಕ್ಷೆಯ ಕಾಲವೇ ಬಂದಂತಾಯಿತಲ್ಲ; ಇದುವರೆಗೆ ಕಲಬುರ್ಗೆಯಿಂದ ಯಾವ ಸುದ್ದಿಯೂ ಬರಲಿಲ್ಲ! ನಮ್ಮ ಕಾಗದದಂತೆ ನೋಡಿದರೆ, ಈಗ ಮೂರುನಾಲ್ಕು ದಿನಗಳಿಂದಲೂ ಬೇರೆ ಬೇರೆ ಗುಂಪುಗಳು ಬರಬೇಕಾಗಿದ್ದಿತು!"

"ಎಂತಹ ಸಂದರ್ಭ ನೋಡು ಫಿರೂಜ್! ಇಲ್ಲಿಂದ ಹೋಗಿದ್ದ ಕುದುರೆಯಾಳುಗಳಾದರೂ ಮರಳಿ ಬರಬಾರದೇ? ಅವರು ಬಂದಿದ್ದರೆ, ಅಲ್ಲಿಯ ಪರಿಸ್ಥಿತಿಯೇನೆಂಬುದಾದರೂ ಗೊತ್ತಾಗುತ್ತಿದ್ದಿತು. ಬೇಕಾಗಿದ್ದರೆ ಮದುವೆಯ ದಿನವನ್ನು ಇನ್ನೂ ನಾಲ್ಕುದಿನ ಮುಂದೆಹಾಕುವಂತೆ ಕೇಳಿಕೊಳ್ಳಲಿಕ್ಕೆ ಆಗುತ್ತಿದ್ದಿತು."

"ಈಗ ಅದೇ ವಿಷಯವನ್ನೇ ತಮ್ಮೆದುರು ಮಾತನಾಡಲಿಕ್ಕೆಂದು ಬಂದಿದ್ದೇನೆ. ನಾವು ಕಳುಹಿದ ಕುದುರೆಯಾಳುಗಳು, ಕಲಬುರ್ಗೆಯವರೆಗೆ ಹೋಗಿ ಹತ್ತಿದ್ದಾರೋ ಇಲ್ಲವೋ.. ಎಂದು ನನಗೆ ಸಂಶಯ ಬರುತ್ತಲಿದೆ."

ಗಾಬರಿಯ ದನಿಯಲ್ಲಿ ನಾಷೀರ್‌ಖಾನನು ಕೇಳಿದ:

"ಅದೇನು?"

"ಅದೇನೆಂದರೆ: ದಿಲಾವರ್‌ಖಾನನನ್ನು ಹುಡುಕಲಿಕ್ಕೆಂದು

ಹೋಗಿದ್ದ ನಮ್ಮ ಆಳುಗಳಿಬ್ಬರು, ಇದೀಗ ಸುದ್ದಿಯೊಂದನ್ನು ತಂದಿದ್ದಾರೆ. ಕಲಬುರ್ಗೆಯ ದಾರಿಯಲ್ಲಿ, ಆನೆಗೊಂದೆಯಿಂದ ಒಂದೆರಡು ಹರಿದಾರಿಗಳ ಅಂತರದ ಮೇಲೆ, ಒಂದೆರಡು ಕಡೆಯಲ್ಲಿ ನೆತ್ತರು ಹರಿದುದನ್ನು ಅವರು ಕಂಡರಂತೆ; ಅದೇನೆಂದು ಅತ್ತಿತ್ತ ಸೂಕ್ಷ್ಮವಾಗಿ ನೋಡುತ್ತ ಹತ್ತಿರದಲ್ಲೆಲ್ಲ ತಿರುಗಾಡಿದರಂತೆ. ದಾರಿಯ ಬಲಗಡೆಯ ಕಾಡಿನಲ್ಲಿ, ಮನುಷ್ಯರಿಬ್ಬರ ಹಜ್ಜೆಯ ಜಾಡನ್ನು ಕಂಡು, ಅದರೊಂದಿಗೆ ನಡೆದು ಒಳಗಾಡಿಗೆ ಹೋದರಂತೆ. ಅಲ್ಲಿ ಅವರಿಗೆ ಪ್ರಾಣಿಗಳು ಕೊಳೆತು ನಾರುವ ನಾತ ವಿಪರೀತವಾಗಿ ಕಂಡುಬಂದಿತಂತೆ. ಅದು ಎಲ್ಲಿಂದ ಬರುವುದೆಂಬುದನ್ನು ನೋಡುತ್ತ ಹಾಗೆಯೆ ಮುಂದಕ್ಕೆ ಹೋಗುತ್ತಿರುವಲ್ಲಿ, ಗಿಡ-ಗಂಟಿಗಳು ಮುಚ್ಚಿಕೊಂಡಿದ್ದ ಹಳ್ಳವೊಂದರಿಂದ ಆ ನಾತ ಬರುತ್ತಿದ್ದಂತೆ ತಿಳಿಯಿತಂತೆ. ಅಲ್ಲಿಗೆ ಹೋಗಿ, ಮರೆಯ ಗಿಡ-ಗಂಟಿಗಳನ್ನು ಬದಿಗೆ ಸರಿಸಿ ನೋಡಿದರೆ, ತೀರ ಕೊಳೆತುಹೋದುದರಿಂದ ಗುರುತುಹತ್ತದಂತಾಗಿದ್ದ ಎರಡು ಮನುಷ್ಯದೇಹಗಳು, ಒಂದರ ಮೇಲೊಂದು ಬಿದ್ದುಕೊಂಡಿದ್ದುವಂತೆ! ''

ನಾಸೀರ್ ಮಹಮ್ಮದನ ನರ-ನರಗಳೂ ನಡುಗಿದುವು; ಎದೆಯೊಡೆದ ಧ್ವನಿಯಲ್ಲಿ, ಎಚ್ಚರವಿಲ್ಲದವನಂತೆ ಕೂಗಿಕೊಂಡ:

"ಅಯ್ಯೋ! ಏನೋ ಮೋಸ ನಡೆದು ಹೋಗಿದೆ! ನರಸಿಂಹ-ನಾಯಕನು.. ಪಿಶಾಚಿ!''

"ಈ ಸುದ್ದಿಯನ್ನು ಕೇಳಿದಾಗಿನಿಂದ, ಮೋಸ ನಡೆದಿರಬಹುದೆಂಬುದರ ವಿಷಯದಲ್ಲಿ ನನ್ನ ಸಂಶಯ ಹೆಚ್ಚುತ್ತ ನಡೆದಿದೆ. ಇಲ್ಲದಿದ್ದರೆ ಇದುವರೆಗೆ ಕಲಬುರ್ಗೆಯಿಂದ ಯಾವ ವರ್ತಮಾನವೂ ಬಾರದೆ ಇರುತ್ತಿದ್ದಿತೇ? ನಮ್ಮ ಕಾಗದವೇ ಅಲ್ಲಿ ತಲ್ಪಿರದಿದ್ದರೆ, ಅವರಾದರೂ ಮಾಡಬೇಕೇನು?''

ನಾಸೀರ್‌ಖಾನನು ಹುಚ್ಚುಹಿಡಿದಂತೆ ಹೇಗೆಹೇಗೋ ನೋಡುತ್ತ ಕೆಲವು ನಿಮಿಷ ಸುಮ್ಮಗೆ ಕುಳಿತಿದ್ದು, ಬಳಿಕ ನಿರುಪಾಯದ ಸ್ವರದಲ್ಲಿ ಕೇಳಿದನು:

"ಫಿರೂಜ್, ನಾವೀಗ ಏನು ಮಾಡಬೇಕು?''

"ಇನ್ನೇನು ಮಾಡುವುದು? ರಾಯನಿಗೆ ಹೇಳಿ ಮದುವೆಯ ದಿನವನ್ನು ಇನ್ನಿಷ್ಟು ದಿನ ಮುಂದೆ ಹಾಕಿಸಬೇಕು; ಕಲಬುರ್ಗಿಯ ವರೆಗೆ ನಾನೇ ಹೋಗಿ, ನಿಜಸ್ಥಿತಿಯನ್ನು ತಿಳಿದುಕೊಂಡು ಬರುತ್ತೇನೆ. ನಾಲ್ಕೈದು ದಿನಗಳಲ್ಲಿಯೆ ಬಂದುಬಿಡುತ್ತೇನೆ."

ನಾಸೀರ್‌ಖಾನನು ಮತ್ತೆ ಹಾಗೆಯೇ ವಿಚಾರಮಗ್ನನಾಗಿ, ಸುಮ್ಮಗೆ ಕುಳಿತುಕೊಂಡನು. ಒಂದೆರಡು ನಿಮಿಷ ಉತ್ತರದ ದಾರಿಯನ್ನು ಕಾಗು, ಫಿರೂಜನು ಮರಳಿ ಮಾತನಾಡಿದನು:

"ಇನ್ನು ಬೇರೆ ವಿಚಾರವಿದೆಯೇನು? ಹೀಗೆ ಮಾಡಿದ ಹೊರತು ಗತಿಯಿಲ್ಲ; ನೀವು ವಿರೂಪಾಕ್ಷರಾಯನ ಬಳಿಗೆ ಹೋಗಿ, ಮದುವೆಯ ದಿನದ ಅವಧಿಯನ್ನು ಹೆಚ್ಚಿಸಿಕೊಂಡು ಬಂದು ಬಿಡಿ! ನಾನು ಇಂದು ಹೊರಟೇ ಹೊರಡುತ್ತೇನೆ."

ನಿರಾಶೆಯ ದನಿಯಲ್ಲಿ ನಾಸೀರನೆಂದ:

"ಈ ಹದಿನಾರು ದಿನಗಳನ್ನು ಕಳೆಯಬೇಕಾದರೆಯೇ ಆತನಿಗೆ ಹದಿನಾರು ವರ್ಷ ಕಳೆದಂತಾಗಿದೆ. ನನ್ನ ಮಾತನ್ನು ಕೇಳಿ, ಮದುವೆ ಮುಂದೆ ಹಾಕಲು ಸಮ್ಮತಿ ಕೊಡದಿದ್ದರೆ ಮಾತ್ರ ತುಂಬ ಕಷ್ಟಕ್ಕಿಡುವುದು. ಹೋಗಿ ಪ್ರಯತ್ನವನ್ನಂತೂ ಮಾಡಿ ನೋಡುತ್ತೇನೆ!"

---

## ೨೬ನೆಯ ಪರಿಚ್ಛೇದ

ಮರುದಿನ ಬೆಳಗಾಗಿ ಏಳುವುದರಲ್ಲಿಯೆ ವಿಜಯನಗರದ ಹುಡುಗರು–ಮುದುಕರು ಮೊದಲುಮಾಡಿ ಎಲ್ಲರಬಾಯಲ್ಲಿಯೂ ಒಂದೇ ಒಂದು ಮಾತು:

"ದಂಡನಾಯಕರಾದ ವೆಂಕಟನಾಯಕರೂ ಮುಖ್ಯ ದಳಪತಿಯಾದ ದೇವಣ್ಣನಾಯಕನೂ—ಇದ್ದುದಿದ್ದಹಾಗೆಯೆ— ರಾತ್ರಿಯಲ್ಲಿ ಮನೆಯಿಂದ ಮಾಯವಾಗಿರುವರಂತೆ!"

ಈ ಮಾತಿನ ಬಗೆಗೆ ಅಲ್ಲಲ್ಲಿ ಮಾತು-ಕತೆಗಳು; ವಿಚಾರ-ತರ್ಕಗಳು. ಒಬ್ಬೊಬ್ಬರ ತರ್ಕ ಒಂದೊಂದು ಬಗೆ:

"ಬೇಕಾದುದಾದರೂ ದಂಡನಾಯಕರೂ ಸೇನಾಪತಿಗಳೂ ಹಿಂದೂಧರ್ಮದ ಅಭಿಮಾನಿಗಳು. ಕಂಡೂ ಕಂಡೂ ತುರುಕರ ಹೆಣ್ಣನ್ನು ದೊರೆಯು ಮದುವೆ ಮಾಡಿಕೊಳ್ಳುತ್ತಿರುವಾಗ, ಅದನ್ನು ಸುಮ್ಮಗೆ ನೋಡುತ್ತಿರುವುದಕ್ಕೆ ಯಾರಿಂದಾದೀತು ?"

"ಅವರಿಗೆಲ್ಲಿಯ ಧರ್ಮಾಭಿಮಾನ ಬಿಡಿ—ಸ್ವಾಮಿ! ಇನ್ನೂ ಅಷ್ಟು ಅಧಿಕಾರ—ಹಣ ಸಿಕ್ಕುತ್ತದೆಂದರೆ ನಾಷೀರ್‌ಖಾನನ ಮನೆಗೆ ಮದುವೆಯೂಟಕ್ಕೆ ಕೂಡ ಹೋಗಬಹುದು. ಆದರೆ. . ಏನೋ ತಮಾಷೆ ಯಿದೆ; ನಾಷೀರ್‌ಖಾನನ ಮನೆಗೆ ಹಲವು ಜನ ಸ್ನೇಹಿತರು ಬರಲಿಕ್ಕಿದ್ದ ರಂತೆ; ಒಬ್ಬರೂ ಬಂದಿಲ್ಲ ಇದುವರೆಗೆ. ಈಗ ಅಕಸ್ಮಾತ್ತಾಗಿ ದಂಡ-ನಾಯಕ, ಸೇನಾಪತಿ ಮಾಯವಾಗಿದ್ದಾರೆ! ನಮ್ಮಪ್ಪ ನರಸಿಂಹ-ನಾಯಕರು ಎಷ್ಟೋ ದಿನಗಳಿಂದ ಹೊರಗಿಂದ ಹೊರಗೇ ಅಡ್ಡಾಡುತ್ತ ಲಿದ್ದಾರೆ. ಅಣ್ಣಾಜಿಯವರೂ ಒಮ್ಮೆಲೆ ರಾಜಧಾನಿಯನ್ನು ಬಿಟ್ಟು ಹೋಗಿದ್ದಾರೆ. ಅವರದೇ ಏನಾದರೂ ತಂತ್ರ ನಡೆದಿರಬಹುದೆಂದು ನನಗೆನಿಸುತ್ತಿದೆ ನೋಡಿ!"

"ಬಿಡಪ್ಪಾ, ಎಲ್ಲಿಯ ಅಣ್ಣಾಜಿಯನ್ನು ತಂದಿದ್ದೀಯೇ? ಅಣ್ಣಾಜಿ ಯವರು ಸೆರೆಮನೆಯಲ್ಲಿ ಕೊಳೆಯುತ್ತ ಬಿದ್ದು ಎಷ್ಟೋ ದಿನಗಳಾದುವು! ನೋಡು, ಅದು ನನ್ನೊಬ್ಬನ ಹೊರತು ಯಾರಿಗೂ ಗೊತ್ತಿಲ್ಲ!"

"ಇವನೊಬ್ಬ ದೊಡ್ಡ ಮನುಷ್ಯ! ತನ್ನ ಹೊರತು ಯಾರಿಗೂ ಗೊತ್ತಿಲ್ಲವಂತೆ. ಅಣ್ಣಾಜಿಯನ್ನು ಸೆರೆಯಲ್ಲಿ ಹಾಕಿದ ದಿನವೇ ನನಗೆ ಗೊತ್ತಾಗಿದೆ!"

"ಯಾರು? ವಿರೂಪಾಕ್ಷರಾಯರೇ ಅವರನ್ನು ಸೆರೆಯಲ್ಲಿ ಇರಿಸಿದ್ದಾರೆಯೆ?"

"ಇನ್ನಾರು ಇರಿಸಬೇಕು. . ಹೇಳಿ!"

"ಅಯ್ಯೋ! ಪಾಪ! ಚಿನ್ನದಂತಹ ಮನುಷ್ಯ!"

" ಅಧಿಕಾರದ ಮುಂದೆ ಚಿನ್ನದಂತಹ ಮನುಷ್ಯನೇನು.., ರನ್ನದಂತಹ ಮನುಷ್ಯನೇನು ? "

" ಅದೇನೋ ಆಯಿತಪ್ಪಾ ! ಈಗ ಮೊದಲು ಇದನ್ನು ಹೇಳಿ; ದಂಡನಾಯಕರು ದಳಪತಿ ಹೋಗಿರಬಹುದಾದರೂ ಎಲ್ಲಿಗೆ? ಅವರ ಮನೆಯ ಹೆಂಗುಸರಿಗೆ ಮಕ್ಕಳಿಗೆ ಕೂಡ ಯಾವ ಸುದ್ದಿಯೂ ಇಲ್ಲವಂತೆ. "

" ಒಂದು ಚಮತ್ಕಾರವನ್ನು ಕೇಳಿದ್ದೀಯಾ? ಅವರ ಮನೆಯ ಹೆಂಗುಸರು ಮಕ್ಕಳು, ಮೇಲೆ ಮಾತ್ರ ವ್ಯಸನದ ವೇಷ ಹಾಕಿಕೊಂಡಿದ್ದಾರಂತೆ; ಒಳಗೊಳಗೆ ನಿಶ್ಚಿಂತೆಯಿಂದ ಇದ್ದಾರಂತೆ! "

" ಇದೊಂದು ಯಕ್ಷಿಣಿಯ ಆಟವೇ ಆಗಿದೆಯಪ್ಪಾ ! "

" ಹಳೆಯ ಕಣ್ಣು, ಹೊಸಹೊಸ ತಮಾಷೆ ; ಏನಾಗುವುದೋ ನೋಡುತ್ತ ಹೋದರಾಯಿತು. ಊರು ಸುಟ್ಟರೆ ಹನುಮಂತರಾಯ ಹೊರಗೆ! ಯಾವ ರಾಯ ಬಂದರೂ ನಮಗೆ ನಮ್ಮ ರಾಗಿಯ ಮುದ್ದೆ ತಪ್ಪಿದುದಲ್ಲ. ಇಲ್ಲದ ತರ್ಕ-ವಿತರ್ಕ ನಮಗೆ ಯಾತಕ್ಕೆ ಬೇಕು ? "

" ಈ ಮಾವನದೊಂದು ಮಾತೇ ! ನಾಳೆ ಯುದ್ಧಗಿದ್ಧ ನಡೆಯಲಿ ! ನಿನ್ನ ಊರ ಹೊರಗಿನ ಹನುಮಂತರಾಯ, ಮೈ ಸುಟ್ಟುಕೊಳ್ಳದೆ ಉಳಿಯುತ್ತಾನೋ ಏನೋ ನೋಡುವೆಯಂತೆ. ಆಗ ನಿನಗೆ, ರಾಗಿಯ ಮುದ್ದೆಯಷ್ಟೇ ಅಲ್ಲ, ಮಣ್ಣಿನಮುದ್ದೆ ಕೂಡ ದೊರೆಯುವುದು ಕಠಿನವಾದೀತು ! "

ಬೆಳಗಿನಿಂದ ಸಂಜೆಯವರೆಗೂ ಜನಸಾಮಾನ್ಯರಲ್ಲಿ ಇದೇ ಬಗೆಯ ಚರ್ಚೆಗಳೆ! ಒಬ್ಬರ ವಿಚಾರಕ್ಕೂ ಒಂದು ಸ್ಥಿರತೆಯಿರಲಿಲ್ಲ. ಸೇನಾಪತಿ-ದಂಡನಾಯಕರು ಇಲ್ಲದಂತಾದುದನ್ನು ಕೇಳಿದೊಡನೆಯೆ, ವಿರೂಪಾಕ್ಷರಾಯನ ಎದೆಯಲ್ಲಿ ಆಲಿಕಲ್ಲನ್ನು ಹಾಕಿದಂತಾಯಿತು. ಅಷ್ಟರಲ್ಲಿಯೆ ರೋಷನಾರಳ ಪಾಣಿಗ್ರಹಣದ ರಮಣೀಯವಾದ ಸ್ಮರಣೆಯು ಮುಂದೆ ಬಂದುನಿಂತು, ಹೃದಯದ ನಿರುತ್ಸಾಹವನ್ನು ಹೊಡೆದೋಡಿಸಿತು. ಆಗದವರು ಬಂದು, ದಂಡನಾಯಕ–ದಳಪತಿಗಳ ವಿಚಾರದಲ್ಲಿ ಅಲ್ಲದ ಸಲ್ಲದ ಮಾತುಗಳನ್ನು ರಾಯನ ಕಿವಿಯಲ್ಲಿ ಊದಿದರು. ತಾನು ತುರುಕರವಳನ್ನು

ಮದುವೆಯಾಗುತ್ತಿರುವುದಕ್ಕಾಗಿ, ಅವರಿಬ್ಬರೂ ತಮ್ಮ ಅತೃಪ್ತಿಯನ್ನು ವ್ಯಕ್ತಪಡಿಸಲಿಕ್ಕೆಂದೇ ಮಾಯವಾಗಿದ್ದಾರೆಂದು ರಾಯನಿಗೆ ಖಂಡಿತವಾದ ನಂಬುಗೆಯಾಯಿತು. ರೋಷವು ಹೊಟ್ಟೆಯಲ್ಲಿ ಉರಿಯಲು ತೊಡಗಿತು. ಆತನು ಅವರಿಬ್ಬರನ್ನೂ, ಆಗಲೆ ಅವರವರ ಅಧಿಕಾರಗಳಿಂದ–ತನ್ನ ಮನೋರಾಜ್ಯದ ಆಡಳಿತದಲ್ಲಿಯೆ– ಕಿತ್ತೊಗೆದು ಬಿಟ್ಟ.

ಆನೆಗೊಂದೆಯಲ್ಲಿದ್ದ ಸಣ್ಣ ಸೈನ್ಯದ ದಳಪತಿಯಾಗಿದ್ದ ಇರುಗನಾಯಕನನ್ನು ರಾಯನು ಕೂಡಲೆ ಕರೆಯಿಸಿದನು. ಮುಖ್ಯ ದಳಪತಿಯ ಅಧಿಕಾರವನ್ನು–ಮಧ್ಯಾಹ್ನದಲ್ಲಿಯೆ–ಆತನಿಗೆ ಒಪ್ಪಿಸಿಕೊಟ್ಟುಬಿಟ್ಟನು. ಮುಖ್ಯ ಸೈನ್ಯಾಧಿಕಾರಿಯಾಗ ಇರುಗನಾಯಕ. ಆದರೆ ಇಂದು ಮುಖ್ಯಸೈನ್ಯಕ್ಕೆ ಸಂಪೂರ್ಣವಾಗಿ ವಿಶ್ರಾಂತಿ. ನಗರರಕ್ಷಣೆಗಾಗಿಯೂ ಮದುವೆಯ ಮೆರೆವಣಿಗೆಗಾಗಿಯೂ ಆನೆಗೊಂದೆಯ ಚಿಕ್ಕ ಸೈನ್ಯದ ಜನರನ್ನೇ ಇರುಗನಾಯಕನು ನಿಯಮಿಸಿ ಬಿಟ್ಟಿದ್ದ.

ರಾಜಾಜ್ಞೆಯನ್ನು ಅಪೇಕ್ಷಿಸದೆಯೆ ಇರುಗನಾಯಕನು, ನಗರದ ಬೀದಿಬೀದಿಗಳನ್ನೂ ಸಿಂಗರಿಸಲು ಜನರಿಗೆ ಕಟ್ಟಪ್ಪಣೆ ಮಾಡಿದ; ಸಂಜೆಯೊಳಗಾಗಿಯೆ ನಗರದಲ್ಲಿ ಎಲ್ಲೆಲ್ಲಿಯೂ ಕೃತ್ರಿಮವಾದ ಬೀದಿಬಾಗಿಲುಗಳು, ಗುಡಿ-ತೋರಣಗಳು ಮೆರೆಯಲು ತೊಡಗಿದುವು. ಲಾಮಂಚದ ನೀರಿನಿಂದ ತೊಯ್ದ ಬೀದಿಗಳು, ಜನರ ಮನಸ್ಸನ್ನು ತಣಿಸಿ 'ಅಹಹ!' ಎಂದು ಎನ್ನಿಸುವಂತೆ ಆದುವು. ಮುಖ್ಯಬೀದಿಗಳ ಪ್ರತಿಯೊಂದು ಮನೆಯ ಬಾಗಿಲಲ್ಲಿಯೂ ವಿವಿಧವರ್ಣರಂಜಿತವಾದ ರಂಗವಲ್ಲಿಗಳು. ಇರುಗನಾಯಕನ ಏರ್ಪಾಡನ್ನು ಬೇರೆಬೇರೆಯವರಿಂದ ಕೇಳಿ,ವಿರೂಪಾಕ್ಷರಾಯನು ಸಂತೃಪ್ತಮನದವನಾಗಿದ್ದನು.

ರಾತ್ರಿಯ ಆರುಗಳಿಗೆಗೆ ಮದುವೆ; ಹೊತ್ತು ಮುಳುಗಿ ಈಗ ಮೂರು ಮೂರುವರೆ ಗಳಿಗೆಯಾಗಿರಬಹುದು. ಅರಮನೆಯ ಒಳಕ್ಕೂ ಹೊರಕ್ಕೂ ದೀಪದ ಸಾಲುಗಳು, ಬಗೆಬಗೆಯ ಬಣ್ಣದ ಗಾಜುಗಳೊಳಗೆ ಉರಿಯುತ್ತಲಿವೆ. ವಿಜಯನಗರದ ಅರಸರ ವೈಭವವು ಒಮ್ಮೆಲೆ ವ್ಯಕ್ತವಾಗುವಂತೆ, ಮದುವೆಯ ಓಲಗಸಾಲೆ ಸಿಂಗಾರಗೊಂಡು ಜಗಜಗಿಸುತ್ತಲಿದೆ. ಕಂಪಿನೆಣ್ಣೆಯ, ಅಗರುಬತ್ತಿಯ ಹೊಗೆಯ ವಾಸನೆಯು

ಅರಮನೆಯ ವಾತಾವರಣದಲ್ಲಿ ತುಂಬಿಕೊಂಡು, ಹೊರಗಿನ ಗಾಳಿಯಲ್ಲಿ ಸೇರಿ, ಸುತ್ತಲೂ ಸುಳಿಯುತ್ತಲಿದೆ. ಓಲಗದವರಿಗಾಗಿ ನಿರ್ಮಿಸಿದ್ದ ಮೇಲುನೆಲೆಗಳಲ್ಲಿ, ಸಂದರ್ಭೋಚಿತವಾದ ಬೇರೆ ಬೇರೆ ರಾಗಗಳೊಂದಿಗೆ ವಿವಿಧವಾದ್ಯಗಳು ಮೊರೆಯುವುದರಲ್ಲಿವೆ. ಎಲ್ಲೆಲ್ಲಿಯೂ ಕಣ್ಣುಗಳಿಗೆ ಹಬ್ಬ; ಮೂಗಿಗೆ ಔತನದೂಟದ ದಿನ; ಕಿವಿಗಳಿಗೆ ಸ್ವರ್ಗಸುಧೆಯ ಪಾನದ ಸಮಯ. ವಿರೂಪಾಕ್ಷರಾಯನ ವೈಭವಜೀವನದಲ್ಲಿ ಯಾವ ವಿಲಾಸಕ್ಕೆ ಏನು ಕೊರತೆ?

ಮದುವೆಯ ಸಮಯಕ್ಕೆ ಇನ್ನು ಎರಡುಗಳಿಗೆ ಮಾತ್ರ ಉಳಿದಿದ್ದಿತು. ವಧೂ-ವರರು ಪರಸ್ಪರರಿಗೆ ಹೂಮಾಲೆ ಹಾಕಿದರೆ ಮದುವೆಯ ಕಾರ್ಯ ಮುಗಿದಂತಾಯಿತೆಂದು, ಎರಡೂ ಧರ್ಮದ ಪುರೋಹಿತರು ತಮ್ಮ ನಿರ್ಣಯಕೊಟ್ಟಿದ್ದರು. ನಾಸೀರ್‌ಮಹಮ್ಮದನ ಮನೆಯಲ್ಲಿ, ಮದುಮಗಳನ್ನು ಸಿಂಗರಿಸುವ ಕೆಲಸ ' ಯಾವರೀತಿಯಿಂದ ನಡೆದಿದ್ದಿತೇನೋ! ಅರಮನೆಯಿಂದ ರಾಶಿರಾಶಿಯಾಗಿ ಪಸದನಗಳು—ಇಳಿಹೊತ್ತಿನಲ್ಲಿಯೆ—ಖಾನನ ಮನೆಗೆ ಹೋಗಿದ್ದುವು.

ವಿರೂಪಾಕ್ಷರಾಯನ ಹೃದಯ-ಮನಸ್ಸುಗಳು, ಉಲ್ಲಾಸದಿಂದ—ಎಡೆಬಿಡದೆ— ಲಾಸ್ಯವಾಡುತ್ತಿದ್ದುವು. ಅವನು ಕುಳಿತಲ್ಲಿ ಕುಳಿತಿರನು; ನಿಂತಲ್ಲಿ ನಿಂತಿರನು. ಅರಮನೆಯ ಶೃಂಗಾರದ ಸಡಗರವನ್ನು, ಆಗಾಗ ಸುತ್ತಿ ಸುಳಿದು ನೋಡಿ ಬರುವನು; ಸಮ್ರಾಟನ ಗಾಂಭೀರ್ಯವನ್ನೂ ಆತನ ಉತ್ಸಾಹವು ಇಲ್ಲದಂತಾಗಿಸಿಬಿಟ್ಟಿದ್ದಿತು. ಎಲ್ಲರೊಡನೆಯೂ ನಗುತ್ತ ನಲಿಯುತ್ತ ಮಾತನಾಡುತ್ತಿದ್ದನು.

ಮದುವೆಯ ಸಮಯ ಸಮೀಪಿಸಲು, ರಾಯನು ತನ್ನ ಪ್ರಸಾಧನ-ಭವನಕ್ಕೆ ಹೋಗಿ, ಮದುಮಗನ ಉಡುಗೆ-ತೊಡಿಗೆ ಇಟ್ಟುಕೊಳ್ಳಲು ತೊಡಗಿದನು. ಜಕ್ಕನು ಬೇಕಾದುವನ್ನು ಆಯ್ದು ಆಯ್ದು ತಂದು ಮುಂದಿಡುವನು; ಅದರಲ್ಲಿಯೂ ಮತ್ತೆ "ತನಗೀಗ ಯಾವುದು ಸರಿಯಾಗಬಹುದು..!" ಎಂದು, ಯೋಚನೆಯ ನೋಟಗಳಿಂದ ರಾಯನು ನಿಟ್ಟಿಸಿ ನಿಟ್ಟಿಸಿ ನೋಡುವನು. ಕೊನೆಗೆ ಕೆಲವು ವಸ್ತ್ರಾಲಂಕಾರಗಳ ಕೊನೆಯ ಆಯ್ಕೆಯು ಆಯಿತು. ಜಕ್ಕನು ಒಂದೊಂದಾಗಿ ತೆಗೆದು

ಕೊಂಡು, ಉಡಿಸಲು ತೊಡಿಸಲು ತೊಡಗಿದನು. ಅಲ್ಲಲ್ಲಿ ಬೇರೆ ಬೇರೆ ಬಣ್ಣದ ಹರಳಿಟ್ಟು, ಜರಿಯ ಹೂಬಳ್ಳಿ ತೆಗೆದ ಬಿಳಿಯ ಚೆಲ್ಲಣವನ್ನು ತೊಡಿಸಿ ಆಯಿತು. ತಾರೆಗಳು ತೊಳಗುವ ಆಗಸವನ್ನೇ ಕತ್ತರಿಸಿ ಮಾಡಿರಬಹುದೇನೋ .. ಎಂಬಂತಿರುವ ಮುಗಿಲುಬಣ್ಣದ ಜರಿಯ ಹೂವಿನ ನಿಲುವಂಗಿಯನ್ನು ತೊಡಿಸಿ, ಎದೆಯ ಕಸೆಗಳನ್ನು ಕಟ್ಟುತ್ತಿರುವಾಗಲೆ, ಬಾಗಿಲಾಳೊಬ್ಬ ಅಲ್ಲಿಗೆ ಬಂದ; ಬಗ್ಗಿ ಸಮುಸ್ಕಾರಮಾಡಿ ಹೇಳಿದ:

"ಮಹಾಪ್ರಭುಗಳಲ್ಲಿ ವಿಜ್ಞಾಪನೆ! ನಾಸೀರ್‌ಖಾನರ ಕಡೆಯಿಂದ ಒಬ್ಬ ಮನುಷ್ಯ ಬಂದಿದ್ದಾನೆ; ಒಡೆಯರ ಬಳಿಯಲ್ಲಿ ಅದೇನೋ ಮಹತ್ತ್ವದ ಕೆಲಸವಂತೆ!"

ರಾಯನು ಆತುರದ ಧ್ವನಿಯಲ್ಲಿ ಹೇಳಿದನು:

"ಆತನನ್ನು ಇಲ್ಲಿಗೆ ಕಳುಹಿಸಿಕೊಡು!"

ಒಂದೆರಡು ನಿಮಿಷಗಳಲ್ಲಿಯೆ ಮಹಮ್ಮದೀಯ ಸೀಪಾಯಿಯೊಬ್ಬ ಪ್ರಸಾಧನಭವನದೊಳಕ್ಕೆ ಬಂದ; ನೆಲಕ್ಕೆ ಮಣಿದು ಮುಜುರೆ ಮಾಡಿದ. ವಿರೂಪಾಕ್ಷರಾಯನು ಸಿಂಗರಿಸಿಕೊಳ್ಳುವುದನ್ನು ನಿಲ್ಲಿಸಿ, ತವಕಗೊಂಡವನಾಗಿ ಕೇಳಿದ:

"ಮತ್ತೇನು ಸಮಾಚಾರ?"

"ತೀರ ಮಹತ್ತ್ವದ ಸಂಗತಿ! ತಮ್ಮೊಬ್ಬರಿಗೇ ಅದು ಗೊತ್ತಾಗಬೇಕೆಂದು ಖಾನ್‌ಸಾಹೇಬರು ಹೇಳಿದ್ದಾರೆ!"

ಮಹಾರಾಜರು ಜಕ್ಕನನ್ನು ನೋಡುತ್ತ ಹೇಳಿದರು:

"ಜಕ್ಕಾ! ಇವನ ಮಾತನ್ನು ನಾನು ಕೇಳಿಕೊಳ್ಳಬೇಕು! ಅದುವರೆಗೆ ನೀನು ರಾಣೀವಾಸಕ್ಕೆ ಹೋಗಿ, ರುದ್ರಮ್ಮನನ್ನು ಕಂಡುಬರಬೇಕು! 'ಇಂದಿನ ಮದುವೆಯ ಮಂಟಪದಲ್ಲಿ, ಹೇಮಾಂಬಿಕೆಯನ್ನು ಒತ್ತಾಯದಿಂದಾದರೂ ತಂದು ಕುಳ್ಳಿರಿಸಲೆಬೇಕು' ಎಂದು ಅವಳಿಗೆ ಮತ್ತೆ ಮತ್ತೆ ಹೇಳಬೇಕು! ತಿಳಿಯಿತೇ? ಹೋಗಿ ಬೇಗನೆ ಬಾ!"

ಪ್ರಸಾಧನಶಾಲೆಯಲ್ಲಿ ವಿರೂಪಾಕ್ಷರಾಯನೊಬ್ಬ, ಮಹಮ್ಮದೀಯನಾದ ಸೀಪಾಯಿಯೊಬ್ಬ .... ಇಬ್ಬರೆ. ಜನರ ಗಲಾಟೆಯೆಲ್ಲ

ಮದುವೆಯ ಮಂಟಪದ ಬಳಿಯಲ್ಲಿ ; ಜಕ್ಕನು ಹೊರಟು ಹೋದೊಡನೆಯೆ ರಾಯ ಕೇಳಿದ :

" ಅದೇನು ಅಂತಹ ಮಹತ್ತ್ವದ ಮಾತು ? "

ಸೀಪಾಯಿಯು ತನ್ನ ಕೈಯಿಂದ ದಾಡಿ-ಮಿಸೆಗಳನ್ನು ಕಿತ್ತುಕೊಂಡು ನಿಂತು, ಹೇಳಿದ :

" ನಾನು ಹೇಳಬೇಕಾಗಿದ್ದುದು ತುಂಬ ಮಹತ್ತ್ವದ ಮಾತು ! ಕೇಳಬೇಕಾಗಿದೆಯೇ ನಿಮಗೆ ? "

ರಾಯನು ಬೆದರುಗಣ್ಣುಗಳಿಂದ ಸೀಪಾಯಿಯನ್ನು ನಿಟ್ಟಿಸಿ ನೋಡಿದ. ಬಳಿಕ ಗಾಬರಿಯ ಧ್ವನಿಯಲ್ಲಿ, ರೋಷದ ಆವಿರ್ಭಾವವನ್ನು ತಂದುಕೊಂಡು ಮಾತನಾಡಿದ :

" ಯಾರು ..? ರಾಜಶೇಖರನೇ ..? ನಿನ್ನನ್ನು ಸೆರೆಮನೆಯಿಂದ ಬಿಟ್ಟವರಾರು ? "

ಅಣಕದ ದನಿಯಲ್ಲಿ ರಾಜಶೇಖರನು ಹೇಳಿದ :

" ನಿಮ್ಮ ಪಾತಕವು ಬಿಡಿಸಿತು ! ಇನ್ನಾರೂ ಅಲ್ಲ ! "

" ಪಾತಕವಂತೆ ಪಾತಕ ! ಹುಚ್ಚುಕುನ್ನಿ ! "

" ಹುಚ್ಚುಕುನ್ನಿಯ ಲಕ್ಷಣವೆಂದರೆ ವ್ಯರ್ಥವಾಗಿ ಬೊಗಳುತ್ತಿರುವುದು ! "

" ಸರಿ ! ನಿನ್ನ ಆಯುಷ್ಯಕ್ಕೆ ಇಂದೆಯೆ ಕೊನೆಯ ದಿನವೇನೊ ! "

" ನನ್ನ ಆಯುಷ್ಯಕ್ಕೆ ಕೊನೆಯ ದಿನವಲ್ಲ ; ನಿಮ್ಮ ಆಯುಷ್ಯಕ್ಕೆ! ಇನ್ನುಳಿದವರೇನಾದರೂ ಮಾಡಿದರೆ, ವ್ಯರ್ಥವಾಗಿ ರಾಜ್ಯದಲ್ಲಿ ದೊಂಬೆಗಲಾಟೆಗಳೇಳುವ ಸಂಭವವಿದ್ದುದರಿಂದ, ತಮ್ಮ ಆಯುಷ್ಯಕ್ಕೆ ಕೊನೆಯ ರೇಷೆಯನ್ನು ತೋರಿಸಲಿಕ್ಕೆಂದು ನಾನೇ ಬಂದಿದ್ದೇನೆ. "

" ಹೇಳಿ ಕೇಳಿ ಹೇಡಿ ನೀನು ! ನಿನ್ನ ಕಡೆಯಿಂದ ಏನಾದೀತು ? ಈ ಮಂಗಲಸಮಯದಲ್ಲಿ ವ್ಯರ್ಥವಾಗಿ ಒಂದು ಜೀವವಧೆಯನ್ನು ಮಾಡಗೊಡಬೇಡ. ಜಕ್ಕ ಬರುವ ವರೆಗೆ ಸುಮ್ಮಗೆ ನಿಂತುಕೊಂಡಿರು ! ಬಳಿಕ ನಿನ್ನ ಕತ್ತಲೆಯ ಮನೆ ನಿನಗೆ ಕಟ್ಟಿಟ್ಟಿದೆ ! "

ರಾಜಶೇಖರನು ಒಮ್ಮೆಲೆ ನಡುಪಟ್ಟಿಯಿಂದ ಕಿರುಗತ್ತಿಯನ್ನು ಹಿರಿದು ಹೇಳಿದನು :

"ಚಿಕ್ಕಪ್ಪಾಜಿ, ವಿಜಯನಗರವು ಇನ್ನು ಮಂಗಲಸಮಯವನ್ನು ಕಾಣಬೇಕಾಗಿದ್ದರೆ, ನಿಮ್ಮ ಪಾತಕದ ಕಾರ್‌ನೆತ್ತರನ್ನು ಹರಿಸದೆ ಗತ್ಯಂತರವಿಲ್ಲ; ನಿಮ್ಮೊಬ್ಬರ ನೆತ್ತರು ಹರಿಯದಿದ್ದಲ್ಲಿ, ನಾಡಿನೊಳಗೆ ಲಕ್ಷಾವಧಿ ಪ್ರಜೆಗಳ ನೆತ್ತರು ಹರಿಯಬೇಕಾದ ಸಂದರ್ಭವಿದೆ ; ಆ ಸಂದರ್ಭ ತಪ್ಪಿಸಲಿಕ್ಕೆಂದು ಭುವನೇಶ್ವರಿಯು ನಿಮ್ಮನ್ನು ಬಲಿಯಾಗಿ ಅಪೇಕ್ಷಿಸಿದ್ದಾಳೆ. ಹೋಗಿರಿ; ಪರಲೋಕದಲ್ಲಿ ನಿಮಗೆ ಒಳ್ಳೆಯ ಗತಿಯು ದೊರೆಯಲೆಂದು ನನ್ನ ಆಶೆ!"

ಮಾತಿನ ಕೊನೆಯೊಡನೆಯೆ ಕಿರುಗತ್ತಿಯು ವಿರೂಪಾಕ್ಷರಾಯನ ಎದೆಯಲ್ಲಿ ಸೇರಿತು. ವಿರೂಪಾಕ್ಷರಾಯನು ಆಯುಧಕ್ಕಾಗಿ ಪ್ರಸಾಧನ ಶಾಲೆಯಲ್ಲಿ ಅತ್ತಿತ್ತ ಅಡ್ಡಾಡಿ, ಮುಂದುಗಾಣದೆ, ಬಾಗಿಲಲ್ಲಿ ನಿಂತಿದ್ದ ರಾಜಶೇಖರನನ್ನು ನೂಕಿ ಹೊರಕ್ಕೆ ಹೋಗಬೇಕೆಂದಿದ್ದ. ಅಷ್ಟರಲ್ಲಿಯೆ ರಾಜಶೇಖರನ ಕಿರುಗತ್ತಿಯೇಟು ಅವನೆದೆಗೆ ಬಿದ್ದಿತು. 'ಅಯ್ಯೋ!' ಎಂದು ಕಿಟ್ಟನೆ ಕಿರಿಚಿಕೊಂಡು ರಾಯನು ಕೆಳಕ್ಕೆ ಬಿದ್ದುಬಿಟ್ಟ. ನೆತ್ತರು ಕಾರಂಜಿಯಂತೆ ನಾಲ್ಕು ಕಡೆಗೆ ಪುಟಿದು, ಅಲ್ಲಿಯೆ ಕೆಳಕ್ಕೆ ತೆಗೆದಿಟ್ಟಿದ್ದ ಮಂಗಲಪ್ರಸಾಧನಗಳನ್ನು ನನೆಯಿಸಿಬಿಟ್ಟಿತು. ರಾಜಶೇಖರನು, ನೆಟ್ಟಿದ್ದ ಕತ್ತಿಯನ್ನು ಕಸುವಿನಿಂದ ಕಿತ್ತು ತೆಗೆದು, ಇನ್ನೊಂದು ಏಟನ್ನು ಅಲ್ಲಿಯೆ ಕೊಟ್ಟು "ಜಯಪಂಪಾಪತೆ! ಜಯಭುವನೇಶ್ವರಿ!" ಎಂದು ಕೂಗುತ್ತ ಅಲ್ಲಿಂದ ಹೊರಟು ಬಿಟ್ಟ.

ಅರಮನೆಯಲ್ಲಿ ಎಲ್ಲೆಲ್ಲಿಯೂ ಕೂಗು ಕೇಳಿಸಿತು:

"ಜಯ ಪಂಪಾಪತೇ! ಜಯ ಭುವನೇಶ್ವರೀ!"

ನಗರದ ಬೀದಿಬೀದಿಗಳಲ್ಲಿದ್ದ ನಗರರಕ್ಷಕರೂ ಕೂಗಲು ತೊಡಗಿದರು:

"ಜಯ ಪಂಪಾಪತೇ! ಜಯಭುವನೇಶ್ವರೀ!"

ಈ ಕೂಗು ಏತಕ್ಕಾಗಿ ಇದ್ದೀತೆಂಬುದು ನಗರದ ಜನರಾರಿಗೂ ಗೊತ್ತಾಗಲಿಲ್ಲ ; ಗೊತ್ತುಮಾಡಿಕೊಳ್ಳಬೇಕೆಂಬ ಆತುರವಿದ್ದವರು ಅಲ್ಲಲ್ಲಿಯ ನಗರರಕ್ಷಕರನ್ನು ಕೇಳಿದರೆ "ನಾಸೀರ್‌ಮಹಮ್ಮದ್‌ಖಾನರು

ಮಗಳೊಂದಿಗೆ ಮಹಾರಾಜರ ಮದುವೆಯಾಯಿತು!" ಎಂದು ಹೇಳಿದರು.

ಕೇಳಿದವರೆಲ್ಲರೂ ಆಶ್ಚರ್ಯದಿಂದ ಉದ್ಗಾರ ತೆಗೆಯುವರು:

"ಅಯ್ಯೋ! ಮದುವೆಗೆ ಇನ್ನೂ ಅವಕಾಶವಿದೆಯೆಂದಿದ್ದೆವಲ್ಲ! ಇಲ್ಲದಿದ್ದರೆ ನಾವೂ ಸಮಾರಂಭ ನೋಡಲು ಹೋಗಬಹುದಾಗಿದ್ದಿತು! ಹೋಗಲಿ, ವಧೂವರರ ಮೆರವಣಿಗೆಯನ್ನಾದರೂ ನೋಡೋಣ!"

---

## ೨೭ನೆಯ ಪರಿಚ್ಛೇದ

ವಿಜಯನಗರದ ಅರಸುಮನೆತನದವರ ಅಂತ್ಯವಿಧಿಗೆಂದು ನಿಯಾಮಕವಾಗಿದ್ದ ಸ್ಮಶಾನಭೂಮಿಯಲ್ಲಿ, ಇಂದು ಜನರ ನೆರವಿಯೇ ನೆರವಿ! ರಾಜಧಾನಿಯಲ್ಲಿದ್ದ ಹೆಂಗುಸರು ಮಕ್ಕಳು, ಮುದುಕರು ಹರಯದವರು, ಬಡವರು ಬಲ್ಲಿದರು ಎಲ್ಲರೂ ಹಿಂಡುಹಿಂಡಾಗಿ ನೆರೆದಿದ್ದರು. ದೂರದಿಂದ ಕೇಳುವವರಿಗೆ ಜನಸಮಾಜದ ಸೊಲ್ಲು, ಸಮುದ್ರದ ಮೊರೆತದಂತೆ ಕೇಳುತ್ತಿರುವುದು. 'ಆ ಮಹಾತಾಯಿಯನ್ನು ನೋಡಬೇಕು!' ಎಂಬ ತವಕದ ನುಡಿಯು ನೆರವಿಯಲ್ಲಿ ಎಲ್ಲೆಲ್ಲಿಯೂ ಕಿವಿಗೆ ಬೀಳುತ್ತಿದ್ದಿತು. ವಿರೂಪಾಕ್ಷರಾಯನ ಮದುವೆಯ ಮೆರವಣಿಗೆಯನ್ನು ನೋಡಬೇಕೆಂಬ ಆತುರದಿಂದ, ನಿನ್ನೆಯ ರಾತ್ರಿಯೆಲ್ಲವೂ ಕಣ್ಣಿಗೆ ಕಣ್ಣು ಹಚ್ಚದೆ ಕುಳಿತಿದ್ದ ಪುರಜನರು, ಇಂದು ಸ್ಮಶಾನವೈರಾಗ್ಯದ ಭಾವನೆಯಿಂದ, ವಿರೂಪಾಕ್ಷರಾಯನ ಅಂತ್ಯಯಾತ್ರೆಯನ್ನು ನೋಡುವ ಕೂತೂಹಲದಿಂದ, ಗುಂಪುಗಟ್ಟಿಕೊಂಡು ಇನ್ನೂ ಅಲ್ಲಿಗೆ ಬಂದೇ ಬರುತ್ತಿದ್ದರು.

ಹಗಲು ಒಂದು ಪ್ರಹರಕ್ಕೆ ಬಂದಿರಬಹುದು; ವಿರೂಪಾಕ್ಷರಾಯನ ದೇಹದಹನಕ್ಕಾಗಿ ನಿರ್ಮಿಸಿದ್ದ ಚಿತೆಯ ಕುಂಡವು, ಉರಿಯನಾಲಗೆಗಳನ್ನು ಮೇಲಕ್ಕೆ ಎತ್ತಿ ಕುಣಿಸುತ್ತಿದ್ದಿತು. ಪುರೋಹಿತರು ವಿಧ್ಯುಕ್ತವಾಗಿ

ಮಂತ್ರಾಗ್ನಿಯು ಕರ್ಮವನ್ನು ಮಾಡಿಸುತ್ತಿದ್ದರು. ರಾಯನಿಗೆ ಗಂಡುಸುಮಕ್ಕಳಿಲ್ಲದುದರಿಂದ, ರಾಜಶೇಖರನ ತಮ್ಮ ಪೆದ್ದಣ್ಣನೆ ಕರ್ಮಾಧಿಕಾರಿಯಾಗಿ ಕುಳಿತಿದ್ದನು. ಸಮೀಪದಲ್ಲಿಯೆ ಕುಳಿತುಕೊಂಡಿದ್ದ ಅಧಿಕಾರಿಗಳ ಸಮೂಹದಲ್ಲಿ, ಮೊನ್ನೆಯ ಇರುಳು ಮಾಯವಾಗಿ ಹೋಗಿದ್ದ ವೆಂಕಟನಾಯಕನೂ ದಳವಾಯಿ ದೇವಣ್ಣನಾಯಕನೂ ಮುಂಗಡೆಯಲ್ಲಿಯೆ ಕಾಣುತ್ತಿದ್ದರು. ವೆಂಕಟನಾಯಕನ ಮುಖವು ಆಗ ತೀರ ಹುಚ್ಚನಂತೆ ತೋರುತ್ತಿದ್ದಿತು. 'ತಾನೀಗ ಕುಳಿತುದೆಲ್ಲಿ? ಇಲ್ಲಿ ನಡೆದುದೇನು?' ಎಂಬುದರ ಅರಿವೇ ಆತನಿಗಿದ್ದಂತೆ ಎನಿಸುತ್ತಿರಲಿಲ್ಲ. ರಾಜಶೇಖರನು ಮಾತ್ರ ಅಲ್ಲಿಗೆ ಬಂದಿದ್ದನೋ ಇಲ್ಲವೋ; ಎಲ್ಲಿಯೂ ಆತನ ಮುಖದ ದರ್ಶನವಿರಲಿಲ್ಲ.

ಶವವನ್ನೆತ್ತಿ ಚಿತೆಯ ಮೇಲೆ ಇಟ್ಟಾಯಿತು. ಸರ್ವಭಕ್ಷಕನಾದ ಅಗ್ನಿಗೆ,ಅನೇಕ ಜನರಿಗೆ ಬೇಡವಾಗಿದ್ದ ವಿರೂಪಾಕ್ಷರಾಯನೂ ಬೇಕಾದವನೆನಿಸಿದನೇನೋ! ನೋಡುನೋಡುತ್ತಿರುವಾಗಲೆ ಹೆಣವು ಬೆಂದು ಸಿಮಿಸಿಮಿಗುಟ್ಟಿತು; ಕರಿಕುಕರಿಕಾಯಿತು; ಬೇರೆ ಬೇರೆ ಅವಯವಗಳು ಸುಟ್ಟು ಸುಟ್ಟು, ಮೂಳೆ ಕೂಡ ಬೂದಿಯಾಗಲು ತೊಡಗಿತು. ನೋಡುತ್ತಿದ್ದ ಜನರು, ಸತ್ತ ಹಾವು-ಚೇಳುಗಳನ್ನೂ ಕಂಡು 'ಪಾಪ!' ಎಂದು ಕಳವಳಪಡುವ ಸಾಮಾನ್ಯಸ್ವಭಾವದಂತೆ—ಮರುಗಿ ನಿಟ್ಟುಸಿರಿಟ್ಟರು. ವಿರೂಪಾಕ್ಷರಾಯನಿಂದ ನಿಜವಾಗಿ ಉಪಕಾರವನ್ನು ಹೊಂದಿದ್ದ ಕೆಲವು ಒಳ್ಳೆಯ ಜನರು, ಕೃತಜ್ಞತಾಬುದ್ಧಿಯಿಂದ ಕರುಣೆಯ ಕಣ್ಣೀರನ್ನು ಕರೆದರು.

ಶವದಹನವಾದೊಡನೆಯೆ ಅದೇ ಚಿತೆಯಲ್ಲಿ ವಿರೂಪಾಕ್ಷರಾಯನ ಹೆಂಡಂದಿರು 'ಸತಿ' ಹೋಗುವವರು. ಅದರ ಸಿದ್ಧತೆ ನಡೆಯಿತು. ಹೇಮಾಂಬಿಕೆಯನ್ನೊಡಗೊಂಡು ಆರುಜನ ರಾಣಿಯರು 'ಸತಿ' ಹೋಗುವವರು. ಎಲ್ಲರೂ ಬಂದು ಚಿತೆಯ ಬಳಿಯಲ್ಲಿ ನಿಂತರು. ಆ ನೋಟ ಕರುಣಾಭೀಕರವಾದುದು. ಎಲ್ಲರೂ ಉಟ್ಟುದು ಕೇಸರಿಯ ಬಣ್ಣದ ಸೀರೆ; ಹಣೆಯ ಮೇಲೆ ಪಟ್ಟೆಪಟ್ಟೆ ಕುಂಕುಮ; ಕೊರಳಲ್ಲಿ ನಿಷಿದ್ಧಪುಷ್ಪದ ಹಾರಗಳು; ಬಿಚ್ಚಿಬಿಟ್ಟಿದ್ದ ತಲೆಗೂದಲುಗಳು.

ಪುರೋಹಿತರು ಬೇರೆ ಬೇರೆ ಮಂತ್ರಗಳನ್ನು ಹೇಳಿ, ಅವರವರು ಮಾಡಬೇಕಾಗಿದ್ದ ಕರ್ಮಗಳನ್ನು ರಾಣಿಯರಿಂದ ಮಾಡಿಸಲು ತೊಡಗಿದರು. ಜನರೆಲ್ಲರದೂ ಹೇಮಾಂಬಿಕೆಯ ಕಡೆಗೆ ಕಳವಳದ ಕಣ್ಣು. ಆಗ ಆಕೆಯ ಮುಖದಲ್ಲಿ ಸ್ಥೈರ್ಯ-ಗಾಂಭೀರ್ಯಗಳು ನೆಲಸಿಕೊಂಡಿದ್ದುವು. ಮುಕ್ತರಾದವರ ಶಾಂತಿಯ ಲಕ್ಷಣ ಹೇಳುವರಲ್ಲ, ಅಂತಹ ಲಕ್ಷಣ ಹೇಮಾಂಬಿಕೆಯ ಅಂಗಾಂಗಗಳಲ್ಲಿಯೂ ಒಡೆದು ಕಾಣುತ್ತಿದ್ದಿತು. ಹೆಂಗುಸರ ಗುಂಪಿನಲ್ಲಿ ಕಣ್ಣೀರ ಮಳೆ ಸುರಿಯ ತೊಡಗಿತು ; ಅಳುವ ಬಿಕ್ಕುವ ಸಪ್ಪುಳು, ಶೋಕಸಾಗರದ ಘೋಷ ದಂತೆ ಕೇಳಲು ತೊಡಗಿತು.

ಎಲ್ಲ ವಿಧಿಗಳೂ ಮುಗಿದುವು ; 'ಸತಿ' ಹೋಗಲಿರುವ ರಾಣಿಯ ರೆಲ್ಲರೂ ಸಾವಿರಾರು ಜನ ಸುಮಂಗಲೆಯರಿಗೆ ಬಗೆಬಗೆಯ ಮಂಗಲ ದ್ರವ್ಯಗಳನ್ನು ದಾನಮಾಡಿ ಆಯಿತು. ಇನ್ನು ಮೇಲೆ ಚಿತಾರೋಹಣ ವಾಗಬೇಕು. ಅಷ್ಟರಲ್ಲಿಯೆ ದೊಡ್ಡ ದೊಡ್ಡ ಮನೆತನದ ಕೆಲವು ಮಂಗಲವತಿಯರು, ರಾಣಿಯರ ದರ್ಶನಕ್ಕಾಗಿ ಬಂದರು. ಅವರಲ್ಲಿ ಹೇಮಾಂಬಿಕೆಯ ತಾಯಿ ಗೌರಾಂಬಿಕೆಯೂ ಇದ್ದಳು. ಬಂದವರೆಲ್ಲರೂ—ಒಬ್ಬರ ಹಿಂದೆ ಒಬ್ಬರಂತೆ—ಸತಿಯರಿಗೆ ಅರಿಸಿಣ-ಕುಂಕುಮ ಕೊಟ್ಟು, ಬಲಗೊಂಡು, ನಡೆಯಲು ತೊಡಗಿದರು. ಎಲ್ಲರಂತೆಯೆ ಅರಿಸಿಣ ಕುಂಕುಮ ಕೊಡುತ್ತ, ಗೌರಾಂಬಿಕೆಯು ಹೇಮಾಂಬಿಕೆಯ ಬಳಿಗೆ ಬಂದಳು. ಸತಿಹೋಗುವವರಿಗಾಗಿ ಅಳಬಾರದೆಂದು ಧರ್ಮನಿಯಮ. ಗೌರಾಂಬಿ ಕೆಯ ಅಳುವನ್ನು, ಧರ್ಮಪ್ರೀತಿ ಒಳಕ್ಕೆ ಒತ್ತುತ್ತಲಿದ್ದಿತು; ತಾಯಿಯ ಕರುಳು ಹೊರಕ್ಕೆ ಒತ್ತುತ್ತಲಿದ್ದಿತು. ಈ ಒತ್ತಾಟದಲ್ಲಿ ಯಾವುದಕ್ಕೆ ಗೆಲವು ದೊರೆಯಿತೊ ಎಂಬುದು ತಿಳಿಯಲಿಲ್ಲ; ಬಾಯಿಬಿಚ್ಚಿ ಅಳುತ್ತಿರ ಲಿಲ್ಲವಾದರೂ ಕಂಬನಿ ಆಕೆಯ ಗಲ್ಲದ ಮೇಲೆ ಧಾರೆಗೊಂಡಿದ್ದಿತು. ಆಕೆ ಎದುರಿಗೆ ಬಂದಾಗ ಹೇಮಾಂಬಿಕೆ ಕೇಳಿದಳು :

"ಅಮ್ಮಾ ! ಅಳುತ್ತೀಯಾ ?"

ನಡುಗುವ ಧ್ವನಿಯಲ್ಲಿಯೆ ಗೌರಂಬಿಕೆ ಹೇಳಿದಳು.

"ಇಲ್ಲವಮ್ಮಾ, ಎಂದೂ ಅಳುವುದಿಲ್ಲ !"

ಬೇಗನೆ ಅರಿಸಿಣ-ಕುಂಕುಮಕೊಟ್ಟು, ಗೌರಾಂಬಿಕೆ ಮತ್ತೊಂದು ಸಲ ಮಗಳ ಮುಖವನ್ನು ನೋಡಿ, ಅಲ್ಲಿ ನಿಲ್ಲದೆ ಹೊರಟು ಬಿಟ್ಟಳು.

ಇದ್ದುದಿದ್ದ ಹಾಗೆಯೆ ವೆಂಕಟನಾಯಕನು ಮೇಲಕೆದ್ದ. ಏನೂ ಮಾತನ್ನಾಡದೆ ಹೇಮಾಂಬಿಕೆಯ ಅಡಿಗಳೆಡೆಯಲ್ಲಿ ಬಿದ್ದು ಹೊರಳಾಡಲು ತೊಡಗಿದ. ಅಳುವುದಿಲ್ಲ, ಕರೆವುದಿಲ್ಲ; ಬಾಯಿಂದ ಒಂದೇ ಸವನೆ ಗುಣುಗುಣಿಸುತ್ತಿದ್ದ :

" ಹೇಮಾಂಬಿಕೆ.... ! ನನ್ನ ಹೇಮಾಂಬಿಕೆ.... ! ನನ್ನ ಹೇಮಾಂಬಿಕೆ.... ! "

ಹೇಮಾಂಬಿಕೆಯ ಮುಖದ ಸ್ಥೈರ್ಯ, ಧೈರ್ಯ, ಶಾಂತಿ, ಎಲ್ಲವೂ ಈಗ ಮರೆಯಾಗಿ ಬಿಟ್ಟಿತು. ಕಣ್ಣಿಂದ ಕಂಬನಿ ಕೆಳಕ್ಕಿಳಿಯಿತು. ತಂದೆಯನ್ನು ಮೇಲಕ್ಕೆ ಎತ್ತಿಹಿಡಿದು, ಮೈಮೇಲೆ ಕೈಯಾಡಿಸುತ್ತ ಹೇಳಿದಳು.

" ಅಪ್ಪಾಜೀ ! ನನ್ನ ವಿಷಯಕವಾಗಿದ್ದ ನಿಮ್ಮ ಪ್ರೀತಿ, ಇನ್ನು ಮೇಲೆ ವಿಜಯನಗರದ ಸಾಮ್ರಾಜ್ಯಕ್ಕಾಗಿ ವಿನಿಯೋಗವಾಗಲಿ ! "

ಪೆದ್ದಣ್ಣನು ಬಂದು ಎಲ್ಲ ರಾಣಿಯರನ್ನೂ ನಮಸ್ಕರಿಸಿ, ವೆಂಕಟನಾಯಕನನ್ನು ಕೈಹಿಡಿದು ಒಂದು ಬದಿಗೆ ಕರೆದುಕೊಂಡು ಹೋದನು. ಬಳಿಕ ನರಸಿಂಹನಾಯಕನು ಬಂದು ಎಲ್ಲ ರಾಣಿಯರನ್ನೂ ಭಕ್ತಿಯಿಂದ ನಮಸ್ಕರಿಸಿದ. ಹೇಮಾಂಬಿಕೆಯ ಬಳಿಗೆ ಬಂದು ನಿಂತಾಗ ಅವಳನ್ನು ಕೇಳಿದ :

" ಏನಾದರೂ ಹೇಳಬೇಕಾಗಿದೆಯೆ ? "

ಹೇಮಾಂಬಿಕೆಯು ಸ್ವಾಭಾವಿಕವಾಗಿಯೆ ಹೇಳಿದಳು :

" ನಾನೇನು ಹೇಳಬೇಕಾಗಿದೆ ! ನೀವೆಲ್ಲರೂ ಬಂದಿದ್ದೀರಿ; ವಿಜಯನಗರದ ವಿಷಯದಲ್ಲಿ ಇನ್ನು ಯಾವ ಹೆದರಿಕೆಯೂ ಇಲ್ಲವೆಂದು ನಾನು ನಂಬಿಬಿಟ್ಟಿದ್ದೇನೆ. . ರಾಜಶೇಖರ ಇಲ್ಲಿ ಬಂದಿಲ್ಲವೇ ? "

" ಇಲ್ಲ, ಬಂದಿಲ್ಲ ! ನಾನು ಬರುವುದಕ್ಕೆ ಎಷ್ಟೋ ಒತ್ತಾಯಪಡಿಸಿದೆ. ಅವರು ಅದೇತಕ್ಕೋ ಏನೋ, ಬರಲು ಸಮ್ಮತಿಸಲಿಲ್ಲ ! "

ಹೇಮಾಂಬಿಕೆಯ ನೋಟ ಒಳಕ್ಕೆ ತೆರಳಿದುವು. ನಿಟ್ಟುಸಿರು ತಡೆಯದೆ ಹೊರಕ್ಕೆ ಹೊರಟಿತು. ನರಸಿಂಹನಾಯಕನು ಹೇಮಾಂಬಿಕೆಗೆ ನಮಸ್ಕರಿಸಿ ಪಕ್ಕಕ್ಕೆ ಸರಿದ. ಎಲ್ಲ ರಾಣಿಯರೂ ಒಬ್ಬೊಬ್ಬರಾಗಿ ತಮ್ಮ ದೇಹಗಳನ್ನು ಚಿತೆಯಲ್ಲಿ ಈಡಾಡಲು ತೊಡಗಿದರು. ಎಲ್ಲಕ್ಕೂ ಕೊನೆಯಲ್ಲಿ '**ಜಯ! ಕರ್ಣಾಟಲಕ್ಷ್ಮೀ!**' ಎಂದು ಜಯಘೋಷವಾಡಿ, ಹೇಮಾಂಬಿಕೆಯೂ ಚಿತೆಯನ್ನೇರಿ ಕುಳಿತಳು.

ದೂರದಲ್ಲಿಯೆ ನಿಂತು ನೋಡುತ್ತಿದ್ದ ದಿಲಾವರ್ ಖಾನನು ಕಣ್ಣೀರು ಸುರಿಸುತ್ತ, ಕಳವಳದ ರೋಷದಲ್ಲಿ ಗೊಣಗುತ್ತಿದ್ದ:

"ಕರ್ನಾಟಕದ ಜನರಲ್ಲಿ ಇದೊಂದು ತೀರ ದುಷ್ಟಪದ್ಧತಿ!"

ಜನರ ನೆರವಿಯಿಂದ 'ಘೋ! ಘೋ!' ಎಂಬ ಕೂಗು ಒಂದೇ ಸಮನೆ ಕೇಳಬರುತ್ತಿದ್ದಿತು.

---

## ೨೮ ನೆಯ ಪರಿಚ್ಛೇದ

ಅಂದೆಯೆ ಇಳಿಯಬಿಸಿಲಿನ ವೇಳೆಯಲ್ಲಿ ನರಸಿಂಹನಾಯಕನು ರಾಜಶೇಖರನ ಮಂದಿರದ ಕಡೆಗೆ ಬಂದ; ಆಗ ರಾಜಶೇಖರನು ಉದಾಸೀನಮನಸ್ಕನಾಗಿ, ಮಲಗಿದ್ದ ಹಸುವೊಂದರ ಗಂಗೆದೊವಲನ್ನು ನಿಧಾನವಾಗಿ ತುರಿಸುತ್ತ ಕುಳಿತುಕೊಂಡಿದ್ದನು. ಹಸುವು ಗೋಣನ್ನು ಮೇಲಕ್ಕೆತ್ತಿ, ಸ್ನೇಹಭಾವದಿಂದ ರಾಜಶೇಖರನ ಹೆಗಲ ಮೇಲೆ ಮುಖವನ್ನು ಇರಿಸಿ, ಸುಮ್ಮಗೆ ಬಿದ್ದುಕೊಂಡಿದ್ದಿತು. ನರಸಿಂಹನಾಯಕನು ಬಂದೊಡನೆಯೆ, ರಾಜಶೇಖರನು ಹಸುವಿನ ಮುಖವನ್ನು ಮೆಲ್ಲಗೆ ಬದಿಗೆ ಸರಿಸಿ ಮೇಲಕ್ಕೆದ್ದನು. ಇಬ್ಬರೂ ಕೂಡಿ ಓಲಗಸಾಲೆಯೊಳಕ್ಕೆ ಬಂದು, ಹಾಸಿದ್ದ ರತ್ನಗಂಬಳಿಯೊಂದರ ಮೇಲೆ ಕುಳಿತುಕೊಂಡರು. ರಾಜಶೇಖರನು ಕೇಳಿದ:

" ಅಂತ್ಯವಿಧಿಯು ಸುಸೂತ್ರವಾಗಿ ಕೊನೆಗಂಡಿತೇ? "

" ಎಲ್ಲವೂ ಸರಿಯಾಗಿ ನಡೆಯಿತು, ಇನ್ನು ಬರಿಯದಾಗಿದ್ದ ಸಾಮ್ರಾಜ್ಯಸಿಂಹಾಸನವು ನಿಮ್ಮಿಂದ ತುಂಬಿಕೊಳಬೇಕು.. ಇಷ್ಟೇ! "

ರಾಜಶೇಖರನು ಮೆಲುನಗೆ ನಗುತ್ತ ಕೇಳಿದನು:

" ನನ್ನಿಂದ ತುಂಬಿಕೊಳಬೇಕೇ ಸಿಂಹಾಸನ? "

" ಇನ್ನಾರು ಯೋಗ್ಯರಿದ್ದಾರೆ ನೀವೇ ಹೇಳಿ! "

ಒಂದು ನಿಮಿಷ ತಡೆದು ರಾಜಶೇಖರನು ಹೇಳಲು ತೊಡಗಿದನು:

" ನೋಡಿ ನಾಯಕರೆ! ಚಿಕ್ಕಪ್ಪನೆಂದರೆ ಪಿತೃವರ್ಗದಲ್ಲಿ ಸೇರ-ಬೇಕಾಗಿದ್ದವನು. ಅಂತಹನನ್ನು–ಯಾವ ಕಾರಣದಿಂದಲೆ ನಾನು ಕೊಲೆ ಮಾಡಿರಲಿ– 'ಪಿತೃಘಾತಕಿ' ಎಂಬ ಪದವಿ ನನಗೆ ತಪ್ಪದು. ಆ ಪಾತಕದ ಪದವಿಯ ಮೈಲಿಗೆಯನ್ನು ನಮ್ಮ ಕರ್ಣಾಟಸಿಂಹಾಸನಕ್ಕೆ ತಗಲಗೊಡ ಬಾರದೆಂದು ನನ್ನ ಅಪೇಕ್ಷೆ. ಇಂದಲ್ಲದೆ ಹೋದರೂ ವಿಜಯನಗರದ ಇತಿಹಾಸವನ್ನು ಕೇಳುವ ಮುಂದಿನ ಜನರ ಕಲ್ಪನೆ 'ರಾಜ್ಯದಾಶೆಯಿಂದ ಚಿಕ್ಕಪ್ಪನನ್ನು ಕೊಂದು ಸಿಂಹಾಸನವನ್ನೇರಿದನೀತ!' ಎಂದಾಗಬಾರದು! ವರ್ತಮಾನಕ್ಕಿಂತಲೂ ಬರಲಿರುವ ಕಾಲಕ್ಕೆ ಹೆದರಬೇಕಾದುದು ಮನುಷ್ಯತ್ವದ ಲಕ್ಷಣ! ಇಂದಿನ ಈ ನನ್ನ ಕೃತಿಗೆ, ಬರಲಿರುವ ಕಾಲ ಎಂತಹ ಬಣ್ಣ ಬಳಿದುಬಿಡುವುದೋ ಹೇಳಲಿಕ್ಕೆ ಬಾರದು; ಆದುದರಿಂದ ಸಿಂಹಾಸನವೇರುವ ಅಧಿಕಾರವು ನನಗಿಲ್ಲ! "

" ಹಾಗಾದರೆ ಆ ಅಧಿಕಾರಕ್ಕೆ ಯಾರು ತಕ್ಕವರೆಂದು ಹೇಳುತ್ತೀರಿ? "

" ಪೆದ್ದಣ್ಣನಿದ್ದಾನೆ; ಸಿಂಹಾಸನಕ್ಕೆ ಅಧಿಕಾರಿಯಾಗುವ ಗುಣ-ಗಳು ಅವನಲ್ಲಿ ಇವೆಯೋ ಇಲ್ಲವೋ ನೋಡಿ! ಇದ್ದರೆ ಅವನನ್ನು ದೊರೆಯನ್ನಾಗಿ ಮಾಡಿಬಿಡಿ! "

" ನೀವು ಒಲ್ಲೆನೆಂದಮೇಲೆ, ಪೆದ್ದಣ್ಣನ ಹೊರತು ಅರಸುಮನೆತನದವರು ಬೇರೆ ಯಾರಿದ್ದಾರೆ? "

ರಾಜಶೇಖರನು ಬೇರೆ ಮಾತಿಗೆ ಬಂದು ಕೇಳಿದ:

" ನಾಯಕರೇ, ನಾಷೀರ್‌ಮುಹಮ್ಮದನು ಏನೆನ್ನುತ್ತಿದ್ದಾನೆ ? "

" ಏನೆನ್ನುವನು ? ಅವನನ್ನೂ ಅವನ ಪರಿವಾರದವರನ್ನೂ ದಿಲಾವರ್ ಖಾನನ ಕಡೆಗೆ ಒಪ್ಪಿಸಿಕೊಡಲಾಗಿದೆ. ಅವನ ಮನೆಯ ಸುತ್ತಲೂ ದಂಡಾಳುಗಳ ಕಾವಲಿದೆ."

" ಸರಿ ! ಅವನಿಗೆ ಇನ್ನಾವ ತೊಂದರೆಯನ್ನೂ ಕೊಡದೆ, ಅವನ ಬದುಕು-ಭಾಗ್ಯದೊಂದಿಗೆ– ಸುರಕ್ಷಿತವಾಗಿ– ಕಲಬುರ್ಗೆಗೆ ಅವನನ್ನು ಕಳುಹಿಬಿಡಬೇಕೆಂದು ನನ್ನ ಬಯಕೆ. ರಾಜಕಾರ್ಯದ ದೃಷ್ಟಿಯಿಂದ ನೋಡಿದರೆ, ನಾವೆಲ್ಲರೂ ಮಾಡಬಹುದಾಗಿದ್ದ ಅಪರಾಧವನ್ನೇ ಅವನೂ ಮಾಡಿದ್ದಾನೆ. ನಮ್ಮ ಜನರಲ್ಲಿ ಅವನಲ್ಲಿದ್ದಂತಹ ಸ್ವಧರ್ಮಾಭಿಮಾನ ಸ್ವಜನಾಭಿಮಾನಗಳು ಇದ್ದದ್ದಾಗಿದ್ದರೆ, ಇಂತಹ ವಿಷಮ-ಸಂದರ್ಭ ನಮಗೆ ಬರುತ್ತಿರಲೇ ಇಲ್ಲ! "

" ಅಣ್ಣಾಜಿ, ನನ್ನ ಅಭಿಪ್ರಾಯವೂ ನಿಮ್ಮಂತೆಯೆ ಇದೆ. ದಿಲಾ-ವರನ ಎದುರು ಈ ಮಾತನ್ನು ಹೇಳಿದ್ದೇನೆ ಕೂಡ. ನಾಷೀರ್‌ಖಾನನನ್ನು ಸುಖಸಮಾಧಾನಗಳಿಂದ ಕಲಬುರ್ಗೆಗೆ ಕಳುಹಿಬಿಡೋಣ ! "

ರಾಜಶೇಖರನು ನರಸಿಂಹನಾಯಕನ ಮಾತುಗಳನ್ನು ಪೂರ್ಣ ಮನಸ್ಸಿನಿಂದ ಕೇಳಿದನೋ ಇಲ್ಲವೋ, ಆತನ ಮನಸ್ಸು ಯಾವುದೋ ಯೋಚನೆಯ ಬೆನ್ನನ್ನು ಹತ್ತಿದ್ದಿತು. ನಾಯಕನ ಮಾತು ಮುಗಿದು ಮೂರು ನಾಲ್ಕು ನಿಮಿಷಗಳಾದರೂ ರಾಜಶೇಖರನು ಸುಮ್ಮಗೆ ಇದ್ದನು. ಕೊನೆಗೆ ಕಳವಳದ ನೋಟದಿಂದ ನಾಯಕನನ್ನು ಒಂದೇ ಒಂದು ಮಾತು ಕೇಳಿದನು :

" ಹೇಮಾಂಬಿಕೆ ಕೊನೆಗೆ ಏನನ್ನಾದರೂ ಹೇಳಿದಳೇ ನಾಯಕರೆ ?"

" ನಾನು ಕೇಳಿದೆ. ಏನನ್ನೂ ಹೇಳಲಿಲ್ಲ; ' ರಾಜಶೇಖರ ಇಲ್ಲಿ ಬಂದಿಲ್ಲವೇ ? ' ಎಂದು ಕೇಳಿದಳು ಮಾತ್ರ ! "

